

ನಮೋ ಭಗವತೇ ಶಂಕರಾನಂದಾಯ

## ಶ್ರೋತ್ರಿಯ ಬ್ರಹ್ಮನಿಷ್ಠ
## ಶ್ರೀ ಸಾಧು ನಿಶ್ಚಲದಾಸ ಅವರ

# ಶ್ರೀ ವಿಚಾರ ಸಾಗರ

(ಎರಡನೆಯ ಭಾಗ)

ನಾಲ್ಕು ಮತ್ತು ಐದನೆಯ ತರಂಗಗಳು

ಪ್ರಕಾಶಕರು
ಶ್ರೀಸ್ವಾಮಿಶಂಕರಾನಂದ ವಿಶ್ವಸ್ಥ ಸಮಿತಿ (ರಿಜಿಸ್ಟರ್ಡ್)
ಶ್ರೀಶಿವಾನಂದಾಶ್ರಮ
ಅಜ್ಜಂಪುರ (ಕರ್ನಾಟಕ)

1979 ಬೆಲೆ : ರೂ. 5-00

ಪ್ರಥಮ ಮುದ್ರಣ : ನವೆಂಬರ್ ೧೯೬೫ – ೨,೦೦೦ ಪ್ರತಿಗಳು

ದ್ವಿತೀಯ ಮುದ್ರಣ : ಅಕ್ಟೋಬರ್ ೧೯೭೯ – ೨,೦೦೦ ಪ್ರತಿಗಳು



ಮುದ್ರಣ

**ಕೊರ್ಗ್ ಪ್ರಿಂಟಿಂಗ್ ಪ್ರೆಸ್**

ರಾಜಾಮಹಲ್ ಗುಟ್ಟಹಳ್ಳಿ, ಬೆಂಗಳೂರು–೫೬೦ ೦೦೩

॥ ನಮೋ ಭಗವತೆ ಶಂಕರಾನಂದಾಯ ॥

ಓಂ ಗುರುರ್ಬ್ರಹ್ಮಾ ಗುರುರ್ವಿಷ್ಣು ಗುರುರ್ದೇವೋ ಮಹೇಶ್ವರಃ ।
ಗುರುಸ್ಸಾಕ್ಷಾತ್ಪರಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ ॥ ॥೧॥

## ಮಂಗಲಾಚರಣೆ

ಜೋ ಸುಖ ನಿತ್ಯಪ್ರಕಾಶ ವಿಭು, ನಾಮರೂಪ ಆಧಾರ ।
ಮತಿ ನಲಖೈ ಜಿಹಿಮತಿಲಖೈ, ಸೋಮ್ಮೈ ಶುದ್ಧ ಅಪಾರ ॥ ॥೧॥
ಅಬ್ಧಿ ಅಪಾರ ಸ್ವರೂಪ ಮಮ, ಲಹರೀ ವಿಷ್ಣು ಮಹೇಸ ।
ವಿಧಿರವಿ ಚಂದಾ ವರುನ ಯಮ, ಸಕ್ತಿ ಧನೇ ಸ ಗನೇಸ ॥ ॥೨॥
ಜಾಕೃಪಾಲು ಸರ್ವಜ್ಞ ಕೊ, ಹಿಯ ಧಾರತ ಮುನಿಧ್ಯಾನ ।
ತಾಕೋ ಹೋತ ಉಪಾಧಿತೈ, ಮೋ ಮೈ ಮಿಥ್ಯಾಭಾನ ॥ ॥೩॥
ಹ್ವೈ ಜಿಹಿ ಜಾನ್ಯೈ ಬಿನ ಜಗತ, ಮನಹು ಜೇವರಿ ಸಾಪ ।
ನ ಸೈ ಭುಜಗ ಜಗ ಜಿಹಿ ಲಹ್ಯೈ, ಸೋಹಂ ಆಪೇ ಆಪ ॥ ॥೪॥
ಬೋಧ ಚಾಹಿ ಜಾಕೋ ಸುಕೃತಿ, ಭಜತ ರಾಮ ನಿಷ್ಕಾಮ ।
ಸೋ ಮೇರೋ ಹೈ ಆತಮಾ, ಕಾಕೂ ಕರೂ ಪ್ರನಾಮ ॥ ॥೫॥

ಓಂ ತತ್ಸತ್ ಪರಬ್ರಹ್ಮಣೇನಮಃ

ಓಂ ಶಾಂತಿಃ ಶಾಂತಿಃ ಶಾಂತಿಃ

# ಎರಡನೆಯ ಪುನರ್ಮುದ್ರಣದ ಸಮರ್ಪಣೆ

ಯಾವ ಗುರುದೇವರು ಪಾರಮಾರ್ಥಿಕ ವಿದ್ಯಾಪ್ರಸಾರವನ್ನೇ ತಮ್ಮ ಜೀವನದ ಪರಮ ಗುರಿಯನ್ನಾಗಿಟ್ಟುಕೊಂಡಿದ್ದರೋ! ಸರ್ವ ಉಪನಿಷತ್ತುಗಳ ಸಾರಸರ್ವಸ್ವವಾದ ಶ್ರೀಮದ್ಭಗವದ್ಗೀತೆಯ ಪ್ರವಚನಗಳನ್ನು ಅತಿ ರಂಜನೀಯವಾಗಿ ಆಂಧ್ರಪ್ರದೇಶ ಮತ್ತು ಕರ್ನಾಟಕ ಪ್ರಾಂತ್ಯಗಳಲ್ಲಿ ಅವಿರತವಾಗಿ ತಮ್ಮ ಜೀವಿತ ಕಾಲದಲ್ಲಿ ನಾಡಿ "ಗೀತಾಸ್ವಾಮಿ" ಗಳೆಂದು ಪ್ರಖ್ಯಾತರಾಗಿದ್ದರೋ! ಯಾವ ಗುರುದೇವರು ತಮ್ಮ ರಂಜನೀಯ ಪ್ರವಚನಗಳಲ್ಲಿ ಎಲ್ಲಾ ಉಪನಿಷತ್ತುಗಳನ್ನೂ, ಶ್ರೀಮದ್ಭಗವದ್ಗೀತೆಯನ್ನೂ ಹಾಗೂ ಬ್ರಹ್ಮಸೂತ್ರವನ್ನೂ ಬೋಧಿಸಿ, ತಮ್ಮ ಶಿಷ್ಯಕೋಟಿಯ ಅಂತಃಕರಣಗಳ ಮಲ, ವಿಕ್ಷೇಪ, ಆವರಣಗಳೆಂಬ ಮೂರು ದೋಷಗಳೆಂಬ ರೋಗಗಳನ್ನು ವಾಸಿಮಾಡಿ ಜೀವಭಾವದ ಭ್ರಮೆಯನ್ನು ಬಿಡಿಸಿ, ಜೀವನನ್ನು ಶಿವನನ್ನಾಗಿ ಮಾಡಿದರೋ! ಯಾವ ಗುರುದೇವರು ತಮ್ಮ ಶಿಷ್ಯರ ಮೇಲಿನ ಪರಮ ಪ್ರೇಮದಿಂದ ಅದ್ವೈತಿಗಳ ಆಕರ ಗ್ರಂಥವಾದ ವಿಚಾರಸಾಗರದ ತರಬೇತಿ ಶಿಬಿರಗಳನ್ನೇರ್ಪಡಿಸಿದ ಪರಿಣಾಮವಾಗಿ ಈ ಸದ್ಗ್ರಂಥವನ್ನು ಪ್ರಕಟಿಸಿದರೋ, ಹಾಗೂ ಈಗ ಸಕಲ ಅಂತಃಕರಣಗಳಿಗೂ ಸಾಕ್ಷಿರೂಪರಾಗಿ ನಮ್ಮೆಲ್ಲರ ಮೂಲಕ ಆಧ್ಯಾತ್ಮಿಕ ವಿದ್ಯಾಪ್ರಚಾರ ಮಾಡಿಸುತ್ತಿರುವರೋ ಆ ಬ್ರಹ್ಮಲೀನ ಶ್ರೀ ಶ್ರೀ ಶ್ರೀ ಶಂಕರಾನಂದ ಮಹಾಸ್ವಾಮಿಯವರಿಗೆ ಈ ಪುನರ್ಮುದ್ರಣವನ್ನು ಶ್ರದ್ಧೆ ಮತ್ತು ಭಕ್ತಿಗಳಿಂದ ಸಮರ್ಪಿಸುತ್ತಿದ್ದೇವೆ.

—ಪ್ರಕಾಶಕರು



ಶ್ರೀ ಶೃಂಗೇರಿ ಶಾರದಾಪೀಠದ ಶ್ರೀ ಶ್ರೀ ಜಗದ್ಗುರುಗಳವರು
ಶ್ರೀಮದಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳವರ
ಅರವತ್ತಮೂರನೆಯ ಜನ್ಮದಿನೋತ್ಸವ

ಹಾಗೂ

ಪೀಠಾರೋಹಣ ರಜತ ಮಹೋತ್ಸವದ ಶುಭ ನೆನಪಿಗಾಗಿ

# ಎರಡನೆಯ ಪುನರ್ಮುದ್ರಣದ ನಿವೇದನೆ

ಸನಾತನ ಧರ್ಮದ ಧರ್ಮಗ್ರಂಥಗಳು ಉಪನಿಷತ್ತುಗಳು, ಶ್ರೀಮದ್ಭಗವದ್ಗೀತೆ, ಮತ್ತು ಬ್ರಹ್ಮಸೂತ್ರ ಇವುಗಳು. ಇವುಗಳಲ್ಲಿ ಪರಬ್ರಹ್ಮ, ಜೀವ, ಜಗತ್ತುಗಳ ವಿಚಾರವಿದೆ ಅತಿ ಉನ್ನತವಾದ ವಿಚಾರಗಳನ್ನು ಅತಿ ಕಡಿಮೆ ಪದಗಳ ಬಳಕೆಯ ಮಂತ್ರರೂಪದಲ್ಲಿ ಹೇಳಿರುವುದರಿಂದ ಜನಸಾಮಾನ್ಯರಿಗೆ ಅರ್ಥವಾಗುವುದಿಲ್ಲ. ಅನೇಕ ತಪಸ್ವಿಗಳು ಉಪನಿಷತ್ತುಗಳಲ್ಲಿ ಅಡಕವಾಗಿರುವ ವಿಚಾರಧಾರೆಯನ್ನು ಅಧ್ಯಯನ ಮಾಡಿ, ವಿಚಾರ ಮಾಡಿ, ಧ್ಯಾನ ಮಾಡಿ (contemplation) ಉಪನಿಷತ್ತುಗಳ ವಿಚಾರಗಳೇ ತಮ್ಮ ಅನುಭವಕ್ಕೆ ಬಂದಾಗ ತಮ್ಮ ಅನುಭವಗಳನ್ನು ಬರೆದಿಟ್ಟಿದ್ದಾರೆ. ಅಂತಹ ಗ್ರಂಥಗಳೇ ಪ್ರಕರಣ ಗ್ರಂಥಗಳು. ವಿಚಾರಸಾಗರವೂ ಒಂದು ಪ್ರಕರಣ ಗ್ರಂಥವೇ. ವೇದಾಂತಿಗಳಿಗೆ ಇದೊಂದು ಉತ್ತಮವಾದ ಆಕರಗ್ರಂಥ.

ವಿಚಾರಸಾಗರವು ಶ್ರೋತ್ರೀಯ ಬ್ರಹ್ಮನಿಷ್ಠ ಸಾಧು ನಿಶ್ಚಲದಾಸರ ಅಮರಕೃತಿ ಇದನ್ನು ಅವರು ಹಿಂದಿ ಭಾಷೆಯಲ್ಲಿ ದೋಹಗಳ ರೂಪದಲ್ಲಿ ರಚಿಸಿದ್ದಾರೆ ಈ ಅಮರ ಕೃತಿಯ ಪ್ರಯೋಜನವು ಕನ್ನಡಿಗರಿಗೆ ಆಗಲಿ ಎಂಬ ಘನ ಉದ್ದೇಶದಿಂದ ಶ್ರೀ ಶ್ರೀ ಶ್ರೀ ಸ್ವಾಮಿ ಶಂಕರಾನಂದಜಿಯವರು ವಿಚಾರಸಾಗರವನ್ನು ಪ್ರವಚನಕ್ಕಾಗಿ ಆರಿಸಿಕೊಂಡು ಸಹಸ್ರಾರು ಪ್ರವಚನಗಳನ್ನು ಮಾಡಿದರು ಅನೇಕ ತೀವ್ರ ಮುಮುಕ್ಷುಗಳು ಆಳವಾಗಿ ಅಭ್ಯಾಸ ಮಾಡಬೇಕೆಂದು ಶ್ರೀಗಳವರನ್ನು ಪ್ರಾರ್ಥಿಸಿದ ಪ್ರಯುಕ್ತ ತರಬೇತಿ ಶಿಬಿರಗಳನ್ನೇರ್ಪಡಿಸಿದರು. ಅದರ ಪರಿಣಾಮವಾಗಿ ಸಾಗರೋಪಾದಿಯಲ್ಲಿರುವ ವಿಚಾರಗಳು ವಿಚಾರಸಾಗರ ಗ್ರಂಥರೂಪವಾಗಿ ತಿಳಿಗನ್ನಡದಲ್ಲಿ ಘನೀಭೂತವಾಯಿತು. ಈ ಆಕರ ಗ್ರಂಥವನ್ನು ಮೂರು ಭಾಗಗಳಾಗಿ ಶ್ರೀ ಗುರುದೇವರು ಪ್ರಕಟಿಸಿದರು. ಮೊದಲನೆಯ ಭಾಗವು ಎರಡು ಮುದ್ರಣಗಳನ್ನು ಕಂಡಿದೆ. ಎರಡನೆಯ ಭಾಗವು ಎರಡನೆಯ ಮುದ್ರಣವಾಗಿ ಈಗ ತಾನೆ ತಮ್ಮ ಕರ

ಕಮಲದಲ್ಲಿ ಸೇರಿದೆ. ಮೂರನೆಯ ಭಾಗವು ಎರಡನೆಯ ಮುದ್ರಣವಾಗಿ ಸದ್ಯದಲ್ಲಿಯೇ ತಮ್ಮ ಕರಕಮಲದಲ್ಲಿ ಸೇರುವುದು. ತಿಳಿವಳಿಕೆಯ ವಿಪರೀತ ದಿಂದ ಅನೇಕ ಮಾನಸಿಕ ಖಾಯಿಲೆಗಳೂ ಹಾಗೂ ಶಾರೀರಿಕ ಖಾಯಿಲೆಗಳೂ ಅನುಭವವಾಗುತ್ತಿವೆ ಎಂಬುದು ಆಧುನಿಕ ಮನಶ್ಶಾಸ್ತ್ರದ ಸಂಶೋಧನೆಯ ಪರಿಣಾಮದ ತೀರ್ಮಾನ.

ಬಾಸ್ಟನ್ ನಗರದಿಂದ ಡಾ|| ಬೆನ್ಸನ್‌ರವರು 1979ನೆಯ ಜೂನ್ 25 ರಂದು ನಲವತ್ತು ವರ್ಷಗಳ ಕಾಲ ನಡೆಸಿದ ತಮ್ಮ ವೈಜ್ಞಾನಿಕ ಸಂಶೋಧನೆಯ ವರದಿಯನ್ನು ಪ್ರಕಟಿಸಿದ್ದಾರೆ. ಅದರಲ್ಲಿ ಅವರು ವರದಿ ಮಾಡುವು ದೇನೆಂದರೆ, ಶೇಕಡಾ 82 ಪ್ರಕರಣಗಳಲ್ಲಿ ರೋಗಿಗಳು ವೈದ್ಯರಲ್ಲಿಟ್ಟಿದ್ದ ನಂಬಿಕೆ ಅಥವಾ **ವಿಶ್ವಾಸದಿಂದ** ಗುಣಹೊಂದಿದರು, **ಔಷಧಿಗಳಿಂದಲ್ಲ.** (ಇದರ ವರದಿ ಯನ್ನು ಪ್ರತ್ಯೇಕ ಕೊಟ್ಟಿದೆ. ದಯಮಾಡಿ ಓದಿ.) ಅಂದರೆ ಈ ವರದಿಯು ನಮ್ಮ ಜೀವನದಲ್ಲಿ ಎಲ್ಲಾ ಕ್ಷೇತ್ರದಲ್ಲೂ ನಂಬಿಕೆ ಅಥವಾ ಶ್ರದ್ಧೆಯ ಮಹತ್ವ ವನ್ನು ಸಿದ್ಧಮಾಡಿ ತೋರಿಸುತ್ತದೆ. ಈಗ ವಿಜ್ಞಾನಿಗಳು ಏನನ್ನು ಹೇಳು ತ್ತಿದ್ದಾರೋ ಅದನ್ನೇ ನಮ್ಮ ಮಂತ್ರದ್ರಷ್ಟರಾದ ಋಷಿಗಳು ಹೇಳಿರುತ್ತಾರೆ ಅವರು ತಮ್ಮ ಅತೀಂದ್ರಿಯ ಅನುಭವಗಳಿಂದ ಕಂಡದ್ದು (extra sensory perception) ಈ ವಿಚಾರವನ್ನೇ. ಕೈವಲ್ಯೋಪನಿಷತ್ತಿ ನಲ್ಲಿ "ಶ್ರದ್ಧಾಭಕ್ತಿಧ್ಯಾನಯೋಗಾದವೈಹಿ" ಎಂದು ಹೇಳಿದ್ದಾರೆ ಅಂದರೆ ಶ್ರದ್ಧೆ, ಭಕ್ತಿ, ಧ್ಯಾನಗಳಿಂದ ಮಾತ್ರ ಸಾಧ್ಯ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಮಾತ್ರವಲ್ಲ, ನಮ್ಮ ನಿತ್ಯ ಜೀವನದಲ್ಲಿ ಎಲ್ಲಾ ಕ್ಷೇತ್ರಗಳಲ್ಲೂ ಶ್ರದ್ಧೆ ಮತ್ತು ಭಕ್ತಿ ಬೇಕು. ಅದನ್ನು ಪ್ರತಿಯೊಬ್ಬ ವ್ಯಕ್ತಿಯೂ ಬೆಳೆಸಿಕೊಳ್ಳಬೇಕು. ಹಾಗಾದರೆ ಮಾತ್ರ ನಮ್ಮ ಶೀಲವು (character) ಶುದ್ಧವಾಗುವುದು. ಜನರು ಉತ್ತಮ ಚಾರಿತ್ರ್ಯವುಳ್ಳವರಾಗುವರು ಅಂತಹ ಜನರಿಂದ ತುಂಬಿದ ರಾಷ್ಟ್ರದ ಚಾರಿತ್ರ್ಯವೂ ಉತ್ತಮವಾಗುವುದು.

ಶ್ರೀ ಸ್ವಾಮಿ ವಿವೇಕಾನಂದರು ಶಿಕ್ಷಣದ ಬಗ್ಗೆ ಮಾತಾಡುತ್ತಾ ಹೇಳಿ ದರು "ನಮಗೆ ಶೀಲವನ್ನು ಬೆಳೆಸುವ ಶಿಕ್ಷಣ ಬೇಕು". ಇದು ಆಕಾಶದಿಂದ

ಬೀಳುವುದಿಲ್ಲ. ನಾವೆಲ್ಲರೂ ಒಬ್ಬೊಬ್ಬರೂ ನಮ್ಮ ಹೃದಯ ಶೋಧನೆಯನ್ನು ಮಾಡಿಕೊಳ್ಳಬೇಕು ಸರಿಯಾದ, ಶಾಸ್ತ್ರೋಕ್ತವಾದ ಶ್ರದ್ಧೆ ಮತ್ತು ಭಕ್ತಿಯನ್ನು ಬೆಳೆಸಿಕೊಳ್ಳಬೇಕು. ಹಾಗಾದರೆ ಮಾತ್ರ ಇಹ ಮತ್ತು ಪರ ಎರಡರಲ್ಲೂ ಸುಖ. ಶೀಲ ಶಿಕ್ಷಣದ ಬಗ್ಗೆ ಶ್ರೀ ಸ್ವಾಮಿ ಶಂಕರಾನಂದಜಿಯವರು ಮಹತ್ಕಾರ್ಯವನ್ನು ಮಾಡಿ ಬ್ರಹ್ಮಲೀನರಾದರು. ಅವರ ಆಣತಿಯಂತೆ ಶ್ರೀ ಸ್ವಾಮಿ ಶಂಕರಾನಂದ ಟ್ರಸ್ಟ್ (ರಿ), ಅಜ್ಜಂಪುರ, ಇವರು ಶ್ರೀ ಗುರುಗಳ ಧ್ಯೇಯೋದ್ದೇಶವನ್ನೇ ಮುಂದುವರಿಸಿ ಆಧ್ಯಾತ್ಮಿಕ ಜ್ಞಾನ ಪ್ರಸಾರವನ್ನು ೧) ಗ್ರಂಥಗಳ ಪ್ರಕಟಣೆಯಿಂದ, ೨) ಶಿಕ್ಷಣ ತರಗತಿಗಳನ್ನು ನಡೆಸುವುದರಿಂದ, ೩) ಆಧ್ಯಾತ್ಮಿಕ ಪ್ರವಚನಗಳನ್ನು ಏರ್ಪಡಿಸುವುದರಿಂದ ಮಾಡುತ್ತಿದ್ದಾರೆ ಈ ಮಹಾ ಕಾರ್ಯಕ್ಕೆ ಸರ್ವರೂ ಎಲ್ಲಾ ವಿಧದಿಂದಲೂ ಸಹಾಯ ಮಾಡಬೇಕೆಂದು ಪ್ರಾರ್ಥನೆ

ಈ ಗ್ರಂಥವನ್ನು ಮುದ್ರಿಸುವುದಕ್ಕೆ ಶ್ರೀ ಆರ್. ಪುಟ್ಟಾಚಾರ್ಯರು, ನಿವೃತ್ತ ಶಾಲಾ ಉಪ ತನಿಖಾಧಿಕಾರಿಗಳು, ಚಿತ್ರದುರ್ಗ, ಅವರ ಸುಪುತ್ರರಾದ ಡಾ|| ಪಿ ನಿರಂಜನಮೂರ್ತಿಯವರು, ವೈದ್ಯಾಧಿಕಾರಿಗಳು, ಇರಾನ್, ಅವರು ಉದಾರವಾಗಿ ಧನ ಸಹಾಯ ಮಾಡಿರುತ್ತಾರೆ ಅವರಿಗೆ ದಯಾಮಯನಾದ ಪರಮಾತ್ಮನು ಸಕಲ ಸನ್ಮಂಗಲಗಳನ್ನು ಉಂಟುಮಾಡಲೆಂದು ಪ್ರಾರ್ಥಿಸುತ್ತೇವೆ.

ಈ ಗ್ರಂಥದ ಪುನರ್ಮುದ್ರಣವನ್ನು ಶ್ರದ್ಧೆ ಹಾಗೂ ಭಕ್ತಿಗಳಿಂದ ಮುದ್ರಿಸಿಕೊಟ್ಟ ಶ್ರೀ ಕೆ. ಬಿ. ಚಂಗಪ್ಪನವರು, ಮಾಲೀಕರು, ಕೂರ್ಗ್ ಪ್ರಿಂಟಿಂಗ್ ಪ್ರೆಸ್, ನಾಗಪ್ಪ ಬೀದಿ, ರಾಜಾಮಹಲ್ ಗುಟ್ಟಹಳ್ಳಿ, ಬೆಂಗಳೂರು ಇವರಿಗೆ ಅನೇಕ ಧನ್ಯವಾದಗಳು. ಇವರಿಗೂ ಇವರ ಕುಟುಂಬ ವರ್ಗದವರಿಗೂ ಪರಮಾತ್ಮನು ಸಕಲ ಸನ್ಮಂಗಲಗಳನ್ನು ದಯಪಾಲಿಸಲೆಂದು ಪ್ರಾರ್ಥಿಸುತ್ತೇವೆ.

ಈ ಸದ್ಗ್ರಂಥವನ್ನು ಸರಿಯಾದ ಭಾವದಿಂದ ಅಧ್ಯಯನ ಮಾಡಿ, ಈ ಜೀವಿತ ಕಾಲದಲ್ಲಿಯೇ ಜೀವನದ ಪರಮ ಗುರಿಯಾದ ಕೈವಲ್ಯವನ್ನು ಪಡೆಯಬೇಕೆಂದು ಓದುಗರಲ್ಲಿ ನಿವೇದಿಸಿಕೊಳ್ಳುತ್ತೇನೆ

ಬೆಂಗಳೂರು
24–10–1979

ಇತಿ ಶ್ರೀ ಸ್ವಾಮಿ ಶಂಕರಾನಂದರ
ಪಾದರೇಣು
**ಟಿ. ರಾಮಯ್ಯ**
ಪ್ರಧಾನ ಕಾರ್ಯದರ್ಶಿ,
ಶ್ರೀ ಸ್ವಾಮಿ ಶಂಕರಾನಂದ ವಿಶ್ವಸ್ಥ ಸಮಿತಿ (ರಿ)
ಶ್ರೀ ಶಿವಾನಂದಾಶ್ರಮ, ಅಜ್ಜಂಪುರ
ಹಾಗೂ
ನಿವೃತ್ತ ಸಹ ನಿರ್ದೇಶಕ, ಸಾರ್ವಜನಿಕ
ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ.

# ದೃಷ್ಟಾಂತ

# ಪೀಠಿಕೆ

ಶ್ರೀ ವಿಚಾರ ಸಾಗರದ ನಾಲ್ಕು ಮತ್ತು ಐದನೆಯ ತರಂಗಗಳುಳ್ಳ ಈ ಹೊತ್ತಿಗೆಯನ್ನು ಮುಮುಕ್ಷುಗಳ ಮುಂದಿಡಲು ಸಂತೋಷವಾಗುತ್ತದೆ. ಇದಕ್ಕೆ ಹಿಂದೆ ಹೊರಬಿದ್ದ ಒಂದು, ಎರಡು ಮತ್ತು ಮೂರನೇ ತರಂಗಗಳುಳ್ಳ ಪುಸ್ತಕವನ್ನು ಓದಿದವರ ಪ್ರೇರಣೆಯೇ ಇದಕ್ಕೆ ಕಾರಣವೆಂದು ಹೇಳಬಹುದು. ವಿಚಾರ ಸಾಗರವು ಸಾಗರವೇ, ಅದರ ಆಳವನ್ನು ಅಳೆಯಲಾಗುವುದಿಲ್ಲ. ಪಾತ್ರೆ ಇದ್ದಷ್ಟು ತುಂಬಿಕೊಂಡು ತೃಪ್ತಿಪಡಬೇಕಾಗಿದೆ. ಈ ಗ್ರಂಥದ ಪಠನ ಪಾರನಾದಿಗಳಿಂದ ಜೀವನು ಶಿವನಾಗಬಲ್ಲನು, ನರನು ನಾರಾಯಣನಾಗ ಬಲ್ಲನು, ಮಾನವನು ಮಾಧವನಾಗಬಲ್ಲನು ಎನ್ನುವುದಕ್ಕಿಂತ ಜೀವನು ತನ್ನ ಸಹಜವಾದ ಶಿವತ್ವವನ್ನು ಗುರುತಿಸಬಲ್ಲನು. ಇದರಿಂದ ಮೋಕ್ಷ ಬೇಕೆಂಬ ಬಯಕೆಯೂ ಹೊರಟು ಹೋಗಿ ನಿಷ್ಕಾಮತ್ವವನ್ನು ಅನುಭವಿಸಬಹುದು.

ಯಾವ ಸದ್ಗುರುನಾಥನು ಹೃದಯದಲ್ಲಿ ಕುಳಿತು ಬರೆಯುವ ಕೈಗೆ ಚೈತನ್ಯವನ್ನು ದಯಪಾಲಿಸಿದನೋ ಅವನೇ ಓದಿ ಆನಂದಿಸುತ್ತಾನೆ.

ಇತಿ,

ಸ್ವಾಮಿ ಶಂಕರಾನಂದಜಿ

# ನಂಬಿಕೆಯ ಶಕ್ತಿ

ಡಾ॥ ಬೆಸ್ಸನ್‌ರವರು, ಬೋಸ್ಟನ್, ನಲವತ್ತು ವರ್ಷಗಳ ಕಾಲ ನಡೆಸಿದ ವೈದ್ಯಕೀಯ ಸಂಶೋಧನೆಯ ವರದಿಯನ್ನು "ದಿ ಹಿಂದು" ದಿನ ಪತ್ರಿಕೆಯು ದಿನಾಂಕ 26-6-79ರಂದು ಪ್ರಕಟಿಸಿತು. ಅದರ ಛಾಯಾ ಮುದ್ರಣವು ಪಕ್ಕದಲ್ಲಿದೆ

ಅವರ ದೀರ್ಘಕಾಲದ ಸಂಶೋಧನೆಯು ತೋರಿಸಿಕೊಟ್ಟಿರುವುದೇನೆಂದರೆ, ನೂರಕ್ಕೆ 82 ಜನ ರೋಗಿಗಳು ಗುಣವಾದದ್ದು ಔಷಧಿಗಳಿಂದಲ್ಲ. ಅವರಿಗೆ ವೈದ್ಯರಲ್ಲಿದ್ದ ವಿಶ್ವಾಸದಿಂದ ವೈದ್ಯರಲ್ಲಿ ವಿಶ್ವಾಸವನ್ನಿಟ್ಟರೆ **ಸ್ಥೂಲ** ಶರೀರದ ರೋಗಗಳು ವಾಸಿಯಾಗುವುವು

ಭವರೋಗ ವೈದ್ಯನಾದ ಭಗವಂತನಲ್ಲಿ ವಿಶ್ವಾಸವಿಟ್ಟರೆ ಸ್ಥೂಲಶರೀರದ ಮತ್ತು ಸೂಕ್ಷ್ಮಶರೀರದ ರೋಗಗಳು ಗುಣವಾಗುವುವು. ಅಷ್ಟೇಕೆ, **ಭವ ರೋಗವೇ** ವಾಸಿಯಾಗುವುದು. ಇದು ಅಡಗೂಲಜ್ಜಿ ಕಥೆಯಲ್ಲ, ವೈಜ್ಞಾನಿಕ ಸತ್ಯ

ಭಗವಂತನನ್ನು **ನಂಬಿರಿ!** ಅವನು ನೀವು ಬೇಡಿದ್ದನ್ನೆಲ್ಲಾ ಕೊಡುವನು ನಿಮ್ಮ ಬೇಡಿಕೆಯೊಂದಿಗೆ ಕಲ್ಪನೆ ಮತ್ತು ಭಾವ ಮಿಶ್ರಿತವಾಗಿರಬೇಕು. ಇದು ವೈಜ್ಞಾನಿಕ ವಿಧಾನ ಭಗವಂತನು ಭಕ್ತಿಪೂರ್ವಕವಾಗಿ ಅರ್ಪಿಸುವುದೆಲ್ಲವನ್ನೂ ಸ್ವೀಕರಿಸುವನು. ಶ್ರೀಭಗವಂತನೇ ಗೀತೆಯಲ್ಲಿ ಹೇಳಿರುವನು .

**ಪತ್ರಂ ಪುಷ್ಪಂ ಫಲಂ ತೋಯಂ ಯೋಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಂ ಅಶ್ನಾಮಿ ಪ್ರಯತಾತ್ಮನಃ ॥**

ಗೀತಾ ಅಧ್ಯಾಯ ೯, ಶ್ಲೋಕ ೨೬

ಅರ್ಥ : ಭಕ್ತನು ಭಕ್ತಿಪೂರ್ವಕವಾಗಿ ಸಮರ್ಪಿಸುವ ಪತ್ರ, ಪುಷ್ಪ, ಫಲ, ನೀರು ಇವುಗಳನ್ನು ಪ್ರೇಮದಿಂದ ನಾನು ಸ್ವೀಕರಿಸುತ್ತೇನೆ

ಭಗವಂತನಲ್ಲಿ ವಿಶ್ವಾಸವಿಡಿ ಭಕ್ತಿಪೂರ್ವಕವಾಗಿ ಆರಾಧನೆಯನ್ನು ಮಾಡಿರಿ, ನಿಮ್ಮ ಯೋಗಕ್ಷೇಮವನ್ನು ಅವನು ನೋಡಿಕೊಳ್ಳುವನು. (ಯೋಗಕ್ಷೇಮಂ ವಹಾಮ್ಯಹಂ ಗೀತಾ)

**ಭಾರತದ ಭವ್ಯ ಸಂಸ್ಕೃತಿಗೆ ಜಯವಾಗಲಿ !**

ಪ್ರಕಾಶಕರು ಮತ್ತು ಪ್ರಚಾರಕರು,
**ಶ್ರೀ ಸ್ವಾಮಿ ಶಂಕರಾನಂದ ವಿಶ್ವಸ್ಥ ಸಮಿತಿ (ರಿ)**
ಶ್ರೀ ಶಿವಾನಂದಾಶ್ರಮ, ಅಜ್ಜಂಪುರ.



ಪೂಜ್ಯಪಾದ ಶ್ರೀ ಶಿವಾನಂದಜೀಯವರು

(ಶ್ರೀ ಶ್ರೀ ಶ್ರೀ ಶಂಕರಾನಂದ ಸ್ವಾಮಿಜಿಯವರ ಕರಕಮಲ ಸಂಜಾತರು)

ನಂಬಿ ಕೆಟ್ಟವರಿಲ್ಲವೋ । ರಂಗಯ್ಯನ । ನಂಬಲಾರದೆ ಕೆಟ್ಟರು ॥ ಪ ॥ ಅಂಬುಜನಾಭನ ಪಾದವ ನೆನೆಯೆ ಭ । ವಾಂಬುಧಿದುಃಖವ ಪರಿಹರಿಸುವ ಕೃಷ್ಣ ॥ ಅ ॥ ಬಲಿಯು ಪಾತಾಳಕ್ಕೆ । ಇಳಿಸಿ ಭಕ್ತ । ಗೊಲಿದು ಬಾಗಿಲ ಕಾಯ್ದನು ॥ ಛಲದೊಳು ಅಸುರನ ಶಿರಗಳ ತರಿದು ತಾ । ನೊಲಿದು ವಿಭೀಷಣಗೆ ಪಟ್ಟಗಟ್ಟಿದ ಕೃಷ್ಣ ॥ ೧ ॥ ತರಳ ಪ್ರಹ್ಲಾದಗೊಲಿದು । ಉಗುರಿನಿಂದ ಹಿರಣ್ಯನುದರ ಸೀಳಿದ । ಕರಿರಾಜಗೊಲಿದು ನೆಗಳು ನುಂಗಿತಿರಲಾಗಿ ॥ ಶಿರವ ತರಿದು ಕಷ್ಟ ಪರಿಹರಿಸಿದ ಕೃಷ್ಣ ॥ ೨ ॥ ಪಾಂಡವರಿಗೊಲಿದು । ಕೌರವರನ್ನು । ತುಂಡು ಛಿದ್ರವ ಮಾಡಿದ । ಅಂಡಲೆದು ದ್ರೌಪದಿ ಸಭೆಯೊಳು ಕೂಗೆ । ಬಂದು ಕಾಯ್ದ ಶ್ರೀ ಪುರಂದರ ವಿಠಲನ ॥ ೩ ॥

—ಪುರಂದರದಾಸರು

## "ವಿಶ್ವಾಸ ಸೂತ್ರ"

ವಿಶ್ವಾಸ ಅಥವಾ ನಂಬಿಕೆಯನ್ನು ಪದೇ ಪದೇ ವಿಶ್ಲೇಷಿಸಿ ನೋಡಿದರೆ ಅದು ಬೆಳಸಿದ ಕಲ್ಪನೆ, ಅಭಿವೃದ್ಧಿ ಪಡಿಸಿಕೊಂಡ ಕಲ್ಪನೆ, ಹಾಗೂ ಒರೆಹಚ್ಚಿ ನೋಡಿ ಅನುಭವದ ಮೂಲಕ ದೃಢೀಕರಿಸಿದ್ದೆಂದು ಕಾಣುತ್ತದೆ. ನಿಸ್ಸಂದೇಹವಾಗಿ ನಂಬಿಕೆ ಮತ್ತು ಕಲ್ಪನೆಗಳು ಒಂದೇ ಅಲ್ಲ. ನೀವು ವಿಶ್ವಾಸವಿಲ್ಲದೆ ಕಲ್ಪನೆಯನ್ನು ಇಟ್ಟುಕೊಳ್ಳಬಹುದು. ಆದರೆ ಕಲ್ಪನೆಯಿಲ್ಲದೆ ವಿಶ್ವಾಸ ಅಥವಾ ನಂಬಿಕೆಯನ್ನು ಇಟ್ಟುಕೊಳ್ಳಲು ಅಸಾಧ್ಯ.

# ಯದ್ಭಾವಂ ತದ್ಭವತಿ

(ನೀವೇ ಪ್ರಯೋಗ ಮಾಡಿ ನೋಡಿ)

ಒಂದು ದೊಡ್ಡ ಕನ್ನಡಿ ಎದುರು ಕುಳಿತುಕೊಳ್ಳಿ. ಕೋಪವನ್ನು ಕಲ್ಪಿಸಿಕೊಂಡು ಸಿಟ್ಟಾಗಿರುವವರಂತೆ ನಟನೆ ಮಾಡಿ. ಸಿಟ್ಟಾದಾಗ ಸಾಮಾನ್ಯವಾಗಿ ನೀವು ಮಾಡುವ ಹಾವಭಾವಗಳನ್ನೆಲ್ಲಾ ತನ್ಮಯತೆಯಿಂದ ಅಭಿನಯಿಸಿ. ಹತ್ತು ನಿಮಿಷಗಳ ಅಭಿನಯದ ನಂತರ ನಟನೆಯನ್ನು ನಿಲ್ಲಿಸಿರಿ. ನಿಮ್ಮನ್ನು ನೀವೇ ವಿಶ್ಲೇಷಿಸಿಕೊಳ್ಳಿರಿ. ನಿಜ ವಾಗಿಯೂ ನಿಮಗೆ ಕೋಪದ ಆವೇಶ ಬಂದಿರುವುದರ ಅನುಭವವಾಗುವುದು. ''ಯದ್ಭಾವಂ ತದ್ಭವತಿ".

ಹಾಗೆಯೇ ಕಲ್ಪನೆ, ಭಾವ ಮತ್ತು ನಟನೆ ಇವು ಗಳನ್ನು ಉಪಯೋಗಿಸಿಕೊಂಡು ನಿಮಗೆ ಬೇಕಾದ ಆಧ್ಯಾತ್ಮಿಕ ಅನುಭವಗಳನ್ನು ಪಡೆದುಕೊಳ್ಳಬಹುದೆಂಬ ಸತ್ಯವನ್ನು ಪ್ರಯೋಗಗಳ ಮೂಲಕ ಪರೀಕ್ಷೆ ಮಾಡಿ ಕೊಳ್ಳಿ.

# ವಿರುದ್ಧ ಪರಿಣಾಮ ನಿಯಮ

## (ನೀವೇ ಪ್ರಯೋಗ ಮಾಡಿ ನೋಡಿ)

ಒಂದು ಅಡಿ ಅಗಲ, ಮೂವತ್ತು ಅಡಿ ಉದ್ದ, ಅರ್ಧ ಅಡಿ ದಪ್ಪದ ಒಂದು ಹಲಗೆಯನ್ನು ತೆಗೆದುಕೊಳ್ಳಿ. ನೆಲದ ಮೇಲೆ ಇಟ್ಟು ಅದರ ಮೇಲೆ ನಡೆಯಲು ಹೇಳಿ ಯಾರಾದರೂ ಅದರ ಮೇಲೆ ಸುಲಭವಾಗಿ ನಡೆಯ ಬಲ್ಲರು. ಆ ಹಲಗೆಯನ್ನು ಸ್ಥಳಾಂತರಿಸಿ. ನಾಲ್ಕು ಅಂತಸ್ತಿನ ಎರಡು ಮಹಡಿ ಮನೆಗಳ ಮೇಲಿರಿಸಿ ಅದರ ಮೇಲೆ ನಡೆದು ಇನ್ನೊಂದು ಮನೆಯ ಮೇಲೆ ಹೋದವರಿಗೆ ಬಹುಮಾನ ಕೊಡುವುದಾಗಿ ಹೇಳಿ. ಅದರ ಮೇಲೆ ನಡೆ ಯಲು ಯಾರಾದರೂ ಬರುತ್ತಾರೆ. ಮೇಲೆ ನಡೆಯುವಾಗ, "ಕೆಳಗೆ ಬಿದ್ದರೆ?" ಎಂಬ ಕಲ್ಪನೆ ಸಹಜವಾಗಿ ಮೂಡುವುದು. ನಾಲ್ಕು ಹೆಜ್ಜೆ ನಡೆ ಯುವುದರೊಳಗೆ ಕಾಲುಗಳು ನಡುಗಲು ಆರಂಭಿಸುವುವು. ಕೆಳಗಿನಿಂದ ಕೂಗಿದ ಮಾತುಗಳು ಕೇಳಿಸವು. ಆ ವ್ಯಕ್ತಿಯ ಇಚ್ಛೆಯು ಉತ್ಕಟ ವಾಗಿದ್ದಷ್ಟೂ ನಡುಕ ಹೆಚ್ಚಾಗುವುದು. ಹಾಗೆಯೇ ಕುಳಿತು ಬಿಡುವನು. ಕಾರಣವೇನೆಂದರೆ, ದಾಟಬೇಕೆಂಬ ಇಚ್ಛೆ ಪ್ರಬಲವಾದಷ್ಟೂ ಬೀಳುವೆನೆಂಬ ಕಲ್ಪನೆಯು ವರ್ಧಿಸುತ್ತಾ ಹೋಗುವುದು. ಎಷ್ಟೆಂದರೆ ಇಚ್ಛಾಶಕ್ತಿಯ ವರ್ಗದಷ್ಟು ಕಲ್ಪನೆಯು ಹೆಚ್ಚಾಗುವುದು. ಅಂದರೆ ಇಚ್ಛಾಶಕ್ತಿಯು 5 ಪ್ರಮಾಣದಷ್ಟು ಇದೆ ಎಂದಿಟ್ಟುಕೊಳ್ಳಿ. ಆಗ ಕಲ್ಪನೆಯು 5×5=25 ರಷ್ಟಾಗುವುದು. ಇಚ್ಛಾಶಕ್ತಿಯು 10 ಆದರೆ ಕಲ್ಪನೆಯು 10×10=100 ರಷ್ಟಾಗುವುದು.

### ನಿಯಮ

**"ಇಚ್ಛಾಶಕ್ತಿಗೂ (will) ಮತ್ತು ಕಲ್ಪನೆಗೂ (imagination) ತಿಕ್ಕಾಟ ಬಂದಾಗ ಕಲ್ಪನೆಯು ಇಚ್ಛಾಶಕ್ತಿಯ ವರ್ಗದಷ್ಟು ಹೆಚ್ಚಾಗಿ, ಕಲ್ಪನೆಯೇ ಗೆಲ್ಲುವುದು".**

ಈ ಪ್ರಕೃತಿ ನಿಯಮವನ್ನು ಮುಮುಕ್ಷುಗಳು ಗಮನದಲ್ಲಿಟ್ಟುಕೊಂಡಿ ರುವುದರಿಂದ ಗುರಿ ಮುಟ್ಟಲು ಸಹಾಯಕವಾಗುವುದು.



ಶ್ರೀ ಶ್ರೀ ಶ್ರೀ ರಾಮಕೃಷ್ಣಾನಂದಜಿ



ನಿವೃತ್ತ ಶಾಲಾ ಉಪತನಿಖಾಧಿಕಾರಿಗಳಾದ ಶ್ರೀ ಆರ್. ಪುಟ್ಟಾಚಾರ್ಯರು ಮತ್ತು ಅವರ ಧರ್ಮಪತ್ನಿಯವರಾದ ಶ್ರೀಮತಿ ಗಂಗಮ್ಮನವರ ಸುಪುತ್ರರಾದ ಡಾ|| ಪಿ. ನಿರಂಜನಮೂರ್ತಿಯವರು, ವೈದ್ಯಾಧಿಕಾರಿಗಳು, ಇರಾನ್, ಇವರು ಈ ಗ್ರಂಥದ ಮುದ್ರಣಕ್ಕಾಗಿ ಉದಾರವಾಗಿ ಧನ ಸಹಾಯ ಮಾಡಿರುತ್ತಾರೆ.

ಓಂ

ನಮೋ ಭಗವತೇ ಶಿವಾನಂದಾಯ

# ಶ್ರೀ. ವಿಚಾರ ಸಾಗರ ಚತುರ್ಥ ತರಂಗ

ಆತ್ಮೀಯರೆ !

ಸಾಧು ಶ್ರೀ ನಿಶ್ಚಲದಾಸ ಕೃತ ವಿಚಾರ ಸಾಗರ ಗ್ರಂಥ ಶ್ರವಣ ಮಾಡಿ ತನ್ಮೂಲಕ ಜೀವನ್ಮುಕ್ತಿ ಆನಂದವನ್ನು ಭೋಗಿಸಬೇಕೆಂದು ಬಯಸುತ್ತಿರುವ ನಿಮ್ಮೆಲ್ಲರ ಶುದ್ಧವಾದ ಬುದ್ಧಿಯಲ್ಲಿ, ಪವಿತ್ರವಾದ ಅಂತಃಕರಣದಲ್ಲಿ ಸಾಕ್ಷಿ ರೂಪದಿಂದ ಪ್ರಕಾಶಮಾನವಾಗಿರುವ ಪರಮಾತ್ಮನಿಗೂ, ಅನಾದಿ ಕಾಲ ದಿಂದಲೂ ಬ್ರಹ್ಮವಿದ್ಯಾ ಸಂಪ್ರದಾಯ ಕರ್ತೃಗಳಾದ ಮಹರ್ಷಿಗಳೆಲ್ಲರಿಗೂ, ಸದ್ಗುರು ಪರಂಪರೆಗೂ, ವಿಚಾರ ಸಾಗರ ಗ್ರಂಥಕರ್ತೃಗಳಾದ ಪೂಜ್ಯ ಸಾಧು ಶ್ರೀ ನಿಶ್ಚಲದಾಸರಿಗೂ ಶ್ರದ್ಧಾಂಜಲಿಗಳನ್ನು ಸಮರ್ಪಿಸಿ, ಮಂಗಳಾಚರಣೆ ಯನ್ನು ಮಾಡಿ, ನಮಸ್ಕಾರಗಳನ್ನು ಸಮರ್ಪಿಸಿ ಹತ್ತು ದಿವಸಗಳವರೆಗೆ ವೇದಾಂತ ವಿಚಾರಗೋಷ್ಠಿ ಶಿಬಿರ ಕಾರ್ಯಕ್ರಮಕ್ಕೆ ಸ್ಥಳಾವಕಾಶವನ್ನು ಕಲ್ಪಿಸಿಕೊಟ್ಟ ಡಣಾಯಕಪುರದ ಶ್ರೀ ನಂಜುಂಡಪ್ಪನವರಿಗೂ, ಈ ಕಾರ್ಯ ಕ್ರಮಕ್ಕೆ ಉತ್ಸಾಹವನ್ನು ನೀಡಿ ಸರ್ವ ಕೆಲಸಗಳನ್ನೂ ಭಕ್ತಿ, ವಿಶ್ವಾಸ, ಶ್ರದ್ಧಾ ಸಹಾನುಭೂತಿಗಳಿಂದ ನೆರವೇರಿಸಿದ ಡಣಾಯಕಪುರದ ಭಕ್ತ ಮಂಡಲಿ ಯವರಿಗೆಲ್ಲರಿಗೂ ಶುಭಾಶಯವನ್ನು ಕೋರಿ ಈ ವಿಚಾರ ಸಾಗರದ ವಿಚಾರ ಗೋಷ್ಠಿ ಶಿಬಿರದ ಮೊದಲನೆಯ ದಿನದ ಕಾರ್ಯಕ್ರಮವನ್ನು ಶಿಷ್ಟಾಚಾರ ಸಂಪ್ರದಾಯ ಪದ್ಧತಿಯಂತೆ ಪ್ರಾರಂಭ ಮಾಡೋಣ.

ಆತ್ಮೀಯರೆ !

ನಾಲ್ಕನೆಯ ತರಂಗವು ವಿಚಾರ ಸಾಗರದಲ್ಲಿ ಬಹು ಮುಖ್ಯವಾದ ಘಟ್ಟ. ಉತ್ತಮಾಧಿಕಾರಿ ಉಪದೇಶ ನಿರೂಪಣ. ಇದು ಗುರು-ಶಿಷ್ಯ ಸಂವಾದ ರೂಪದಲ್ಲಿದೆ. ಸರ್ವರಿಗೂ ಅರ್ಥವಾಗಲೆಂಬ ಉದ್ದೇಶದಿಂದ ಶ್ರೀ ನಿಶ್ಚಲ ದಾಸರು ಒಂದು ನವೀನ ಕಲ್ಪನಾ ಕಥೆಯನ್ನು ಪ್ರಾರಂಭ ಮಾಡುತ್ತಾರೆ ಇದನ್ನು ಕೇಳುವುದರಿಂದ ಜಿಜ್ಞಾಸು ಜನಗಳು ವಿಚಾರವಂತರಾಗುವುದರಲ್ಲಿ ಸಂದೇಹವೇ ಇಲ್ಲ.

ದೋಹಾ - ಗುರು ಸಿಷಕೆ ಸಂವಾದಕೀ, ಕಹೂ ವ ಗಾಥ ನವೀನ ।
ಪೇಖಿ ಜಾಹಿ ಜಿಜ್ಞಾಸು ಜನ, ಹೋತ ವಿಚಾರ ಪ್ರವೀನ ॥ ೧ ॥

ಅರ್ಥ - ಗುರು ಶಿಷ್ಯರ ಸಂವಾದ ರೂಪದಿಂದ ಒಂದು ನೂತನವಾದ ಕಥೆಯನ್ನು ಹೇಳುವೆನು. ಅದರ ಅರ್ಥವನ್ನು ಜಿಜ್ಞಾಸುಗಳು ತಿಳಿದು ನೋಡಲು ವಿಚಾರ ಪ್ರವೀಣರಾಗುವರು.

ದೋಹಾ - ತೀನ ಸಹೋದರ ಬಾಲ ಸುಭ, ಚಕ್ರವರ್ತಿ ಸಂತಾನ ।
ಸುಭಸಂತತಿ ಪಿತು ತಿಹಿ ನಮೈ, ಸ್ವರ್ಗ ಪಾತಾಲ ಜಹಾನ ॥ ೨ ॥

ಅರ್ಥ - ಶುಭ ಸಂತತಿ ಎಂಬ ಒಬ್ಬ ಚಕ್ರವರ್ತಿಯು ತನ್ನ ತತ್ತ್ವದೃಷ್ಟಿ, ಅದೃಷ್ಟಿ ಮತ್ತು ತರ್ಕದೃಷ್ಟಿ ಎಂಬ ಮೂರು ಜನ ಪುತ್ರರೊಡನೆ ರಾಜ್ಯ ವಾಳುತ್ತಿದ್ದನು. ಅವನು ಬಹು ತೇಜಸ್ವಿಯಾಗಿ ಇದ್ದುದರಿಂದ ಸ್ವರ್ಗ, ಮರ್ತ್ಯ ಮತ್ತು ಪಾತಾಳ ಎಂಬ ಮೂರು ಲೋಕಗಳ ಪ್ರಜೆಗಳೂ ಸಹ ಅವನನ್ನು ಮನ್ನಿಸುತ್ತಿದ್ದರು.

ದೋಹ - ತತ್ತ್ವದೃಷ್ಟಿ ಇಕ ನಾಮ ಅಹಿ, ದೂಜೋ ಕಹತ ಅದೃಷ್ಟ ।
ತರ್ಕದೃಷ್ಟಿ ಪುನಿ ತೀಸರೊ, ಉತ್ತಮ ಮಧ್ಯಕನಿಷ್ಠ ॥ ೩ ॥

ಅರ್ಥ - ಅವನ ಮಕ್ಕಳಾದ ಮೊದಲನೆ ತತ್ತ್ವದೃಷ್ಟಿ, ಎರಡನೆ ಅದೃಷ್ಟಿ

ಮತ್ತು ಮೂರನೆಯ ತರ್ಕದೃಷ್ಟಿ ಎಂಬ ಮೂರು ಜನ ಕ್ರಮವಾಗಿ ಉತ್ತಮ, ಮಧ್ಯಮ ಮತ್ತು ಕನಿಷ್ಠಾಧಿಕಾರಿಗಳಾಗಿದ್ದರು.

ದೋಹಾ – ಬಾಲಪನೊಸಬ ಖೇಲತ ಖೋಯೋ
ತರುನ ಪಾಯ ಪುನಿಮದನ ವಿಗೋಯೋ ।
ಧಾರಿ ನಾರಿ ಗೃಹ ಮಾರಪ್ರಕಾಸೀ
ಭೋಗಲಹ್ಯೆ ತಿಹು ಸಹ ಸುಖರಾಸೀ ॥ ೪ ॥

ಅರ್ಥ – ಆ ಶುಭ ಸಂತತಿ ರಾಜನು ಬಾಲ್ಯಾವಸ್ಥೆಯನ್ನು ಆಟ ನೋಟಗಳಲ್ಲಿಯೂ, ತಾರುಣ್ಯಾವಸ್ಥೆಯನ್ನು ಮದನ ವ್ಯಾಪಾರದಲ್ಲಿಯೂ ಕಳೆದನು. ಯಾವ ಸ್ತ್ರೀಯರ ನೇತ್ರಕಟಾಕ್ಷಗಳಿಂದ ಮದನೋದ್ಭವವಾಗುವುದೋ, ಅಂಥಹ ಸುಂದರ ಸ್ತ್ರೀಯರ ಇರುವಿಕೆಯಿಂದ ಅವನ ಗೃಹವು ಪ್ರಕಾಶಮಾನವಾಗಿತ್ತು. ಮತ್ತು ತ್ರಿಭುವನದಲ್ಲಿಯೂ ಇರುವ ಎಲ್ಲಾ ಸುಖಗಳೂ ಅವನಿಗೆ ದೊರೆತಿದ್ದವು ಅವುಗಳನ್ನು ಯಥೇಚ್ಛವಾಗಿ ಅನುಭವಿಸಿದನು.

ದೋಹಾ – ಸ್ವರ್ಗ–ಭೂಮಿ–ಪಾತಾಲಕೆ, ಭೋಗಹಿ ಸ್ವರ್ಗ ಸಮಾಜ ।
ಸುಭಸಂತತಿ ನಿಜ ತೇಜಬಲ, ಕರತ ರಾಜಕೆ ಕಾಜ ॥ ೫ ॥

ಅರ್ಥ – ಸ್ವರ್ಗ, ಮರ್ತ್ಯ, ಪಾತಾಳ ಲೋಕಗಳ ಸರ್ವಭೋಗಗಳನ್ನು ಯಥಾಸ್ಥಿತವಾಗಿ ಅನುಭವಿಸಿ ತನ್ನ ನಿಜಬಲದಿಂದ ರಾಜ್ಯವಾಳುತ್ತಿದ್ದನು.

ದೋಹಾ – ಲಹಿ ಅವಸರ ಇಮ ತಿಹಿ ಪಿತಾ, ನಿಜ ಹಿಯರಜ್ಯೋವಿಚಾರ ।
ಸುಖ–ಸ್ವರೂಪ ಅಜ ಆತಮಾ, ತಾಸೂ ಭಿನ್ನ ಅಸಾರ ॥ ೬ ॥

ಅರ್ಥ – ಹೀಗಿರುತ್ತಿರಲು ಒಂದಾನೊಂದು ಸಮಯದಲ್ಲಿ ಅವನ ಮನಸ್ಸಿನಲ್ಲಿ "ಆತ್ಮನು ಸುಖ ಸ್ವರೂಪನು ಮತ್ತು ಅಜನು, ಅವನಿಗೆ ಭಿನ್ನ

ವಾದ ಪದಾರ್ಥಗಳೆಲ್ಲಾ ಅಸಾರವು" ಎಂಬ ಸಹಜವಾದ ಒಂದು ವಿಚಾರವು ಉದಯಿಸಿತು.

ದೋಹಾ – ಇಹಿ ಕಾರನ ತಜಿ ರಾಜ ಯಹ, ಜಾನೂ ಆತಮರೂಪ ।
ಸ್ವರ್ಗ–ಭೂಮಿ–ಪಾತಾಲಕೆ, ತಿಹು ಪುತ್ರಹು ಕರಿ ಭೂಪ ॥ ೭ ॥

ಅರ್ಥ – ಈ ರೀತಿ ವಿಚಾರವು ಅವನ ಮನಸ್ಸಿನಲ್ಲಿ ಉದಯಿಸಿದೊಡನೆ ಅವನು ಹೀಗೆಂದುಕೊಂಡನು : "ಈ ರಾಜ್ಯ ವೈಭವವನ್ನು ತ್ಯಾಜ್ಯಮಾಡಿ, ಆತ್ಮ ಸ್ವರೂಪವನ್ನು ತಿಳಿದುಕೊಳ್ಳಬೇಕು. ನನ್ನ ಮೂರು ಜನ ಮಕ್ಕಳಿಗೂ ಸ್ವರ್ಗ, ಮರ್ತ್ಯ ಮತ್ತು ಪಾತಾಳ ಲೋಕಗಳ ಆಧಿಪತ್ಯವನ್ನು ಕೊಟ್ಟು ರಾಜರನ್ನಾಗಿ ಮಾಡಬೇಕು "

ದೋಹಾ – ಅಸವಿಛಾರ ಸುಭಸಂತತಿ ಕೀನಾ
ಮಂತ್ರಿ ಪೇಖಿ ತಿಹು ಪುತ್ರ ಪ್ರವೀನಾ ।
ದೇಸ ಇಕಂತ ಸಮೀಪ ಬುಲಾಯೆ
ನಿಜವಿರಾಗ ಕೆ ವಚನ ಸುನಾಯೆ ॥ ೮ ॥

ಅರ್ಥ – ಹೀಗೆಂದು ಮನಸ್ಸಿನಲ್ಲಿ ವಿಚಾರ ಮಾಡಿ, ಮಂತ್ರಿಯ ಕಡೆಯಿಂದ ಮಕ್ಕಳನ್ನು ಕರೆಯಿಸಿಕೊಂಡು, ಏಕಾಂತದಲ್ಲಿ ಕುಳ್ಳಿರಿಸಿಕೊಂಡು ತನ್ನ ಮನಸ್ಸಿನ ನಿಜ ವೈರಾಗ್ಯವನ್ನು ಹೇಳತೊಡಗಿದನು.

ದೋಹಾ – ಭಾಖ್ಯೋ ಪುನಿ ಯಹ ರಾಜ ಸಂಭಾರಹು
ಇಕ ಪಾತಾಲ ಇಕ ಸ್ವರ್ಗ ಸಿಧಾರಹು ।
ಅಪರ ವಸಹು ಕಾಸೀಬುವಿ ಸ್ವಾಮೀ
ರಹತ ಜಹಾಂ ಸಿವ ಅಂತರಜಾಮೀ ॥ ೯ ॥

ಅರ್ಥ – ಎಲೈ ಮಕ್ಕಳಿರಾ ! ನಿಮ್ಮಲ್ಲಿ ಒಬ್ಬನು ಪಾತಾಳಲೋಕದಲ್ಲಿಯೂ, ಇನ್ನೊಬ್ಬನು ಸ್ವರ್ಗಲೋಕದಲ್ಲಿಯೂ, ಮೂರನೆಯವನು

ಪೃಥ್ವಿಯಲ್ಲಿಯೂ ರಾಜ್ಯಭಾರವನ್ನು ಮಾಡಿರಿ ಪೃಥ್ವಿಯಲ್ಲಿ ರಾಜ್ಯಭಾರ ಮಾಡುವವನು ತ್ರಿಪುರಾರಿಯೂ ಸರ್ವಾಂತರ್ಯಾಮಿಯೂ ಆಗಿರುವ ಸ್ವಾಮಿಯ ವಾಸಸ್ಥಳ ಕಾಶೀ ಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿ ಕೊಳ್ಳಬೇಕು ನಾನು ಅಂತ್ಯಕಾಲ ಪರಿಯಂತ ಅಲ್ಲಿಯೇ ವಾಸಿಸುವೆನು.

ದೋಹಾ – ಜಿಹಿ ಮರತಹಿಸುನಿ ಸಿವ ಉಪದೇಸಾ
ಅನಾಯಾಸ ತಿಹಿ ಲೋಕಪ್ರವೇಸ ।
ಗಂಗ ಅಂಗ ಮ ಕೀರ್ತಿ ಪ್ರಕಾಸೈ
ಉತ್ತರ ವಾಹನಿ ಅಧಿಕ ಉಜಾಸೈ ॥ ೧೦ ॥

ಅರ್ಥ – ಯಾವನು ಅಂತ್ಯ ಕಾಲದಲ್ಲಿ ಶಿವೋಪದೇಶವನ್ನು ಕೇಳು ವನೋ ಅವನು ಅನಾಯಾಸವಾಗಿ ಮೋಕ್ಷವನ್ನು ಹೊಂದುವನು. ಇದಲ್ಲದೆ ಅಮೋಘವಾಹಿನಿಯಾದ ಗಂಗಾ ನದಿಯ ಪ್ರವಾಹವು ಉತ್ತರವಾಹಿನಿ ಯಾಗಿರುವುದು

ದೋಹಾ – ಕರಹು ರಾಜ ಇಮುಭಿನ್ನತಿಹು, ಪಾಲಹು ನಿಜ ನಿಜದೇಸ ।
ಬಿನ ವಿಭಾಗ ಭ್ರಾತನಕೋ, ಭೂಮಿಕಾಜ ಹೈಕ್ಲೇಸ ॥ ೧೧ ॥

ಅರ್ಥ – ಎಲೈ ಮಕ್ಕಳಿರಾ ! ಈ ಪ್ರಕಾರ ನಾನು ಯಥಾರ್ಥವಾಗಿ ವಿಭಾಗ ಮಾಡಿಕೊಟ್ಟ ರಾಜ್ಯವನ್ನು ಸ್ವಧರ್ಮಾನುಸಾರವಾಗಿ ಪರಿಪಾಲನ ಮಾಡಿರಿ ; ನಾನು ಹೀಗೆ ಮಾಡದಿದ್ದರೆ ನೀವು ನಿಮ್ಮ ನಿಮ್ಮೊಳಗೆ ಕಲಹ ಮಾಡುವ ಪ್ರಸಂಗ ಬರುತ್ತಿತ್ತು. ಆದ್ದರಿಂದ ಬಹಳ ಕ್ಲೇಶವೇ ಆಗುತ್ತಿತ್ತು.

॥ ಇಂದವ ಛಂದ ॥

ರಾಜ–ಸಮಾಜ ತಜೌ ಅಬ ಮೈಸಬ–
ಜಾನಿ ಹಿಯೆ ದುಖ ತಾಹಿ ಅಸಾರಾ ।

ಔರ ತೂ ಲೋಕ ದುಖೀ ಅಪನ್ಯೆ ದುಖ–
ಮ್ಯೆಭುಗತ್ಯೋಜಗ ಕ್ಲೇಸ ಅಪಾರಾ ||
ಜೆ ಭಗವಾನ್ ಪ್ರಧಾನ ಅಜಾನ–
ಸಮಾನ ದರಿದ್ರನ ತೆ ಜನಸಾರಾ |
ಹೇತು ವಿಚಾರ ಹಿಯೆ ಜಗಕೆ ಭಗ–
ತ್ಯಾಗಿ ಲಖೂ ನಿಜರೂಪ ಸುಖಾರಾ || ೧೨ ||

ಅರ್ಥ – ಎಲೈ ಮಕ್ಕಳಿರಾ ! ನಾನು ಈ ಸಂಸಾರವು ದುಃಖರೂಪ ವಾಗಿರುವುದೆಂಬುದನ್ನು ನನ್ನ ಮನಸ್ಸಿನಲ್ಲಿ ಚೆನ್ನಾಗಿ ತಿಳಿದುಕೊಂಡೆನು. ಆದ್ದರಿಂದ ರಾಜ್ಯವನ್ನು ಬಿಟ್ಟುಕೊಟ್ಟು ಆತ್ಮವಿಚಾರವನ್ನು ನೋಡಿಕೊಳ್ಳ ಬೇಕೆಂಬ ಇಚ್ಛೆಯು ನನಗೆ ಉಂಟಾಗಿದೆ. ಇದಲ್ಲದೆ ಈ ನನ್ನ ಪ್ರಜೆಗಳೆಲ್ಲರೂ ಅನಂತವಾದ ಸಂಸಾರ ಸಾಗರದಲ್ಲಿ ಬಿದ್ದು ಅನೇಕ ದುಃಖಗಳನ್ನು ಹೊಂದು ತ್ತಿರುವುದನ್ನು ಕಂಡು ನನಗೆ ಬಹಳ ದುಃಖವಾಗುತ್ತದೆ. ಇದರ ಹೊರತು ಈ ಭೂಲೋಕದಲ್ಲಿಯ ಅನೇಕ ನಶ್ವರವಾದ ಐಶ್ವರ್ಯಗಳು ನನಗೆ ಇದ್ದದ್ದನ್ನು ಕಂಡು ಈ ಅಜ್ಞ ಜನರೆಲ್ಲರೂ ನನ್ನನ್ನು ಬಹು ಸುಖಿಯೆಂದು ತಿಳಿದುಕೊಳ್ಳು ತ್ತಾರೆ. ನನಗಾದರೋ ಈ ಭೋಗ ಭಾಗ್ಯಗಳು ಅತಿ ಕನಿಷ್ಠವಾಗಿ ತೋರು ತ್ತವೆ. ಆದ್ದರಿಂದ ಇವುಗಳನ್ನು ತ್ಯಾಜ್ಯಮಾಡಿ, ಸರ್ವಸಂಗ ಪರಿತ್ಯಾಗ ಮಾಡಿ, ಎಂದೂ ಕಡಿಮೆಯಾಗದೆ ಇರುವಂಥ ನಿಜ ಸುಖವನ್ನು ಹೊಂದಬೇಕೆಂಬ ಇಚ್ಛೆಯಾಗಿದೆ.

|| ಇಂದವ ಛಂದ ||

ವಾಕ್ಯ ಅನಂತ ಕಹೆ ಇಮ ತಾತ–
ಸುನ್ಯೆತಿಹು ಭ್ರಾತ ಸುಬುದ್ಧಿ–ನಿಧಾನಾ |
ಬೈರಿ ಇಕಂತ ವಿಚಾರ ಅಪಾರ–
ಭನ್ಯೆಪುನಿ ಆಪಸ ಮಾಹಿಸುಜಾನಾ |
ದೇ ದುಖಮೂಲ ಸಮಾಜ ಹಮ್ಯೆ ಯಹ–
ಆಪ ಭಯೋ ಚಹ ಬ್ರಹ್ಮ–ಸಮಾನಾ |

ಸೋಜನನಾಗರ ಬುದ್ಧಿ ಕ ನಾಗರ–
ಆಗರ ದುಃಖ ತಜ್ಯೈಜು ಜಹಾನಾ || ೧೩ ||

ಅರ್ಥ – ಈ ಪ್ರಕಾರ ತಮ್ಮ ತಂದೆಯು ಹೇಳಿದ ಅನೇಕ ವಾಕ್ಯಗಳನ್ನು ಕೇಳಿ ಆ ಸುಬುದ್ಧಿಗಳಾಗಿದ್ದ ಮೂವರೂ ಮಕ್ಕಳು ಏಕಾಂತದಲ್ಲಿ ಕುಳಿತುಕೊಂಡು ವಿಚಾರ ಮಾಡ ಹತ್ತಿದರು. ಅವರು ತಮ್ಮ ತಮ್ಮೊಳಗೆ "ನಮ್ಮ ತಂದೆಯು ಆಡಿದ ಮಾತುಗಳನ್ನು ಕೇಳಿದಿರಾ! ನಮ್ಮನ್ನು ಈ ದುಃಖ ಸಂಸಾರದಲ್ಲಿ ಮುಳುಗಿಸಿ, ತಾನು ಬ್ರಹ್ಮ ಸಮಾನನಾಗಬೇಕೆಂದು ಇಚ್ಛಿಸುತ್ತಾನೆ. ಆದ್ದರಿಂದ ಬುದ್ಧಿನಾಗರರೂ, ವಿಚಾರವಂತರಾದವರೂ ತಂದೆಯು ಹೇಳಿದ ಬುದ್ಧಿಯ ವಾಕ್ಯಗಳನ್ನು ಕೇಳಿ ತಿಳಿದುಕೊಂಡು, ಈ ಸರ್ವ ರಾಜ್ಯವನ್ನೂ ನಶ್ವರವಾದ ಸುಖಗಳನ್ನೂ ಬಿಟ್ಟುಕೊಡತಕ್ಕದ್ದು."

ದೋಹಾ – ಯಾತೈತಜಿ ದುಖಮೂಲ ಯಹ ರಾಜ ಕರೌ ನಿಜಕಾಜ |
ಕರಿ ವಿಚಾರ ಇಮು ಗೇಹತ್ಯೆ ನಿಕಸ್ಯೋ ಭ್ರಾತ–ಸಮಾಜ ||೧೪||

ಅರ್ಥ – ಹೀಗೆ ತಮ್ಮ ತಮ್ಮೊಳಗೆ ವಿಚಾರಮಾಡಿ ತಿಳಿದುಕೊಂಡು ಮೂವರೂ ಸಹೋದರರು ಗೃಹವನ್ನು ತ್ಯಾಗಮಾಡಿ ದುಃಖ ಮೂಲವಾದ ರಾಜ್ಯವನ್ನು ಬಿಟ್ಟುಕೊಟ್ಟು ಆತ್ಮ ಸ್ವರೂಪವನ್ನು ಕಂಡುಹಿಡಿಯಬೇಕೆಂದು ಹೊರಟರು

ದೋಹಾ – ತಿಹು ಖೋಜತ ಸತ್‌ಗುರುಚಲೆ, ಧಾರಿ ಮೋಚ್ಛಹಿಯಕಾಮ |
ಅರ್ಥಸಹಿತ ಕಿಯತಾತಕೊ, ಸುಭಸಂತತಿ ಯಹ ನಾಮ ||೧೫||

ಅರ್ಥ – ಈ ಪ್ರಕಾರ ಮೂವರೂ ಹೃದಯದಲ್ಲಿ ಮೋಕ್ಷೇಚ್ಛೆಯುಳ್ಳವರಾಗಿ ಸದ್ಗುರುವನ್ನು ಶೋಧಿಸುತ್ತಾ ನಡೆದರಲ್ಲದೆ ತಮ್ಮ ಜನಕನ ಶುಭ ಸಂತತಿ ಎಂಬ ನಾಮವನ್ನು ಸಾರ್ಥಕ ಮಾಡಿದರು

ದೋಹಾ – ಖೋಜತ ಖೋಜತ ದೇಸಬಹು, ಸುರಸರಿ ತೀರ ಇಕಂತ ।
ತರು–ಪಲ್ಲವ–ಸಾಖಾ ಸಘೆನ, ಬನ ತಾಮ್ಯೆ ಇಕ ಸಂತ ॥೧೬॥

ಅರ್ಥ – ಆ ಮೂರು ಜನರೂ ಗೃಹ ತ್ಯಾಗಮಾಡಿ ಅನೇಕ ದೇಶ ಕೋಶಗಳನ್ನು ಶೋಧಿಸುತ್ತಾ ಭಾಗೀರಥಿ ತೀರಕ್ಕೆ ಬಂದರು. ಅದರ ತೀರ ದಲ್ಲಿ ತರುಪಲ್ಲವ ರಾಶಿಗಳಿಂದ ನಿಬಿಡವಾದಂಥ ವನದಲ್ಲಿ ಕುಳಿತುಕೊಂಡಿದ್ದ ಒಬ್ಬ ಸಾಧುವರ್ಯನನ್ನು ನೋಡಿದರು

ದೋಹ – ಬೈಠ್ಯೋಬಟ ವಿಟಪಹಿ ತರ್ಯೆ, ಭದ್ರಾಮುದ್ರಾ ಧಾರೀ ।
ಜೀವಬ್ರಹ್ಮಕೀ ಏಕತಾ, ಉಪದೇಸತ ಗುನ ಟಾರಿ ॥ ೧೭ ॥

ಅರ್ಥ – ಆ ಸಾಧುವರ್ಯನು ವಟವೃಕ್ಷದಡಿಯಲ್ಲಿ ಆಸನದ ಮೇಲೆ ಭದ್ರಮುದ್ರಾಧಾರಣ ಮಾಡಿಕೊಂಡು ಜೀವ ಬ್ರಹ್ಮರ ಏಕತ್ವವನ್ನು ಉಪ ದೇಶಿಸುತ್ತಾ ಸಂಪೂರ್ಣ ತ್ರಿಗುಣರಹಿತನಾಗಿ ಕುಳಿತುಕೊಂಡಿದ್ದನು.

ಮೇಲೆ ಹೇಳಿದ ಭದ್ರಾ ಮುದ್ರೆಯನ್ನು ಲೋಪಮುದ್ರಾ, ತರ್ಕ ಮುದ್ರಾ ಮತ್ತು ಜ್ಞಾನಮುದ್ರಾ ಎಂದು ಕರೆಯುವುದುಂಟು. ಹಸ್ತದಲ್ಲಿಯ ಅಂಗುಷ್ಠ ತರ್ಜನಿಗಳ ಸಂಯೋಗವೇ ಈ ಮುದ್ರೆ. ಸನಕಾದಿಗಳಿಗೆ ದಕ್ಷಿಣಾ ಮೂರ್ತಿಯು ಈ ಮೂಲಕವೇ ಬೋಧಿಸಿದ್ದು.

ದೋಹಾ – ದೋಷರಹಿತ ಏಕಾಗ್ರಚಿತ, ಸಿಷ್ಯ–ಸಂಘ ಪರಿವಾರ ।
ಲಖಿದೈಸಿಕ ಉಪದೇಸ ಹಿಯು, ಚಹುಧಾ ಕರತ ವಿಚಾರ ॥೧೮॥

ಅರ್ಥ – ಆ ಸಾಧುವರ್ಯನ ಮುಂಭಾಗದಲ್ಲಿ ದೋಷರಹಿತರೂ, ಏಕಾಗ್ರಚಿತ್ತದವರೂ ಆದ ಶಿಷ್ಯ ಪರಿವಾರವು ಗುರುಗಳ ಉಪದೇಶವನ್ನು ವಿಚಾರಮಾಡುತ್ತಾ ಕುಳಿತುಕೊಂಡಿದ್ದರು.

ನೃಸಿಂಹ–ತಾಪನೀ ಉಪನಿಷತ್ತಿನಲ್ಲಿ ಶಿಷ್ಯನಿಗೆ ಹತ್ತು ದೋಷ ಗಳನ್ನು ಹೇಳಲಾಗಿದೆ :

೧ ಕಳ್ಳತನ, ವ್ಯಭಿಚಾರ ಮತ್ತು ಹಿಂಸೆ ಈ ಮೂರು ಶರೀರ ದೋಷಗಳು.

೨ ನಿಂದೆ, ಸುಳ್ಳು, ಕಠೋರತ್ವ ಮತ್ತು ವಾಕ್‌ಚಾಪಲ್ಯ ಇವು ನಾಲ್ಕು ವಾಣಿ ದೋಷಗಳು

೩ ತೃಷ್ಣಾ, ಚಿಂತಾ ಮತ್ತು ಬುದ್ಧಿಮಾಂದ್ಯ ಈ ಮೂರು ಮನಸ್ಸಿನ ದೋಷಗಳು.

ಈ ಹತ್ತೂ ದೋಷರಹಿತರಾದ ಶಿಷ್ಯರು ಆ ಸಾಧುವರ್ಯನ ಮುಂಭಾಗ ದಲ್ಲಿ ಕುಳಿತು ವಿಚಾರ ಮಾಡುತ್ತಿದ್ದರು.

ದೋಹಾ – ಮನಹು ಸಂಭು ಕೈಲಾಸ ಮೈ, ಉಪದೇಸತ ಸನಕಾದಿ ।
ಪೇಖಿ ತಾಹಿ ತಿಹಿ ಲಹಿ ಸರನ, ಕರೀ ದಂಡವತ ಆದಿ ॥ ೧೯ ॥

ಅರ್ಥ – ಆ ಸಾಧುವರ್ಯನನ್ನು ನೋಡಿದ ಕೂಡಲೇ ಆ ಮೂರು ಜನ ಸಹೋದರರ ಮನಸ್ಸಿನಲ್ಲಿ ಕೈಲಾಸದಲ್ಲಿ ದಕ್ಷಿಣಾಮೂರ್ತಿ ಮಹಾ ದೇವನೇ ನನಕ, ಸನಂದನ, ಸನಾತನ ಸನತ್ಕುಮಾರರಿಗೆ ಉಪದೇಶ ಮಾಡುತ್ತಾ ಕುಳಿತಿರುವನೋ ಏನೋ ಎಂಬಂತೆ ಭಾಸವಾಗಿ, ಅವರು ದಂಡ ವತ್ ನಮಸ್ಕಾರ ಮಾಡಿದರು.

ದೋಹಾ – ಕಿಯೋ ವಾಸ ಷಟ್‌ಮಾಸ ಪುನಿ, ಶಿಷ್ಯ–ರೀತಿ–ಅನುಸಾರ ।
ಕರೀ ಅಧಿಕ ಗುರುಸೇವ ತಿಹು, ಮೋಚ್ಛಕಾಮ ಹಿಯಭಾರ ॥೨೦॥

ಅರ್ಥ – ಆ ಮೇಲೆ ಆ ಮೂವರೂ ಮೋಕ್ಷೇಚ್ಛೆಯುಳ್ಳವರಾಗಿ ಶಿಷ್ಯ ವೃತ್ತಿಯನ್ನನುಸರಿಸಿ, ಗುರುಸೇವೆಯನ್ನು ಮಾಡುತ್ತಾ, ಆರು ತಿಂಗಳ ಪರ್ಯಂತರ ಅಲ್ಲಿಯೇ ವಾಸಮಾಡಿದರು.

ದೋಹಾ – ಹ್ವೈ ಪ್ರಸನ್ನ ಶ್ರೀಗುರು ತಮೈ, ತೆ ಪೂಛೈ ಮೃದು–ಬಾನಿ ।
ಕಿಹಿ ಕಾರನ ತುಮ ತಾತ ತಿಹು ವಸಹು ಕೌನ ಕಹ ಆನಿ ॥೨೧॥

ಅರ್ಥ – ಈ ರೀತಿಯಾಗಿ ಆರು ತಿಂಗಳು ಕಳೆದ ಮೇಲೆ ಆ ಗುರುಗಳು ಇವರ ಮೇಲೆ ಪ್ರಸನ್ನರಾಗಿ, ನೀವು ಮೂವರು ಯಾವ ಕಾರಣದಿಂದ ಇಲ್ಲಿಗೆ ಬಂದಿರಿ ? ನೀವು ಯಾರು ? ಯಾರ ಮಕ್ಕಳು ? ಎಂದು ಅಮೃತ ಸಮಾನವಾದ ವಾಣಿಯಿಂದ ಪ್ರಶ್ನೆ ಮಾಡಿದರು.

ದೋಹಾ – ತತ್ತ್ವದೃಷ್ಟಿತಬ ಲಖಿಹಿಯೆ ನಿಜ ಅನುಜನಕೀ ಸೈನ ।
ಕಹ್ಯೈ ಉಭಯ ಕರ ಜೋರಿ ನಿಜ, ಅಭಿಪ್ರಾಯ ಕೆ ಬೈನ ॥೨೨॥

ಅರ್ಥ – ಆಗ ತತ್ತ್ವದೃಷ್ಟಿಯು ತನ್ನ ಇರ್ವರು ಸಹೋದರರ ಕಡೆ ನೋಡಿ ಅವರ ಇಂಗಿತವನ್ನು ತಿಳಿದುಕೊಂಡು ಎದ್ದು ನಿಂತು ಬದ್ಧಾಂಜಲಿ ಪುಟನಾಗಿ ನಿಂತುಕೊಂಡು ತನ್ನ ಅಭಿಪ್ರಾಯವನ್ನು ಹೇಳಲಾರಂಭಿಸಿದನು.

ದೋಹಾ – ಭೋ ಭಗವನ ! ಹಮ ಭ್ರಾತ ತಿಹು, ಸುಭ-ಸಂತತಿ-ಸಂತಾನ ।
ಲಖ್ಯೋ ಚಹ್ಯೈ ಬಹು ಭೇವಹಿಯ, ದೀನಸವೀನ ಅಜಾನ ॥

ಅರ್ಥ – ಹೇ ಭಗವಂತನೇ ! ನಾವು ಮೂವರೂ ಸಹೋದರರು ; ಶುಭಸಂತತಿ ಎಂಬ ರಾಜನ ಮಕ್ಕಳು ; ನಾವು ದೀನರು, ಹೀನರು ಮತ್ತು ಅಜ್ಞರೂ ಆಗಿದ್ದೇವೆ ಜ್ಞಾನ ಪ್ರಾಪ್ತ್ಯರ್ಥವಾಗಿ ಇಲ್ಲಿಗೆ ಬಂದಿದ್ದೇವೆ.

ದೋಹಾ – ಜೋ ಆಜ್ಞಾ ಹ್ವೈ ರಾವರೀ, ತಾ ಹ್ವೈ ಪೂಛಿ ಪ್ರವೀನ ।
ಆಪ ದಯಾನಿಧಿ ಕಲ್ಪತರು, ಹಮ ಅತಿ ದುಖಿತ ಅಧೀನ ॥ ೨೪ ॥

ಅರ್ಥ – ತಮ್ಮ ಆಜ್ಞಾ ಆಗುವುದಾದರೆ ನಾನು ತಮ್ಮನ್ನು ಪ್ರಶ್ನೆ ಮಾಡುತ್ತೇನೆ. ತಾವು ದಯಾನಿಧಿಗಳು ; ಕಲ್ಪವೃಕ್ಷಕ್ಕೆ ಸಮಾನರು; ನಾವು ಅತ್ಯಂತ ದಯೆಗೆ ಪಾತ್ರರೂ ಮತ್ತು ಪರಾಧೀನರೂ ಆಗಿದ್ದೇವೆ.

ಶಿಷ್ಯನಾದವನು ಗುರುಗಳನ್ನು ಈಶ್ವರ ಸ್ಥಾನದಲ್ಲಿ ನೋಡಬೇಕು. ಆಗಲೇ ಜ್ಞಾನ ಪ್ರಾಪ್ತವಾಗುವುದು. ಅಷ್ಟೇ ಅಲ್ಲದೆ ಈಶ್ವರ ಕೃಪೆಯಿಂದ

ಅದೃಷ್ಟ ಫಲವು ದೊರೆಯಬಹುದು; ಗುರುಕೃಪೆಯಿಂದ ದೃಷ್ಟಾದೃಷ್ಟ ಫಲಗಳೆರಡೂ ದೊರೆಯುತ್ತವೆ.

ಶ್ರೀಗುರುಗಳು ದಯಾನಿಧಿಗಳು – ಅಂದರೆ ಯಾರಾದರೊಬ್ಬನು ಅಪಕಾರ ಮಾಡಿದರೂ ಅವನನ್ನು ಹೊರಗೆ ಹಾಕದೆ ಅವನಿಗೆ ಒಳ್ಳೆಯದನ್ನೇ ಮಾಡುವರು.

ಉದಾ – ಶ್ರೀ ರಾಮಕೃಷ್ಣ ಪರಮಹಂಸರು ದಕ್ಷಿಣೇಶ್ವರದಲ್ಲಿ ಒಂದು ದಿವಸ ಅಫೀಮು ತಿನ್ನುವ ಶಿಷ್ಯನೊಬ್ಬನಿಗೆ 'ಅಯ್ಯಾ, ಅಫೀಮು ತಿನ್ನಬಾರದು, ಅದು ಶಾಸ್ತ್ರವಿರುದ್ಧ, ಧರ್ಮವಿರುದ್ಧ; ಅದನ್ನು ಬಿಟ್ಟುಬಿಡು' ಎಂದು ಹೇಳಿದರು. ಶಿಷ್ಯನು 'ಸ್ವಾಮಿ, ನೀವು ಅಫೀಮು ತಿನ್ನಬೇಡ ಎಂದು ಹೇಳುತ್ತೀರಿ. ಅದನ್ನು ಬಿಡಲಾಗುವುದಿಲ್ಲ. ನಾನು ಇಂದಿನಿಂದ ಆಶ್ರಮಕ್ಕೇ ಬರುವುದಿಲ್ಲ. ನಿಮ್ಮ ವೇದಾಂತವೂ ಅವಶ್ಯಕವಿಲ್ಲ' ಎಂದನು. ಅದಕ್ಕೆ ಅವರು 'ಅಯ್ಯಾ! ನೀನು ಅಫೀಮು ತಿನ್ನುವುದನ್ನು ಬಿಡದೇ ಹೋದರೂ ಆಶ್ರಮಕ್ಕೆ ಬರುವುದನ್ನು ಮಾತ್ರ ಬಿಡಬೇಡ' ಎಂದರು.

ಉದಾ ೨. ನಾಮಸಂಕೀರ್ತನ ಭಜನೆಯಿಂದಲೇ ಅಧ್ಯಾತ್ಮ ಸೇವೆಯನ್ನು ಮಾಡಿದ ಬಂಗಾಳದೇಶದ ಗೌರಂಗ ಪ್ರಭುಗಳು ಒಂದು ದಿನ ಒಂದು ಹಳ್ಳಿಗೆ ಹೋದರು. ಆ ಊರಿನಲ್ಲಿ ಒಬ್ಬ ದುಷ್ಟ ಪರಹಿಂಸಕನಿದ್ದ. ಅವನ ಹಿಂಸೆಯನ್ನು ತಡೆಯಲಾರದೆ ಊರಿನ ಸಭ್ಯಗೃಹಸ್ಥರು ಸ್ವಾಮಿಗಳಿಗೆ ಹೇಳಿದರು "ಕೆಟ್ಟ ವೃತ್ತಿಯವರನ್ನು ಒಳ್ಳೆಯವರನ್ನಾಗಿ ಮಾಡುವವನು ಈಶ್ವರ. ಅವನ ಪ್ರಾರ್ಥನೆ ಮಾಡೋಣ" ಎಂದರು ಗುರುಗಳು ಅಂದಿನ ರಾತ್ರಿ ಶಿಷ್ಯನೊಬ್ಬನನ್ನು ಕರೆದು 'ಅಯ್ಯಾ, ಆ ಪರಹಿಂಸಕನನ್ನು ಕರೆದುಕೊಂಡು ಬಾ' ಎಂದರು. ಗುರುಗಳ ಆಜ್ಞಾಪರಿಪಾಲಕನಾದ ಶಿಷ್ಯನು ಅವನ ಮನೆಗೆ ಹೋದನು. ಆ ಹಿಂಸಕನು ಇಚ್ಛಿತ ಪದಾರ್ಥಗಳ ಸೇವನೆಯಲ್ಲಿ ಮಗ್ನನಾಗಿದ್ದನು. ಆ ಶಿಷ್ಯನನ್ನು ನೋಡಿದ ಹಿಂಸಕನು ಹಿಂದು ಮುಂದು ನೋಡದೆ ಮದ್ಯಪಾನ ಮತ್ತನಾಗಿ ಒಂದು ಶೀಶೆಯನ್ನು ತೆಗೆದುಕೊಂಡು ಹೊಡೆದನು. ಶಾಂತಿಯೇ ತನ್ನ ಮುಖ್ಯ ಧ್ಯೇಯವನ್ನಾಗಿ ಇಟ್ಟುಕೊಂಡ ಶಿಷ್ಯನು ಗುರುಗಳಲ್ಲಿ ಬಂದು ನಡೆದ ಸಂಗತಿ ತಿಳಿಸಿದನು. ಗುರುಗಳು ಅದೇ ಶಿಷ್ಯನನ್ನು ಕರೆದುಕೊಂಡು ಬೆಳಗಿನ ಅಮೃತ ಕಾಲದಲ್ಲಿ ಹಿಂಸಕನ ಮನೆ ಸೇರಿ ನಿಧಾನ

ವಾಗಿ ಅವನ ಪಾದ ಒತ್ತುತ್ತಾ ಕುಳಿತರು. ಅವರ ಹಸ್ತ ಸೋಂಕಿನಿಂದ ದೇಹದಲ್ಲೆಲ್ಲಾ ರೋಮಾಂಚನವಾದ ಅವನು ತಕ್ಷಣ ಎದ್ದು ಗುರುಗಳಿಗೆ ನಮಸ್ಕರಿಸಿ ಅಂದಿನಿಂದ ಅವರ ಶಿಷ್ಯನಾಗಿ ನಡೆದುಕೊಂಡನು.

ಇದೇ ಗುರುಗಳ ದಯಾಳತ್ವ.

**ಶ್ರೀ ಗುರುರ್ವಾಚ**

ಸೋರಠಾ–ಸುನಹು ಶಿಷ್ಯ ಮಮಬಾತ,
ಜೋ ಪೂಛಹು ತುಮಸೊಕಹೂ ।
ಲಹೋಹಿಯೆ ಕುಸಲಾತ,
ಸಂಸಯ ಕೋವಾ ನಾ ರಹೈ ॥ ॥ ೨೫ ॥

ಅರ್ಥ – ಹೇ ಸಚ್ಛಿಷ್ಯನೇ ! ನನ್ನ ಮಾತನ್ನು ಕೇಳು. ನೀನು ಯಾವುದನ್ನು ಕೇಳುವೆಯೋ ಅದನ್ನು ಹರ್ಷದಿಂದ ಕೇಳು. ನಾನು ಅದಕ್ಕೆ ಉತ್ತರ ಹೇಳುತ್ತೇನೆ. ಆದರಿಂದ ನಿನ್ನ ಹೃದಯದಲ್ಲಿರುವ ಸಂಶಯವು ನಿವಾರಣೆಯಾಗಿ ಪರಮಾನಂದವನ್ನು ಹೊಂದುವಿ.

ದೋಹಾ – ಗುರುಕೀ ಲಖೀ ದಯಾಲುತಾ, ಶಿಷ್ಯ ಹಿಯೆ ಭೌ ಚೈನ ॥
ಕಾಜ ಸಿದ್ಧ ನಿಜಮಾನಿ ಹಿಯ, ಭಾಷೇ ಸವಿನಯ ಬೈನ ॥ ೨೬ ॥

ಅರ್ಥ – ಗುರುಗಳ ದಯಾಲತ್ವವನ್ನು ಕಂಡು ಶಿಷ್ಯನ ಹೃದಯದಲ್ಲಿ ಪರಮಾನಂದವಾಗಿ ತನ್ನ ಕಾರ್ಯವು ಸಫಲವಾಯಿತೆಂದು ನಿಶ್ಚಯಿಸಿ ಬಹಳ ವಿನಯದಿಂದ ಪ್ರಶ್ನೆ ಮಾಡುತ್ತಾನೆ.

**ತತ್ತ್ವದೃಷ್ಟಿರುವಾಚ**

ದೋಹಾ – ಭೋ ಭಗವನ ! ತುಮ ಕೃಪಾನಿಧಾನಾ
ಹೌ ಸರ್ವಜ್ಞ ಮಹೇಸ ಸಮಾನ ।

ಹವು ಅಜಾನಮತಿ ಕಛೂನ ಜಾನ್ಯೈ
ಜನ್ಮಾದಿಕ ಸಂಸೃತಿ–ಭಯಮಾನ್ಯೈ॥ ॥೨೭॥

ಅರ್ಥ – ಭಗವಾನ್ ! ತಾವು ಕೃ ಪಾ ನಿ ಧಾ ನ ರು, ಮಹೇಶ್ವರನಂತೆ ಸರ್ವಜ್ಞರು, ನಾವು ಅಜ್ಞಾನಿಗಳು, ನಾವು ಏನೂ ತಿಳಿಯದವರೂ, ಜನನ ಮರಣ ಭಯವುಳ್ಳವರೂ, ಸಂಸಾರ ಭಯವುಳ್ಳವರೂ ಆಗಿದ್ದೇವೆ

ಮಹೇಶ – ಮಹಾ + ಈಶ ಮಹಾ–ಸರ್ವ, ಈಶ–ಒಡೆಯ ಸರ್ವ ನಾಮರೂಪಗಳಿಗೂ ಅಧಿಷ್ಠಾನವಾಗಿರುವುದು, ಇದು ಈಶ್ವರತ್ವ ಲಕ್ಷಣ ಗುರುಗಳನ್ನು ಈಶ್ವರಸ್ಥಾನದಲ್ಲಿ ನೋಡಿದಾಗಲೇ ಜ್ಞಾನ ಬರುವುದು.

ಸರ್ವಜ್ಞ – ಎಲ್ಲವನ್ನೂ ಬಲ್ಲವರು. ಅರ್ಥಾತ್ ಸರ್ವ ಜಗತ್ತಿಗೂ ಮೂಲ ಕಾರಣವಾದ ಅಜ್ಞಾನವನ್ನೇ ತಿಳಿದಿರುತ್ತಾರೆ

ದೋಹಾ – ಕರ್ಮ ಉಪಾಸನ ಕೀನೇಭಾರೀ,
ಔರ ಅಧಿಕ ಜಗಪಾಸೀ ಡಾರೀ ।
ಆಪ ಉಪಾಯ ಕಹೌ ಗುರುದೇವಾ
ಹ್ವೈಜಾತೈ ಭವದುಖಕೋ ಛೇವಾ ॥ ॥೨೮॥

ಅರ್ಥ – ಗುರುದೇವಾ ! ನಾವು ಅನೇಕ ವಿಧವಾಗಿ ಕರ್ಮೋಪಾಸನೆ ಮಾಡಿದೆವು, ಅದರಿಂದ ಬಂಧವು ಇನ್ನಷ್ಟು ಹೆಚ್ಚಾಯಿತು. ತಾವು ಭವ ದುಃಖದ ನಿವೃತ್ತಿಗೆ ಉಪಾಯ ಹೇಳಿರಿ.

ಕರ್ಮೋಪಾಸನೆಯಿಂದ ದುಃಖ ನಿವೃತ್ತಿಯಾಗುವುದಿಲ್ಲ ಅಜ್ಞಾನಕ್ಕೆ ವಿರೋಧಿ ಜ್ಞಾನವೇ. ಕರ್ಮ ಮತ್ತು ಉಪಾಸನೆಗಳೂ ಸಹ ಅಜ್ಞಾನದ ಕಾರ್ಯಗಳೇ ಕಾರ್ಯವು ಕಾರಣವನ್ನು ನಿವೃತ್ತಿಮಾಡಲಾರದು.

ಕರ್ಮೋಪಾಸನೆಗಳನ್ನು ಮಾಡಿದಷ್ಟೂ ಬಂಧವು ಹೆಚ್ಚಾಗುತ್ತದೆ ಹೇಗೆಂದರೆ, ಯಜ್ಞಯಾಗಾದಿ ಕರ್ಮಗಳನ್ನು ಮಾಡಿದಾಗ ಮತ್ತು ಜಪ, ತಪ, ಧ್ಯಾನಾದಿ ಉಪಾಸನೆಗಳನ್ನು ಮಾಡಿದಾಗ "ನಾನು ಮಾಡಿದೆ" ನೆಂಬ

ಅಹಂಕಾರವು ಎದ್ದು ಕೂಡುತ್ತದೆ. ಬರೀ ಅಜ್ಞಾನದ ಬಂಧನಕ್ಕಿಂತ "ನಾನು ಮಾಡಿದೆ"ನೆಂಬ ಅಹಂಕಾರ ಸಹಿತ ಅಜ್ಞಾನವು ಹೆಚ್ಚು ಹೆಚ್ಚು ಬಂಧವನ್ನುಂಟುಮಾಡುತ್ತದೆ ಆದ್ದರಿಂದ "ಜ್ಞಾನೇನವಿನಃ ಮೋಕ್ಷನಸಿದ್ಯತೇ" ಜ್ಞಾನದ ವಿನಃ ಮೋಕ್ಷವು ಅರ್ಥಾತ್ ಬಂಧ ನಿವೃತ್ತಿಯು ಉಂಟಾಗುವುದಿಲ್ಲ

ಇನ್ನೊಂದು ಕಾರಣ. "ಕರ್ಮ" ಎನ್ನುವ ಪದ 'ಕೃ' ಧಾತುವಿನಿಂದ ಹುಟ್ಟಿದೆ 'ಕೃ' ಎಂದರೆ 'ಮಾಡು' ಎಂದು ಅರ್ಥ. ದೇಹ, ಇಂದ್ರಿಯ, ಪ್ರಾಣ, ಮನಸ್ಸಾದಿಗಳಿಂದಾಗುವ ಕೆಲಸವೆಲ್ಲವೂ ಕರ್ಮವೆ. ಉಪಾಸನೆಯು ಮನಸ್ಸಿನ ಕೆಲಸವಾದ್ದರಿಂದ ಅದೂ ಕರ್ಮವೆ.

ಈ ಕರ್ಮದಿಂದ ಉತ್ಪತ್ತಿ, ಪ್ರಾಪ್ತಿ, ವೈಕಾರ್ಯ ಮತ್ತು ಸಂಸ್ಕಾರ ಎಂದು ನಾಲ್ಕು ಪ್ರಯೋಜನಗಳು ಮೋಕ್ಷವು ಅರ್ಥಾತ್ ಬಂಧ ನಿವೃತ್ತಿಯು ಉತ್ಪತ್ತಿ, ಪ್ರಾಪ್ತಿ, ವೈಕಾರ್ಯ ಸಂಸ್ಕಾರವಾಗುವುದಲ್ಲ. ಏಕೆಂದರೆ ಅದು ನಿತ್ಯಸಿದ್ಧವಾದುದು.

ಶಂಕೆ – ಸದ್ಗುರುಗಳ ಮುಖದಿಂದ ಹೊರಟ ಮಹಾವಾಕ್ಯ ಶ್ರವಣ ಮಾಡುವುದರಿಂದ ಮೋಕ್ಷವು ಪ್ರಾಪ್ತವಾಗುತ್ತದೆ ಎಂದು ಹೇಳುತ್ತಾರಲ್ಲ? ಇದರಿಂದ ಮೋಕ್ಷವು ಪ್ರಾಪ್ತವಾದಂತಾಗಲಿಲ್ಲವೆ?

ಸಮಾಧಾನ – ಸದ್ಗುರುಗಳ ಮುಖದಿಂದ ಹೊರಟ ಮಹಾ ವಾಕ್ಯಾರ್ಥ ವಿಚಾರವು ಜಿಜ್ಞಾಸುಗಳ "ಅಹಂ ಬ್ರಹ್ಮಾಸ್ಮಿ" ಎಂಬ ಅಂತಃಕರಣ ವೃತ್ತಿಗೆ ವಿರೋಧವಾದ ಆವರಣವನ್ನು ನಿವೃತ್ತಿಮಾಡುತ್ತದೆಯೇ ವಿನಃ ಮೋಕ್ಷವನ್ನು ಹೊಸದಾಗಿ ಉಂಟುಮಾಡುವುದಿಲ್ಲ.

ಸಾರಾಂಶ – ಜನ್ಮ ಮರಣಾದಿ ಬಂಧವು ಕರ್ಮ ಉಪಾಸನೆಗಳಿಂದ ನಿವೃತ್ತಿಯಾಗುವುದಿಲ್ಲ. ಜ್ಞಾನದಿಂದಲೇ ನಿವಾರಣೆಯಾಗುವುದು.

ದೋಹಾ – ಪುನಿ ಚಾಹತ ಹಮ ಪರಮಾನಂದಾ  
ತಾಕೋ ಕಹೋ ಉಪಾಯ ಸುಛಂದ ।  
ಜಬಕಿರಪಾಕರಿ ಕಹಿಹೌ ತಾತಾ,  
ತಬ ಹ್ವೈಹೈಹಮರಿ ಕುಸಲಾತಾ ॥ ॥೨೯॥

ಅರ್ಥ – ಸ್ವಾಮಿ ! ಪುನಃ ನಾವು ಪರಮಾನಂದವನ್ನೂ ಬಯಸುತ್ತೇವೆ ತಾವು ಶಾಸ್ತ್ರೀಯವಾದ ಉಪಾಯವನ್ನು ಹೇಳಿರಿ. ತಾವು ಕೃಪೆಮಾಡಿ ಹೇಳಿದಾಗಲೇ ನಮಗೆ ಕ್ಷೇಮವಾಗುವುದು.

ತತ್ತ್ವದೃಷ್ಟಿಯು ಬರೀ ಭವದುಃಖ ನಿವೃತ್ತಿ ಒಂದನ್ನೇ ಬೇಡಲಿಲ್ಲ. ಪರಮಾನಂದ ಪ್ರಾಪ್ತಿಯನ್ನೂ ಬೇಡುತ್ತಾನೆ ಭವದುಃಖ ನಿವೃತ್ತಿಯು ವಿಧ್ವಂಸಕ ಪ್ರಕ್ರಿಯೆ ಪರಮಾನಂದ ಪ್ರಾಪ್ತಿಯು ವಿಧಾಯಕ ಪ್ರಕ್ರಿಯೆ. ಭಗವಂತನು ಗೀತೆಯ ೨ನೇ ಅಧ್ಯಾಯದ ೫೫ನೆಯ ಶ್ಲೋಕದಲ್ಲಿ "ಪ್ರಜಹಾತಿ ಯದಾ ಕಾಮಾನ್ಸರ್ವಾನ್ಪಾರ್ಥಮನೋಗತಾನ್ । ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥" ಮನಸ್ಸಿನಲ್ಲಿರುವ ಸರ್ವ ಕಾಮನೆಗಳೂ ನಿವಾರಣೆಯಾಗಿ ಆತ್ಮರತನಾಗಿರುವವನೇ ಅಂದರೆ ಮನಸ್ಸಿನಲ್ಲಿರುವ ಸರ್ವ ದುಃಖಗಳನ್ನು ಕಳೆದುಕೊಂಡು ಪರಮಾನಂದವನ್ನು ಭೋಗಿಸುವವನೇ ಸ್ಥಿತಪ್ರಜ್ಞನೆಂದು ಹೇಳಿರುತ್ತಾನೆ. ಆದ್ದರಿಂದ ತತ್ತ್ವದೃಷ್ಟಿಯು ಇಲ್ಲಿ ಭವದುಃಖ ನಿವೃತ್ತಿಯನ್ನೂ ಪರಮಾನಂದ ಪ್ರಾಪ್ತಿಯನ್ನೂ ಪ್ರಾರ್ಥಿಸುತ್ತಾನೆ.

ದೋಹಾ – ಮೋಚ್ಛಕಾಮ ಗು ರು ಶಿಷ್ಯಲಖೀ ತಾಕೋ ಸಾಧನ ಜ್ಞಾನ ।
ವೇದ ಉಕ್ತಭಾಖನ ಲಗೆ, ಜೀವ–ಬ್ರಹ್ಮ–ಭಿದಬಾನ ॥೩೦॥

ತಾತ್ಪರ್ಯ – ದುಃಖ ನಿವೃತ್ತಿ ಮತ್ತು ಪರಮಾನಂದ ಪ್ರಾಪ್ತಿ ಎಂಬುದಕ್ಕೆ ಮೋಕ್ಷವೆನ್ನುತ್ತಾರೆ. ಆ ಮೋಕ್ಷರೂಪ ಕಾಮನೆಯು ಶಿಷ್ಯನ ಹೃದಯದಲ್ಲಿ ಜನಿಸಿರುವುದನ್ನು ನೋಡಿ ಅದರ ಸಾಧನವಾದ ವೇದೋಕ್ತ ಜೀವಬ್ರಹ್ಮರ ಅಭೇದರೂಪ ಜ್ಞಾನವನ್ನೇ ಆ ಗುರುವು ಹೇಳಲಾರಂಭಿಸಿದರು.

ವಿಷಯಜ್ಞಾನವನ್ನೂ, ಭೇದಜ್ಞಾನವನ್ನೂ ಜ್ಞಾನವೆಂದು ಕರೆದರೂ ಆ ಜ್ಞಾನದಿಂದ ಮೋಕ್ಷವಾಗುವುದಿಲ್ಲ. ಏಕೆಂದರೆ ಈಗಾಗಲೇ ನಮ್ಮಲ್ಲಿ ಬೇಕಾದಷ್ಟು ವಿಷಯಜ್ಞಾನವಿದೆ. ಬರೀ ಮಾನವರಲ್ಲಿಯೇ ಅಲ್ಲ, ಪಶುಪಕ್ಷ್ಯಾದಿ ಜಂತುಗಳಲ್ಲಿಯೂ ವಿಷಯಜ್ಞಾನವು ಕಂಡುಬರುತ್ತದೆ. ನಾಯಿಯು ರೊಟ್ಟಿ

ಇದ್ದರೆ ಓಡಿಬರುತ್ತದೆ. ಕೋಲಿದ್ದರೆ ಓಡಿಹೋಗುತ್ತದೆ. ಇಂತಹ ವಿಷಯ ಜ್ಞಾನದಿಂದ ಮೋಕ್ಷವು ಸಿದ್ಧಿಸುವುದಿಲ್ಲ.

ಇನ್ನು ಭೇದಜ್ಞಾನವು ನಮ್ಮಲ್ಲಿ ಬೇಕಾದಷ್ಟು ಇದೆ. ನಾನೇ ಬೇರೆ, ಈಶ್ವರನೇ ಬೇರೆ ಎನ್ನುವ ಭೇದಜ್ಞಾನವನ್ನು ಶಾಸ್ತ್ರದಿಂದಲಾಗಲಿ, ಗುರುಗಳಿಂದಲಾಗಲಿ ತಿಳಿಯಬೇಕಾಗಿಲ್ಲ. ನಿಜವಾಗಿ ಭೇದಜ್ಞಾನವನ್ನು ತಿಳಿಸುವ ಶಾಸ್ತ್ರಗಳು ಶಾಸ್ತ್ರಗಳಲ್ಲ. ಏಕೆಂದರೆ ಇದು ನಮಗೆ ಮೊದಲೇ ಗೊತ್ತಿದೆ. ಮೊದಲೇ ಗೊತ್ತಿರುವುದನ್ನು ತಿಳಿಸುವುದು ಶಾಸ್ತ್ರವಲ್ಲ. ಶಾಸ್ತ್ರವು ಮೊದಲು ನಮಗೆ ಯಾವುದು ತಿಳಿದಿಲ್ಲವೋ ಅದನ್ನು ತಿಳಿಸಿಕೊಡುತ್ತದೆ. "ಅಜ್ಞಾತಂ ಜ್ಞಾಪಕಂಹಿ ಶಾಸ್ತ್ರಂ"

ಉದಾ – ಒಂದು ಊರಿನಲ್ಲಿ ಅನೇಕ ಶಾಸ್ತ್ರಗಳನ್ನು ಓದಿದ ಒಬ್ಬ ಭೋದಜ್ಞಾನಿ ಇದ್ದ. ಈ ಪಂಡಿತನು ಎಲ್ಲಾ ಕಡೆ ತಿರುಗಿ ಜನ ಮೆಚ್ಚುವಂತೆ ಮಾತಿಗೆ ನಾಲ್ಕಾರು ಶ್ಲೋಕಗಳ ಉದಾಹರಣೆ ಹೇಳುತ್ತಾ ಭೇದಜ್ಞಾನವನ್ನೇ ಬೋಧಿಸಿ ಪ್ರಶಸ್ತಿಪತ್ರಗಳನ್ನು ರಾಶಿ ಹಾಕಿದ್ದ. ಧರ್ಮ ಕರ್ಮ ಸಂಯೋಗದಿಂದ ಒಂದು ಊರಿಗೆ ಬಂದ. ಬೇಕಾದಷ್ಟು ಹೊತ್ತು ಉಪನ್ಯಾಸ ಮಾಡಿದ. ಈಶ್ವರನೇ ಬೇರೆ, ನೀನೇ ಬೇರೆ, ನೀನು ಈಶ್ವರನಾದರೆ ಒಂದು ಹೂ ಮಾಡಿ ಕೊಡು, ಈಶ್ವರ ಸರ್ವಜ್ಞ, ನೀನು ಅಲ್ಪಜ್ಞ; ಅವನು ಸರ್ವಶಕ್ತ, ನೀನು ಅಲ್ಪಶಕ್ತ; ಅವನು ಎಲ್ಲವನ್ನೂ ರಕ್ಷಿಸುತ್ತಾನೆ, ನೀನು ಒಂದು ದೇಹವನ್ನು ರಕ್ಷಿಸಲಾರೆ ಇತ್ಯಾದಿ ಇತ್ಯಾದಿಯಾಗಿ ಬೇಕಾದಷ್ಟು ಹೇಳಿ ಜನಗಳಿಗೆಲ್ಲಾ ನಾನೇ ಬೇರೆ, ಈಶ್ವರನೇ ಬೇರೆ ಎನ್ನುವುದನ್ನು ಇನ್ನಷ್ಟು ಹೆಚ್ಚಾಗಿ ತಿಳಿಸಿ ಕೊಟ್ಟನು. ಆ ಊರಿನಲ್ಲಿ ಬಹುದಿನಗಳಿಂದ ವಿಚಾರಸಾಗರ ಭಗವದ್ಗೀತಾದಿ ಶಾಸ್ತ್ರಶ್ರವಣ ಮಾಡಿದ ಒಬ್ಬ ಮುದುಕನಿದ್ದ. ಅವನೂ ಸಭೆಗೆ ಬಂದಿದ್ದ ಪಂಡಿತನ ವಾಗ್ಝರಿ ನಿರರ್ಗಳವಾಗಿ ಹರಿಯುತ್ತಿತ್ತು. ಜೀವಬ್ರಹ್ಮರ ಭೇದ ಸಿದ್ಧವಾಯಿತು. ಪ್ರಶಸ್ತಿಪತ್ರ ಕೇಳಿದ. ಒಬ್ಬರ ಮುಖ ಒಬ್ಬರು ನೋಡಿ ಪ್ರಶಸ್ತಿಪತ್ರ ಕೊಡಲು ತಯಾರಾದರು. ಆ ಮುದುಕನು ದೂರದಲ್ಲಿ ಕತ್ತೆಮೇಲೆ ಮೈಲಿಗೆ ಬಟ್ಟೆಗಳನ್ನು ಹೇರಿಕೊಂಡು ಕುರೂಪಿಯಾಗಿ ಹೋಗುತ್ತಿದ್ದ ಒಬ್ಬ ಅಗಸರವನನ್ನು ಸಭೆಗೆ ಕರೆದುಕೊಂಡು ಬಂದು, ಸಭೆಯ ಮಧ್ಯದಲ್ಲಿ ನಿಲ್ಲಿಸಿ

ಅವನಿಗೆ "ಸ್ವಾಮಿ, ನೀನೇ ದೇವರು, ನೀನು ಪರಬ್ರಹ್ಮ, ಸರ್ವಜ್ಞ, ಸರ್ವಶಕ್ತ, ಎಲ್ಲವನ್ನೂ ಮಾಡುವವನು" ಎಂದು ಉದ್ದಕ್ಕೆ ದೀರ್ಘದಂಡ ನಮಸ್ಕಾರ ಮಾಡಿದ ಆಗ ಥರಥರನೆ ನಡುಗುತ್ತ ಹೆದರಿದ ಆ ಅಗಸನು "ಸ್ವಾಮಿ ಸ್ವಾಮಿ, ಮಹಾಪರಾಧವಾಯಿತು ನಾನು ಸಾಮಾನ್ಯವಾದ ಒಬ್ಬ ಜೀವಿ. ನಾನು ಈಶ್ವರನಾಗಲಾರೆ ಸ್ವಾಮಿ" ಎಂದನು ಮುದುಕನು ಪಂಡಿತರ ಕಡೆ ತಿರುಗಿ "ಸ್ವಾಮಿ, ನಿಮ್ಮ ಉಪದೇಶ ನಮ್ಮೂರ ಸಾಮಾನ್ಯವಾದ ಅಗಸರವನಿಗೂ ತಿಳಿದಿದೆ ! ನೀವು ಇಷ್ಟು ಕಷ್ಟಪಟ್ಟು ಅಭ್ಯಾಸ ಮಾಡಿದ್ದು ವ್ಯರ್ಥವಾಯಿತು. ಅಷ್ಟೇ ಅಲ್ಲ, ಪರ್ವತ ಬಗಿದು ಇಲಿ ಹಿಡಿದಂತಾಯಿತು ನಿಮ್ಮ ಹಣೆಯ ಬರಹ !" ಎಂದನು. ಹೇಳದೆ ಕೇಳದೆ ಪಂಡಿತನು ಕಾಲಿಗೆ ಬುದ್ಧಿ ಹೇಳಿದನು.

ಆದ್ದರಿಂದ ಭೇದಜ್ಞಾನವು ಜ್ಞಾನವಲ್ಲ. ಭೇದಜ್ಞಾನದಿಂದ ಯಾರಿಗೂ ಯಾವಾಗಲೂ ಆನಂದ ಉಂಟಾಗಿಲ್ಲ ಎಂಬುದು ಸರ್ವರಿಗೂ ಅನುಭವ ವೇದ್ಯ

## ಶ್ರೀಗುರು ಉವಾಚ

ದೋಹಾ – ಪರಮಾನಂದ ಮಿಲಾಪ ತೂ, ಜೋಸಿಷ ಚಹೈ ಸುಜಾನ ।
ಜನ್ಮಾದಿಕ ದುಃಖನಾಸಪುನಿ, ಭ್ರಾಂತಿ–ಜನ್ಯ ತಿಹಿ ಮಾನ ॥೩೧॥

ದೋಹಾ – ಪರಮಾನಂದಸ್ವರೂಪತು ನಹಿ ತೊ ಮೈ ದುಃಖ–ಲೇಸ ।
ಅಜ ಅವಿನಾಶೀ ಬ್ರಹ್ಮಚಿತ್ ಜಿನ ಆನೈ ಹಿಯ ಕ್ಲೇಸ ॥೩೨॥

ತಾತ್ಪರ್ಯ – ಜಿಜ್ಞಾಸುವಾದ ಎಲೈ ಶಿಷ್ಯನೇ ! ಪರಮಾನಂದ ಪ್ರಾಪ್ತಿಯ ವಿಷಯದಲ್ಲಿಯೂ ಮತ್ತು ಜನ್ಮ ಮರಣಾದಿ ದುಃಖರೂಪ ಸಂಸಾರದ ನಿವೃತ್ತಿ ವಿಷಯವಾಗಿಯೂ ನಿನ್ನಲ್ಲಿ ಹುಟ್ಟಿರುವ ಇಚ್ಛೆಯು ಭ್ರಾಂತಿಯಿಂದ ಉತ್ಪನ್ನವಾಗಿರುವುದೆಂದು ತಿಳಿ ನೀನು ಸ್ವಯಂ ಪರಮಾನಂದ ಸ್ವರೂಪನಾಗಿದ್ದೀಯೆ ನಿನ್ನಲ್ಲಿ ದುಃಖದ ಲೇಶವೂ ಇರುವುದಿಲ್ಲ ನಿನ್ನಲ್ಲಿ ಜನ್ಮಮರಣಗಳಿಲ್ಲವೇ ಇಲ್ಲ. ನೀನು ಕೇವಲ ಚೇತನ ಬ್ರಹ್ಮವಾಗಿದ್ದೀಯೆ.

ಪ್ರಪಂಚದಲ್ಲಿ ಒಂದು ನಿಯಮವಿದೆ. ಯಾವ ವಸ್ತುವು ತನ್ನಲ್ಲಿ ಮೊದಲೇ ಇಲ್ಲವೋ ಅದನ್ನು ಪ್ರಾಪ್ತಿ ಮಾಡಿಕೊಳ್ಳುವ ಇಚ್ಛೆಯು ಸಹಜ ವಾದುದು ನೀನು ಇಚ್ಛಿಸುವ ಪರಮಾನಂದವು ನಿನ್ನ ಸ್ವರೂಪವೇ ಆಗಿದೆ. ಅದು ಸದಾ ಪ್ರಾಪ್ತವೇ ಅರ್ಥಾತ್ ನೀನು ಪರಮಾನಂದ ಸ್ವರೂಪನ ಆದ್ದರಿಂದ ಅದರ ಪ್ರಾಪ್ತಿಯ ಇಚ್ಛೆಯು ಭ್ರಾಂತಿಯಿಂದ ಉಂಟಾಗಿದೆ.

ಉದಾ – ಒಂದು ಸಾರಿ ಒಂದು ಕಸ್ತೂರಿ ಮೃಗಕ್ಕೆ ಕಸ್ತೂರಿಯ ಸುಗಂಧ ವಾಸನೆಯು ತಿಳಿದುಬಂತು ಗಂಧಕ್ಕೆ ಮರುಳಾದ ಮೃಗವು ತನ್ನ ನಾಭಿ ಕಮಲದಲ್ಲಿರುವ ಕಸ್ತೂರಿಯನ್ನು ತಿಳಿಯದೆ ಹುಡುಕುತ್ತಾ ಹುಡು ಕುತ್ತಾ ಅನ್ನನೀರು ಬಿಟ್ಟು ಮರಣ ಸ್ಥಿತಿಗೆ ಬಂದಿತು. ಆ ಸ್ಥಿತಿಯಲ್ಲಿ ಅದರ ಮೂಗು ನಾಭಿ ಕಮಲಕ್ಕೆ ಸಂಬಂಧಪಟ್ಟಿತು ಆಗ "ಅಯ್ಯೋ! ಸುಗಂಧ ವಾಸನೆ ನನ್ನಲ್ಲಿಯೇ ಇದೆಯಲ್ಲಾ! ನಾನು ಭ್ರಾಂತಿಯಿಂದ ಹೊರಗೆ ಎಲ್ಲೆಲ್ಲಿಯೋ ಹುಡುಕಿದೆನು" ಎಂದುಕೊಂಡಿತು.

ಅದರಂತೆ ಮಾನವರೆಲ್ಲರೂ ತಾನು ಪರಮಾನಂದ ಸ್ವರೂಪನೆಂದು ತಿಳಿಯದೆ, ಭ್ರಾಂತಿಯಿಂದ ವಿಷಯಗಳಲ್ಲಿ ಆನಂದವಿದೆ ಎಂದು ವಿಷಯಗಳ ಮರೆ ಹೋಗುತ್ತಾರೆ ಇದು ಭ್ರಾಂತಿಯಿಂದ ಉಂಟಾದುದು. ತಾನೇ ಕಡಲೇ ಹಿಟ್ಟಿಗೆ ಸಿಹಿಯನ್ನುಂಟು ಮಾಡಿದ ಬೆಲ್ಲವು ಕಡಲೇ ಹಿಟ್ಟನ್ನೇ ಸಿಹಿ ಬೇಡಿದಂತೆ ಮಾನವನು ಸ್ವತಃ ಆನಂದಸ್ವರೂಪನಾಗಿದ್ದು ಆನಂದವನ್ನು ಬೇಡುತ್ತಾನೆ.

"ಪರಮಾನಂದ ಸ್ವರೂಪ ತು" ಇದು ಮಹಾವಾಕ್ಯ. ಇದರಲ್ಲಿ "ತು" ಎಂಬುದು ಸ್ವರೂಪ ಬೋಧಕ ಪದ. ಯಾವ ವಾಕ್ಯವು ಅವ್ಯವಹಿತ ಪದಾರ್ಥ ವನ್ನು ಬೋಧೆ ಮಾಡುತ್ತದೆಯೋ ಅದು ಮಹಾವಾಕ್ಯ. ಇದರಿಂದ ಅಪ ರೋಕ್ಷ ಜ್ಞಾನವಾಗಲೇಬೇಕು ಈ ವಾಕ್ಯದಲ್ಲಿ "ತು" ಎಂಬ ಪದವು ತನ್ನ ಸ್ವರೂಪವನ್ನು ಬೋಧೆ ಮಾಡುತ್ತದೆ 'ಪರಮಾನಂದ' ಎಂಬ ಪದವು 'ತತ್' ಪದವನ್ನೂ, 'ಸ್ವರೂಪ' ಎಂಬ ಪದವು 'ಅಸಿ' ಪದಾರ್ಥವನ್ನೂ ಬೋಧೆ ಮಾಡುತ್ತದೆ. ಆದ್ದರಿಂದ "ಪರಮಾನಂದ ಮಿಲಾಪ ತು" ಎಂಬ

ವಾಕ್ಯವು "ತತ್ವಮಸಿ" ಮಹಾವಾಕ್ಯಾರ್ಥವನ್ನೇ ಬೋಧಿಸುವುದರಿಂದ, ಗುರುಗಳು ತತ್ತ್ವದೃಷ್ಟಿಗೆ ಮಹಾವಾಕ್ಯೋಪದೇಶವನ್ನು ಪ್ರಾರಂಭ ಮಾಡಿದ್ದಾರೆಂದು ತಿಳಿಯಬೇಕು

ಇನ್ನು ಯಾವುದು ತನ್ನಲ್ಲಿದ್ದು ತನಗೆ ತೊಂದರೆ ಕೊಡುತ್ತದೆಯೋ ಅದನ್ನು ನಿವೃತ್ತಿ ಮಾಡಿಕೊಳ್ಳಬೇಕೆಂಬ ಇಚ್ಛೆಯು ಸಹಜವಾದುದು ಜನ್ಮ ಮರಣಾದಿ ದುಃಖರೂಪವಾದ ಸಂಸಾರವು ನಿನ್ನಲ್ಲಿ ಇಲ್ಲವೇ ಇಲ್ಲ. ಇಲ್ಲದ ವಸ್ತುವನ್ನು ನಿವೃತ್ತಿ ಮಾಡಿಕೊಳ್ಳಬೇಕೆಂಬ ಇಚ್ಛೆಯೂ ಸಹ ಭ್ರಾಂತಿಯಿಂದಲೇ ಉಂಟಾಗಿದೆ.

ಉದಾ – ಸೂರ್ಯನ ''ಅಷ್ಟೋತ್ತರ ಶತನಾಮಾವಳಿ" ಎಂಬ ಸ್ತೋತ್ರದಲ್ಲಿ "ತಿಮಿರಾಪ ಹಾರಾಯನಮಃ" ಎಂಬ ಒಂದು ನಾಮವಿದೆ. ಒಬ್ಬ ಸೂರ್ಯ ಭಕ್ತನು ಸೂರ್ಯನನ್ನು ಕುರಿತು "ತಿಮಿರಾಪ ಹಾರಾಯ ನಮಃ'' ಎಂದು ಸ್ತೋತ್ರ ಮಾಡಿದ. ಇದು ಹೇಗೋ ಸೂರ್ಯನಿಗೆ ತಲುಪಿತು ಸೂರ್ಯನು ತಿಮಿರ ಅರ್ಥಾತ್ ಕತ್ತಲನ್ನು ನೋಡಬೇಕೆಂಬ ಇಚ್ಛೆಯಿಂದ ತನ್ನ ಮಿಲಿಟರಿಯೊಡನೆ ಹೊರಟ ! ಹುಡುಕುತ್ತಾ ಹುಡುಕುತ್ತಾ ಈಗಿನವರೆಗೆ ಸುತ್ತುವರಿಯುತ್ತಾ ಹೊರಟಿದ್ದಾನೆ. ಅಯ್ಯೋ ! ಕತ್ತಲು ಸೂರ್ಯನಿಗೆ ಸಿಕ್ಕುವುದುಂಟೆ !

ದುಃಖ ನಿವೃತ್ತಿಗಾಗಿ ಹೊರಟಿರುವ ನಿಮ್ಮೆಲ್ಲರ ಪಾಡು ಹಾಗಾಗಿದೆ. ನಿಮ್ಮಲ್ಲಿ ದುಃಖದ ಲೇಶವೂ ಇಲ್ಲ ಇಲ್ಲದ ದುಃಖವನ್ನು ನಿವೃತ್ತಿಮಾಡಿಕೊಳ್ಳಬೇಕೆಂಬುದೂ ಸಹ ಭ್ರಾಂತಿಯಿಂದ ಉಂಟಾದುದು.

ಅಯ್ಯಾ ! ಜನ್ಮ ಮರಣ ರಹಿತನಾದ ಯಾವ ಬ್ರಹ್ಮನಿದ್ದಾನಲ್ಲ, ಆ ಬ್ರಹ್ಮವೇ ನೀನು ಆದ್ದರಿಂದ ನಿನ್ನ ಹೃದಯದಲ್ಲಿ ಜನ್ಮ ಮರಣಾದಿ ಖೇದಗಳನ್ನು ತಂದುಕೊಳ್ಳಬೇಡ

ಯಾರನ್ನಾದರೂ ''ನೀನು ಯಾರಯ್ಯ" ಎಂದು ಕೇಳಿದರೆ "ನಾನು ಇಂಥವರ ಮಗ'' ನೆಂದು ಹೇಳುತ್ತಾನೆ ನಿಶ್ಚಲದಾಸರು ನಮ್ಮನ್ನು 'ಅಜ,

ಅವಿನಾಶಿ, ಬ್ರಹ್ಮ, ಚಿತ್' ಎಂಬುದಾಗಿ ಪರಿಚಯ ಮಾಡಿಕೊಡುತ್ತಾರೆ ಅಜ – ಅಂದರೆ ಹುಟ್ಟಿಲ್ಲದವನು ಆತ್ಮನಿಗೆ ಹುಟ್ಟಿಲ್ಲ. 'ಹುಟ್ಟು ಇದೆ' ಎಂದರೆ ಹುಟ್ಟಿಸಿದವನೊಬ್ಬ ಇರಬೇಕು ಜನ್ಯ ಪದಾರ್ಥಕ್ಕೆ ಜನಕನಿರ ಬೇಕೆಂಬುದು ನೇಮ ಹಾಗಾದರೆ ಆತ್ಮನಿಗೆ ಜನಕನಾರು ? ಶಾಸ್ತ್ರಗಳ ಅವಲೋಕನದಿಂದಲೂ, ವಿಚಾರದ ವಿನಿಮಯದಿಂದಲೂ ಆತ್ಮನಿಗೆ ಜನಕ ಸಿಕ್ಕುವುದಿಲ್ಲ. ಆದ್ದರಿಂದ ಸ್ವರೂಪ ಭೂತನಾದ ಆತ್ಮನು ಅಜನು.

ಸ್ವರೂಪ ಭೂತನಾದ ಆತ್ಮನು "ಅವಿನಾಶಿ" ಯಾವ ಪದಾರ್ಥಕ್ಕೆ ಹುಟ್ಟಿದೆಯೋ ಅದಕ್ಕೆ ನಾಶವು ಖಂಡಿತ. ಹುಟ್ಟುವ ಕ್ರಿಯೆಯೇ ಇಲ್ಲದ ಮೇಲೆ ವಿನಾಶ ಎಂಬ ಕ್ರಿಯೆ ಎಲ್ಲಿಂದ ಬರುವುದು ! ಆದ್ದರಿಂದ ಆತ್ಮನು ಅವಿನಾಶಿ

ಸ್ವರೂಪ ಭೂತನಾದ ಆತ್ಮನು ಚಿತ್ಸ್ವರೂಪನು. ಯಾವುದು ತನ್ನ ಬೆಳಕಿನಲ್ಲಿ ತಾನು ಬೆಳಗಿ, ತನ್ನಲ್ಲಿ ಕಲ್ಪಿತವಾದ ಎಲ್ಲಾ ಪದಾರ್ಥವನ್ನೂ ಬೆಳಗುತ್ತದೆಯೋ ಅದು ಚಿತ್. ಸೂರ್ಯನು ತನ್ನ ಬೆಳಕಿನಲ್ಲಿ ತಾನು ಬೆಳಗಿ ತನ್ನ ಬೆಳಕಿಗೆ ಸಂಬಂಧಪಟ್ಟ ಸರ್ವ ಪದಾರ್ಥವನ್ನೂ ಬೆಳಗುವಂತೆ ಸ್ವರೂಪ ಭೂತನಾದ ಆತ್ಮನು ತನ್ನ ಬೆಳಕಿನಲ್ಲಿ ತಾನು ಬೆಳಗಿ ತನ್ನಲ್ಲಿ ಕಲ್ಪಿತವಾದ ಈ ಸಮಸ್ತ ಜಗತ್ತನ್ನೂ ಬೆಳಗುತ್ತಾನೆ.

ಇಲ್ಲಿ "ನೀನು ಅಜ, ಅವಿನಾಶಿ, ಬ್ರಹ್ಮ, ಚಿತ್ ಸ್ವರೂಪ"ನೆಂದು ಹೇಳಿದ್ದಾರೆ. 'ಅಜ, ಅವಿನಾಶಿ' ಎಂದು ಹೇಳಿರುವುದರಿಂದ ಆತ್ಮನು ಸ್ಥೂಲ ದೇಹಕ್ಕೆ ವಿಲಕ್ಷಣನೆಂದೂ, 'ಬ್ರಹ್ಮ'ವೆಂದು ಹೇಳಿರುವುದರಿಂದ ಆತ್ಮನು ಕಲ್ಪಿತವಾದ ಜಡ ಜಗತ್ತಿಗೆ ವಿಲಕ್ಷಣನೆಂದೂ, 'ಚಿತ್' ಎಂದು ಹೇಳಿರುವುದರಿಂದ ತ್ರಿಕಾಲದಲ್ಲೂ ಆತ್ಮನು ಅಜ್ಞಾನದ ಸಂಬಂಧವಿಲ್ಲದವ ನೆಂದೂ ಹೇಳಿದಂತಾಯಿತು.

ಸಾರಾಂಶ – ಪ ರ ಮಾ ನಂ ದ ವು ನಿನ್ನ ಸ್ವರೂಪವಾಗಿರುವುದರಿಂದ ಸರ್ವದಾ ಪ್ರಾಪ್ತವೇ ಆಗಿರುವುದು ಅದರ ಪ್ರಾಪ್ತಿ ಮಾಡಿಕೊಳ್ಳಬೇಕೆಂಬ ಇಚ್ಛೆಯು ಭ್ರಾಂತಿಯ ಹೊರತು ಸಂಭವಿಸುವುದಿಲ್ಲ. ಜನ್ಮ ಮರಣಾದಿ ದುಃಖರೂಪವಾದ ಸಂಸಾರವು ನಿನ್ನ ಸ್ವರೂಪದಲ್ಲಿ ಎಂದೂ ಇಲ್ಲ. ಇಲ್ಲದೇ

ಇದ್ದ ಸಂಸಾರವನ್ನು ನಾಶಮಾಡಿಕೊಳ್ಳಬೇಕೆಂಬ ಇಚ್ಛೆಯೂ ಸಹ ಭ್ರಾಂತಿಯ ಹೊರತು ಸಂಭವಿಸುವುದಿಲ್ಲ.

ಸಂಬಂಧ – ನಾನು ಆನಂದ ಸ್ವರೂಪನಾಗಿದ್ದರೆ ಪರಮಾನಂದವು ಯಾವಾಗಲೂ ಇರಬೇಕಾಗಿತ್ತು ಆದರೆ ವಿಷಯ ಭೋಗಿಸಿದಾಗ ಮಾತ್ರ ಆನಂದವು ಕಂಡು ಬರುತ್ತದೆ ಈ ಶಂಕೆಯನ್ನು ತತ್ತ್ವದೃಷ್ಟಿ ಗುರುಗಳ ಮುಂದಿಡುತ್ತಾನೆ

ದೋಹಾ – ವಿಷಯಸಂಗ ಕ್ಯೂ ಭಾನ ಹ್ವೈ, ಜೋ ಮೈ ಆನಂದ ರೂಪ ।
ಅಬ ಉತ್ತರ ಯಾಕೋ ಕಹೌ, ಶ್ರೀಗುರು ಮುನಿವರ-ಭೂಪ ॥

ಅರ್ಥ – ಜ್ಞಾನಿಗಳಲ್ಲಿ ಶ್ರೇಷ್ಠರಾದ ಗುರುದೇವಾ ! ನಾನು ಆನಂದ ರೂಪನೇ ಆಗಿದ್ದರೆ ವಿಷಯಸಂಗದಿಂದ ಆನಂದವು ಹೇಗೆ ಉಂಟಾಗುತ್ತದೆ ? ಈಗ ಇದಕ್ಕೆ ಉತ್ತರವನ್ನು ಹೇಳಿರಿ.

ನಾನು ಆನಂದ ರೂಪನಾಗಿದ್ದರೆ ಆನಂದವು ಯಾವಾಗಲೂ ಇರಬೇಕಾಗಿತ್ತು ಹಾಗಿರದೆ ವಿಷಯಗಳನ್ನು ಭೋಗಿಸಿದಾಗ ಮಾತ್ರ ಆನಂದವು ಭಾನವಾಗಿ ವಿಷಯಗಳ ಅಭಾವ ಕಾಲದಲ್ಲಿ ದುಃಖವಾಗುತ್ತದೆಯಲ್ಲಾ ? ಇದರಿಂದ ನೋಡಿದರೆ ಆನಂದವು ವಿಷಯಗಳಿಂದ ಉಂಟಾಗುವುದು ಸ್ಪಷ್ಟವಾಗಿದೆ. ಹಾಗಿದ್ದರೂ ಆನಂದವು ನಿನ್ನ ಸ್ವರೂಪವೆಂದು ಹೇಳುತ್ತೀರಲ್ಲ ?

## ಶ್ರೀ ಗುರುರ್ವಾಚ

ದೋಹಾ – ಆತಮ-ವಿಮುಖ-ಬುದ್ಧಿ ಜನ ಜೋಈ
ಇಚ್ಛಾಭತಾಹಿ ವಿಷಯಕೀ ಹೋಈ ।
ತಾಸೂಂ ಚಂಚಲ ಬುದ್ಧಿ ಬಖಾನೀ
ಸುಖ-ಆಭಾನ ಹೋಯ ತಹ ಹಾನೀ॥ ॥೩೪॥

ಜಬ ಅಭಿಲಷಿತ ಪದಾರಥ ಪಾವೈ
 ತಬ ಮತಿ ಛನ ವಿಚ್ಛೇಪ ನಸಾವೈ ।
ತಾವ್ಮೈ ಹ್ವೈ ಆನಂದ ಪ್ರತಿಬಿಂಬಾ
 ಪುನಿಛನ ಮ್ಯೈ ಬಹು ಚಾಹ ವಿಡಂಬಾ ॥ ॥೩೫॥

ತಾತೈ ಹ್ವೈ ಥಿರತಾಕೀ ಹಾನೀ
 ಸೋ ಆನಂದ ಪ್ರತಿಬಿಂಬ ನಸಾನೀ ।
ವಿಷಯಸಂಗ ಇಮು ಆನಂದ ಹೋಈ
 ಬಿನ ಸತ್‌ಗುರು ಯಹಲಖೈನ ಕೋಈ ॥ ॥೩೬॥

ತಾತ್ಪರ್ಯ – ಯಾವ ಮನುಷ್ಯನ ಬುದ್ಧಿಯು ಆತ್ಮನಿಂದ ವಿಮುಖ ವಾಗಿರುತ್ತದೆಯೋ ಅವನಿಗೆ ವಿಷಯದ ಇಚ್ಛೆ ಉಂಟಾಗುತ್ತದೆ ; ವಿಷಯೇಚ್ಛೆ ಯಿಂದ ಬುದ್ಧಿಯು ಚಂಚಲವಾಗುತ್ತದೆ ಆ ಚಂಚಲವಾದ ಬುದ್ಧಿಯಲ್ಲಿ ಸುಖರೂಪ ಆತ್ಮನ ಪ್ರತಿಬಿಂಬವು ನಷ್ಟವಾಗುತ್ತದೆ. ಆ ಮನುಷ್ಯನಿಗೆ ತನ್ನ ಇಷ್ಟ ಪದಾರ್ಥವು ದೊರೆತಾಗ ಬುದ್ಧಿಯಲ್ಲಿರುವ ವಿಕ್ಷೇಪವು ಕ್ಷಣ ಮಾತ್ರ ನಾಶವಾಗುತ್ತದೆ ಅಂದರೆ ಬುದ್ಧಿಯು ಸ್ಥಿರವಾಗುತ್ತದೆ. ಸ್ಥಿರವಾದ ಬುದ್ಧಿ ಯಲ್ಲಿ ಆತ್ಮನ ಸ್ವರೂಪಭೂತವಾದ ಆನಂದವು ಪ್ರತಿಬಿಂಬಿಸುತ್ತದೆ. ಆಗ ಆನಂದದ ಅನುಭವ ಉಂಟಾಗುತ್ತದೆ ಇದರಿಂದ ವಿಷಯದಲ್ಲಿ ಸುಖವಿದೆ ಯೆಂಬುವುದು ಭ್ರಾಂತಿಯಿಂದ ಉಂಟಾದದ್ದು ಆದ್ದರಿಂದ ಅಂಥವರು ವಿಷ ಯದ ಇಚ್ಛೆಯಿಂದಲೇ ತಿರುಗುತ್ತಿರುತ್ತಾರೆ. ಯಾವಾಗ ಪುನಃ ವಿಷಯದ ಇಚ್ಛೆ ಉಂಟಾಗುತ್ತದೆಯೋ ಆಗ ಬುದ್ಧಿಯ ಸ್ಥಿರತೆಯು ನಷ್ಟವಾಗುತ್ತದೆ ಮತ್ತು ಅದೇ ಸಮಯದಲ್ಲಿ ಆ ಆನಂದರೂಪಾತ್ಮನ ಪ್ರತಿಬಿಂಬವೂ ಸಹ ನಷ್ಟ ವಾಗುತ್ತದೆ. ಇದರಿಂದ ವಿಷಯ ಸಂಗದಿಂದ ಆನಂದವು ಯಾವ ಪ್ರಕಾರ ಪ್ರಾಪ್ತವಾಯಿತು ಎಂಬುದು ಸದ್ಗುರುವಿನ ಹೊರತು ಯಾರೂ ತಿಳಿಯ ಲಾರರು.

ಆತ್ಮವಿಮುಖ ಬುದ್ಧಿಯ ಜನಗಳಿಗೆ ವಿಷಯದ ಇಚ್ಛೆ ಉಂಟಾಗುತ್ತದೆ ಜಗತ್ತಿನಲ್ಲಿ ಈಗ ಇಂಥವರ ಸಂಖ್ಯೆಯೇ ಹೆಚ್ಚಾಗಿರುತ್ತದೆ. ಯಾವಾಗ ಆತ್ಮ

ವಿಮುಖನಾಗಿ ಸಂಸಾರ ಸನ್ಮುಖನಾಗುತ್ತಾನೋ ಆಗಲೇ ದುಃಖ ಉಂಟಾಗುತ್ತದೆ. ಇದು ಒಂದು ನೇಮ ಧನಪುತ್ರವನಿತಾದಿಗಳೆಲ್ಲಾ ವಿಷಯಗಳೆನಿಸಿಕೊಳ್ಳುತ್ತವೆ. ಅರ್ಜುನನು ಶ್ರೀಕೃಷ್ಣ ಪರಮಾತ್ಮನ ಕಡೆ ವಿಮುಖನಾಗಿ ಸಂಸಾರವೆಂಬ ಸ್ವೈಸ್ಯದ ಕಡೆ ಸನ್ಮುಖನಾದಾಗಲೇ ದುಃಖ ಉಂಟಾಗಿದ್ದು ಯಾರಿಗೆ ದುಃಖ ಉಂಟಾದರೂ ಹೀಗೇ ಭಾವಿಸಬೇಕು

ಈ ವಿಷಯೇಚ್ಛೆಯಿಂದ ಬುದ್ಧಿಯು ಚಂಚಲವಾಗುತ್ತದೆ, ಅಂದರೆ ವಿಕ್ಷೇಪ ಉಂಟಾಗುತ್ತದೆ ಆ ಚಂಚಲವಾದ ಬುದ್ಧಿಯಲ್ಲಿ ಸುಖರೂಪ ಆತ್ಮನ ಪ್ರತಿಬಿಂಬ ಬೀಳುವುದಿಲ್ಲ.

ಉದಾ – ಬುಗ್ಗೆಯ ನೀರು ನಿಸ್ತರಂಗವಾಗಿದ್ದಾಗ ಕೆಳಗಿರುವ ನೆಲವು ಸಹಜವಾಗಿ ಕಾಣುತ್ತದೆ ಮತ್ತು ಆ ನೀರಿನಲ್ಲಿ ಮುಖದ ಪ್ರತಿಬಿಂಬವು ಬೀಳುತ್ತದೆ ಆನಿಸ್ತರಂಗವಾದ ನೀರಿನಲ್ಲಿ ಒಂದು ಸಣ್ಣದಾದ ಕಲ್ಲು ಹಾಕಿದರೆ ನೀರಿನಲ್ಲಿ ತರಂಗ ಉಂಟಾಗಿ ಮುಖದ ಪ್ರತಿಬಿಂಬವು ನೀರಿನಲ್ಲಿ ಪ್ರತಿಫಲಿಸುವುದಿಲ್ಲ

ಅಂತಃಕರಣವೆಂಬ ಬುಗ್ಗೆಯ ನೀರಿನಲ್ಲಿ ಆತ್ಮನ ಪ್ರತಿಬಿಂಬವು ಬೀಳುತ್ತದೆ ಯಾವಾಗ ಅಂತಃಕರಣದಲ್ಲಿ ವಿಷಯೇಚ್ಛೆಯೆಂಬ ಕಲ್ಲಿನ ಹರಳು ಬಿದ್ದಾಗ ಅಂತಃಕರಣದ ನಿಸ್ತರಂಗತ್ವವು ನಾಶವಾಗಿ ವಿಕ್ಷೇಪ ಉಂಟಾಗುತ್ತದೆಯೋ ಆಗ ಅದರಲ್ಲಿ ಸುಖರೂಪ ಆತ್ಮನ ಪ್ರತಿಬಿಂಬವು ಪ್ರತಿಫಲಿಸುವುದಿಲ್ಲ.

ಉದಾ – ಒಂದು ಕನ್ನಡಿಯಿದೆ. ಅದು ನಿಶ್ಚಲವಾಗಿದ್ದಾಗಲೇ ಮುಖದ ಪ್ರತಿಬಿಂಬವು ಬೀಳುವುದು. ಚಂಚಲವಾಗಿದ್ದರೆ ಪ್ರತಿಬಿಂಬ ಬೀಳುವುದಿಲ್ಲ

ಇನ್ನು ಯಾವ ವಿಷಯದ ಇಚ್ಛೆಯು ಉಂಟಾಗಿರುವುದೋ ಆ ವಿಷಯವು ಅವನಿಗೆ ಪ್ರಾಪ್ತವಾದ ಮೇಲೆ ಅವನ ಬುದ್ಧಿಯು ನಿಸ್ತರಂಗವಾಗುತ್ತದೆ. ವಿಷಯೇಚ್ಛೆಯೇ ವಿಕ್ಷೇಪ; ಇಚ್ಛಿತ ಪದಾರ್ಥ ದೊರೆಯುವುದೇ ವಿಕ್ಷೇಪನಾಶ. ಆಗ ಬುದ್ಧಿಯು ಕ್ಷಣಮಾತ್ರ ಅಂತರ್ಮುಖವಾಗುತ್ತದೆ ಕ್ಷಣಮಾತ್ರ ಅಂತರ್ಮುಖವಾದ ಬುದ್ಧಿಯಲ್ಲಿ ಆತ್ಮನ ಸ್ವರೂಪವಾದ ಆನಂದವು ಪ್ರತಿಬಿಂಬಿತವಾಗುತ್ತದೆ. ಆಗ ಆ ಪುರುಷನು "ಆನಂದವಾಯಿತು" ಎನ್ನುತ್ತಾನೆ.

ಈ ಆನಂದವು ವಿಷಯದಿಂದ ಬಂತೆಂದು ಭ್ರಾಂತಿಪಡುತ್ತಾನೆ. ವಿಷಯದಲ್ಲಿ ಆನಂದವಿರುವುದೋ ಇಲ್ಲವೋ ಅವನಿಗೆ ತಿಳಿಯದು. ಆಗ ವಿಷಯಗಳ ಬೆನ್ನು ಹತ್ತುತ್ತಾನೆ. ಪ್ರತಿ ಪ್ರಾಣಿಕೋಟಿಯೂ ವಿಷಯಗಳನ್ನು ಇಚ್ಛಿಸುವುದು ಆನಂದಕ್ಕಾಗಿಯೆ ಯಾವಾಗ ವಿಷಯ ಭೋಗ ಪಡೆದನಂತರ ಆನಂದ ಭಾನವಾಯಿತೋ ಆಗ ಆ ಆನಂದವು ವಿಷಯದಿಂದಲೇ ಬರುತ್ತದೆಂದು ಪುನಃ ಪುನಃ ವಿಷಯಗಳನ್ನು ಭೋಗಿಸಲು ಇಚ್ಛಿಸುತ್ತಾನೆ.

ಒಂದು ವೇಳೆ ವಿಷಯದಲ್ಲಿ ಆನಂದ ಉಂಟಾಗುವುದಾದರೆ – ಒಂದು ವಿಷಯದಿಂದ ತೃಪ್ತನಾದ ಪುರುಷನಿಗೆ ಎರಡನೇ ವಿಷಯದ ಇಚ್ಛೆ ಉಂಟಾಗುತ್ತಲೇ ಮೊದಲನೇ ವಿಷಯದಿಂದ ಬಂದ ಆನಂದವು ಇರುವುದಿಲ್ಲ. ವಿಷಯದಿಂದಲೇ ಆನಂದ ಉಂಟಾಗುವುದಾದರೆ ಮೊದಲನೆ ವಿಷಯದಿಂದ ಬಂದ ಆನಂದವು ನಷ್ಟವಾಗಬಾರದಾಗಿತ್ತು ಹೀಗಾಗುವುದಿಲ್ಲ ನಮ್ಮ ಅನುಭವದಲ್ಲಿಯಾದರೋ ಸ್ವರೂಪಾನಂದದ ಭಾಸವು ಆಗುವುದಿಲ್ಲ ಏಕೆಂದರೆ ಯಾವ ಎರಡನೆಯ ವಿಷಯದ ಇಚ್ಛೆಯಿಂದ ಬುದ್ಧಿಯು ಚಂಚಲವಾಗಿರುವುದೋ ಆಗ ಅದರಲ್ಲಿ ಆತ್ಮನ ಆನಂದದ ಪ್ರತಿಬಿಂಬ ಬೀಳುವುದಿಲ್ಲ. ವಿಷಯದಿಂದಲೇ ಆನಂದವು ಬಂದಿದ್ದಾದರೆ ಎರಡನೆ ವಿಷಯದ ಇಚ್ಛೆ ಉಂಟಾದಾಗಲೂ ಮೊದಲನೆಯ ವಿಷಯದಿಂದ ಬಂದ ಆನಂದವು ಸದಾ ಇರಬೇಕಾಗಿತ್ತು. ಹಾಗೆ ಕಂಡು ಬರುವುದಿಲ್ಲ. ಆದ್ದರಿಂದ ವಿಷಯದಲ್ಲಿ ಆನಂದವಿಲ್ಲ. ಆದರೂ ಮನುಷ್ಯನು ತಪ್ಪು ತಿಳುವಳಿಕೆಯಿಂದ ವಿಷಯದ ಬೆನ್ನು ಹತ್ತಿದ್ದಾನೆ.

ಉದಾ – ನಾಯಿಯು ಶುಷ್ಕವಾದ ಎಲುಬನ್ನು ಕಡಿಯುತ್ತದೆ. ಅದರಿಂದ ಅದಕ್ಕೆ ಆನಂದ ಉಂಟಾಗುತ್ತದೆ. ಆ ಆನಂದವು ಎಲುಬಿನಿಂದ ಬಂತೆಂದು ತಿಳಿಯುತ್ತದೆ ನಿಜವಾಗಿ ಅದರ ಬಾಯಿಂದ ಬಂದ ರಕ್ತವೇ ಅದಕ್ಕೆ ರುಚಿಯನ್ನು ಕೊಡುತ್ತದೆ ಶುಷ್ಕ ಎಲುಬಿನಲ್ಲಿ ರುಚಿ ಇಲ್ಲ ಆದರೂ ಅದನ್ನು ತಿಳಿಯದೇ ಸುಮ್ಮನೆ ಎಲುಬು ಕಡಿಯುತ್ತದೆ

ಉದಾ ೨ – ಹಲ್ಲಿಲ್ಲದ ಮುದುಕರು ತಮ್ಮ ತುಟಿಯನ್ನು ಕಡಿಯುತ್ತಾ ಆನಂದಪಡುತ್ತಾರೆ. ಏಕೆಂದರೆ ತಮ್ಮ ತುಟಿಯಲ್ಲಿ ಆನಂದವಿರುತ್ತದೆಂದು ಅವರ ಭಾವನೆ. ಅದು ಅವರ ಜೊಲ್ಲಿನಲ್ಲಿರುವುದು ಅವರಿಗೆ ತಿಳಿಯದು.

ಒಂದು ವೇಳೆ ವಿಷಯದಲ್ಲಿಯೇ ಆನಂದವಿರುವುದಾದರೆ – ಗ್ರೀಷ್ಮ ಕಾಲದಲ್ಲಿ ನೀರಿನಿಂದ ಆನಂದವಾಗುತ್ತದೆ. ಚಳಿಗಾಲದಲ್ಲಿ ನೀರಿನಿಂದ ಆನಂದವಾಗದೆ ದುಃಖವಾಗುತ್ತದೆ ನೀರಿನಿಂದಲೇ ಆನಂದವಾಗುವುದಾದರೆ ಎಲ್ಲಾ ಕಾಲದಲ್ಲೂ ಆಗಬೇಕಾಗಿತ್ತು. ಚಳಿಗಾಲದಲ್ಲಿ ಬೆಂಕಿ ಕಾಯಿಸುವುದರಿಂದ ಆನಂದವಾಗುತ್ತದೆ ಬೇಸಗೆ ಕಾಲದಲ್ಲಿ ಬೆಂಕಿ ಕಾಯಿಸುವುದು ದುಃಖಕರವಾದುದು ಒಂದು ವಿಷಯವು ಒಂದು ಕಾಲದಲ್ಲಿ ಆನಂದ ಕೊಟ್ಟರೆ ಅದೇ ವಿಷಯವು ಇನ್ನೊಂದು ಕಾಲದಲ್ಲಿ ದುಃಖ ಕೊಡುತ್ತದೆ ಆದ್ದರಿಂದ ವಿಷಯದಲ್ಲಿ ಆನಂದವಿಲ್ಲವೆಂಬುದು ಸ್ಪಷ್ಟವಾಗುತ್ತದೆ.

ಶಂಕೆ – ಇಚ್ಛಿತ ವಿಷಯಗಳ ಭೋಗದಿಂದ ಅಂತಃಕರಣದ ಚಂಚಲತೆಯು ನಾಶವಾಗುವುದರ ಮೂಲಕ ಆನಂದದ ಭಾಸವಾಗುತ್ತದೆ ಎಂದಿರಿ. ಆದ್ದರಿಂದ ಆನಂದ ಪ್ರಾಪ್ತಿಗೆ ವಿಷಯಗಳು ಅನುಕೂಲವೇ ಆದಂತಾಯಿತಲ್ಲವೇ ?

ಸಮಾಧಾನ – ಮನುಷ್ಯನ ಬೇಡಿಕೆಗಳನ್ನು ಪೂರ್ಣ ಮಾಡುತ್ತಾ ಹೊರಟರೆ ಶತಕೋಟಿ ಜನ್ಮಗಳೂ ಸಾಲವು. ಆದ್ದರಿಂದ ಮನುಷ್ಯನು ಬೇಡಿಕೆಗಳನ್ನು ಕಡಿಮೆ ಮಾಡಬೇಕು. ಇದು ಯೋಗ ಮಾರ್ಗ. ಭೋಗ ಮಾರ್ಗದಿಂದ ಆನಂದ ಭೋಗಿಸುವುದು ನಾಯಿಯು ಆನಂದ ಕೊಡುತ್ತದೆಂದು ಒಣ ಎಲುಬನ್ನು ಕಡಿದಂತಾಗುತ್ತದೆ. ಇದನ್ನೇ ಭಗವಂತನು ಗೀತೆಯಲ್ಲಿ –

''ಕಾಮ ಏಷ ಕ್ರೋಧ ಏಷ–ರಜೋಗುಣಸಮುದ್ಭವಃ ।
ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ''॥

"ಬೇಡಿಕೆಯು ರಜೋಗುಣದಿಂದ ಉದ್ಭವವಾದುದು ಇದರ ಹೊಟ್ಟೆ ಬಹಳ ದೊಡ್ಡದು. ಇದು ಮಹಾಪಾಪಿ ಇದನ್ನು ವೈರಿ ಎಂದು ತಿಳಿ '' ಎಂದು ಹೇಳಿದ್ದಾನೆ ಆದ್ದರಿಂದ ಇಚ್ಛಿತ ಪದಾರ್ಥಗಳ ಭೋಗದಿಂದ ಅಂತಃಕರಣವನ್ನು ನಿಸ್ತರಂಗ ಮಾಡಿಕೊಳ್ಳುವ ಈ ನಿನ್ನ ಪ್ರಶ್ನೆಯು ಸರಿಯಾದುದಲ್ಲ.

## ವಿಷಯದಲ್ಲಿ ಆನಂದವಿಲ್ಲ ಎನ್ನುವುದಕ್ಕೆ ಯುಕ್ತಿಗಳು

೧. ಇಚ್ಛಿತ ವಸ್ತುವನ್ನು ಭೋಗಿಸಿ ಆನಂದಾನುಭವವಾದ ಮೇಲೆ ಮತ್ತೊಂದು ವಿಷಯದ ಬಯಕೆಯಾದರೆ ಮೊದಲು ಭೋಗಿಸಿದ ವಿಷಯವು ಸಮೀಪದಲ್ಲಿದ್ದರೂ ದುಃಖವಾಗುತ್ತದೆ. ವಿಷಯದಲ್ಲಿ ಆನಂದ ಇರುವುದಾದರೆ ವಿಷಯ ಇರುವವರೆಗೂ ಆ ಆನಂದವಿರಬೇಕಾಗಿತ್ತು.

ಉದಾ – ಮಾವಿನ ಹಣ್ಣುಗಳನ್ನು ತಿನ್ನಬೇಕೆಂಬ ಇಚ್ಛೆಯುಳ್ಳ ಒಬ್ಬ ಮನುಷ್ಯನು ಒಂದು ಡಜನ್ ಹಣ್ಣುಗಳನ್ನು ತರಿಸಿ ಅದರಲ್ಲಿ ಮೂರು ಹಣ್ಣುಗಳನ್ನು ತಿಂದನು ಆಗ ಅವನಿಗೆ ಆನಂದವಾಯಿತು ಪುನಃ ಕಾಫಿ ಕುಡಿಯಬೇಕೆಂಬ ಇಚ್ಛೆಯುಂಟಾದಾಗ ದುಃಖವಾಗುತ್ತದೆ ಮೊದಲು ಉಂಟಾದ ಸುಖವು ನಾಶವಾಯಿತು. ವಿಷಯದಿಂದಲೇ ಆನಂದ ಬಂದಿದ್ದಾಗಿದ್ದರೆ ಮಾವಿನ ಹಣ್ಣುಗಳು ಪಕ್ಕದಲ್ಲಿರುವವರೆಗೂ ಆನಂದವಿರಬೇಕಾಗಿತ್ತು ಹಾಗೆ ಕಂಡುಬರುವುದಿಲ್ಲ. ಆದ್ದರಿಂದ ಆನಂದವು ವಿಷಯಗಳಿಂದ ಬರುವುದಲ್ಲ ಅದು ಆತ್ಮನ ಸ್ವರೂಪ

೨. ಒಬ್ಬಾನೊಬ್ಬ ಪುರುಷನ ಪ್ರಿಯ ಪುತ್ರನು ಅಥವಾ ಬೇರೆ ಯಾರೋ ಒಬ್ಬ ಅತ್ಯಂತ ಪ್ರೀತಿಗೆ ಪಾತ್ರರಾದವರೊಬ್ಬರು ಬಹು ದಿವಸಗಳ ನಂತರ ಅಕಸ್ಮಾತ್ ದರ್ಶನ ಕೊಟ್ಟರೆ ತತ್‌ಕ್ಷಣ ಅವರನ್ನು ನೋಡಿದ ಕೂಡಲೆ ಆನಂದ ಉಂಟಾಗುತ್ತದೆ. ಈ ಆನಂದವು ಸದಾ ಇರುವುದಿಲ್ಲ. ವಿಷಯದಲ್ಲಿಯೇ ಆನಂದವಿರುವುದಾದರೆ ಆನಂದಕ್ಕೆ ಕಾರಣನಾದ ಆ ಪುರುಷನು ಸಮೀಪದಲ್ಲಿಯೇ ಇರುವನು. ಆಗ ಮತ್ತೊಂದು ವಿಷಯದ ಇಚ್ಛೆಯಾದರೆ ಮೊದಲು ಆ ಪುರುಷನನ್ನು ನೋಡಿದಾಗ ಉಂಟಾದ ಆನಂದವು ಅವನು ಸಮೀಪದಲ್ಲಿದ್ದರೂ ನಾಶವಾಗುತ್ತದೆ. ಈ ಪ್ರಕಾರವಾಗಿ ವಿಷಯದಲ್ಲಿ ಆನಂದವಿಲ್ಲ ಎನ್ನುವುದು ಸ್ಪಷ್ಟವಾಗುತ್ತದೆ.

೩. ಅಥವಾ ಒಂದು ವೇಳೆ ವಿಷಯದಲ್ಲಿಯೇ ಆನಂದವಿರುವುದಾದರೆ ಸಮಾಧಿ ಕಾಲದಲ್ಲಿ ಯಾವ ಯೋಗಾನಂದದ ಭಾವ ಉಂಟಾಗುವುದೋ ಅದು ಉಂಟಾಗಬಾರದಾಗಿತ್ತು. ಏಕೆಂದರೆ ಸಮಾಧಿಯಲ್ಲಿ ಯಾವ ವಿಷಯಗಳ ಸಂಬಂಧವೂ ಇರುವುದಿಲ್ಲ. ವಿಷಯಗಳ ಸಂಬಂಧವಿಲ್ಲದೆಯೇ

ಆಗ ಆನಂದ ಉಂಟಾಗುತ್ತದೆ. ಇದರಿಂದ ನೋಡಿದರೆ ಆನಂದವು ವಿಷಯು ದಿಂದ ಬರುತ್ತದೆಂಬುದು ಸರಿಯಲ್ಲ.

೪ ಸಮಾಧಿಯು ಎಲ್ಲರೂ ಅನುಭವಿಸುವ ಅವಸ್ಥೆಯಲ್ಲ ಆದ್ದರಿಂದ ಎಲ್ಲರೂ ಅನುಭವಿಸುವ ಸುಷುಪ್ತಾವಸ್ಥೆಯನ್ನು ವಿಚಾರ ಮಾಡೋಣ

ಒಂದು ವೇಳೆ ವಿಷಯದಲ್ಲಿಯೇ ಆನಂದವಿರುವುದಾದರೆ ಸುಷುಪ್ತಿಯಲ್ಲಿ ಎಲ್ಲರೂ ಅನುಭವಿಸುವ ಆನಂದದ ಭಾವವು ಉಂಟಾಗಬಾರದಾಗಿತ್ತು. ಏಕೆಂದರೆ ಸುಷುಪ್ತಿಯಲ್ಲಿಯೂ ಸಹ ಯಾವ ವಿಷಯದ ಸಂಬಂಧವೂ ಇಲ್ಲ. ಅದು ನಿರ್ವಿಷಯಾನಂದ.

ಈ ಎಲ್ಲಾ ಕಾರಣಗಳಿಂದ ವಿಷಯದಲ್ಲಿ ಆನಂದವಿಲ್ಲ ಆದರೆ ಜಗತ್ತಿನ ಸರ್ವ ಪ್ರಾಣಿಗಳಿಗೂ ಆತ್ಮ ಸ್ವರೂಪಾನಂದವು ಭಾನವಾಗುತ್ತದೆ. ಈ ಕಾರಣದಿಂದ ವೇದದಲ್ಲಿ "ಆತ್ಮಸ್ವರೂಪಾನಂದವೇ ಸರ್ವ ರೀತಿಯಿಂದ ಬರುವ ಆನಂದ"ವೆಂದು ವರ್ಣಿಸಿದ್ದಾರೆ.

ದೋಹಾ – ವಿಷಯ–ಸಂಗ ತೇ ಹ್ವೈ ಪ್ರಗಟ, ಆತಮ ಆನಂದ–ರೂಪ ।
ಸಿಷ್ಯ ಸುನಾಯೋ ತೋಹಿ ಮೈ, ಯಹ ಸಿದ್ಧಾಂತ ಅನೂಪ
॥ ೩೭ ॥

ಸೋರಠಾ – ಸೋತೂ ಮೋಹಿ ನ ಭಾಖ, ಜೋ ಯಾಮೈ ಸಂಕಾ ರಹೀ ।
ನಿಜಮತಿ ಮೈ ಮತಿ ರಾಖ, ಮೈ ತಾಕೊ ಉತ್ತರ ಕಹೂ
॥೩೮॥

ತಾತ್ಪರ್ಯ – ಹೇ ಶಿಷ್ಯನೇ ! ವಿಷಯ ಸಂಗದಿಂದ ಆತ್ಮನ ಆನಂದ ರೂಪವು ಯಾವ ಪ್ರಕಾರ ಪ್ರ ಕ ಟ ವಾ ಗು ತ್ತ ದೆ ಎನ್ನುವ ಈ ಅನುಪಮ ಸಿದ್ಧಾಂತವು ನನ್ನಿಂದ ಹೇಳಲ್ಪಟ್ಟಿತು. ಒಂದು ವೇಳೆ ನಿನಗೆ ಈ ವಿಷಯದಲ್ಲಿ ಏನಾದರೂ ಸಂಶಯವಿದ್ದರೆ ಅದನ್ನೂ ಸಹ ಕೇಳು. ಅದನ್ನು ಮನಸ್ಸಿನಲ್ಲಿ ಗುಪ್ತವಾಗಿಟ್ಟುಕೊಳ್ಳಬೇಡ. ಅದಕ್ಕೂ ಸಹ ಉತ್ತರ ಹೇಳುತ್ತೇನೆ.

## ತತ್ತ್ವದೃಷ್ಟಿರುವಾಚ

ದೋಹಾ – ಭೋ ಭಗವನ್ ! ತುಮ ದೀನ ದಯಾಲಾ
ಮೇಟ್ಯೋ ಮಮ ಸಂಶಯ ತತ್ಕಾಲಾ ।

ಯಾಮೈ ಕಛುಕ ರಹೀ ಆಸಂಕಾ
ಸೋ ಭಾಖೂ ಅಬ ಹ್ವೈ ನಿರ್ಬಂಕಾ॥ ॥ ೩೯ ॥

ಆತಮ-ವಿಮುಖ ಬುದ್ಧಿ ಅಜ್ಞಾನೀ
ತಾಕೀ ಯಹ ಸಬ ರೀತಿ ಬಖಾನೀ ।
ಜ್ಞಾನೀ ಜನಕೋ ಕಹೌ ವಿಚಾರಾ
ಕೋಉನ ತುಮ ಸಮ ಔರ ಉದಾರಾ ॥ ॥ ೪೦ ॥

ಅರ್ಥ – ಭಗವಾನ್ ! ತಾವು ದೀನ ದಯಾಳುಗಳು ನನ್ನ ಸಂಶಯ ಅಂದರೆ, ಆತ್ಮನು ಆನಂದ ಸ್ವರೂಪನಾಗಿದ್ದರೆ ಆ ಆನಂದವು ಯಾವಾಗಲೂ ಇರಬೇಕಾಗಿತ್ತು. ವಿಷಯ ಸಂಗದಿಂದ ಆನಂದವು ಪ್ರಕಟವಾಗಬಾರದಾಗಿತ್ತು. ಹಾಗಾಗದೆ ಆನಂದವು ಯಾವಾಗಲೂ ಇರುವುದಿಲ್ಲ, ವಿಷಯ ಸಂಗದಿಂದ ಆನಂದ ಪ್ರಕಟವಾಗುತ್ತದೆ, ಆದ್ದರಿಂದ ಆತ್ಮನು ಆನಂದ ಸ್ವರೂಪನು ಎನ್ನುವ ವಿಷಯದಲ್ಲಿ ಬಂದ ಸಂಶಯವನ್ನು ದೂರ ಮಾಡಿದಿರಿ ಆದರೆ ಈ ವಿಷಯದಲ್ಲಿ ನನಗೆ ಸ್ವಲ್ಪ ಶಂಕೆಯಿದೆ ಅದನ್ನು ನಾನು ತಮ್ಮಲ್ಲಿ ನಮ್ರತಾಪೂರ್ವಕವಾಗಿ ಪ್ರಾರ್ಥಿಸಿಕೊಳ್ಳುತ್ತೇನೆ.

ಯಾವ ಜನಗಳು ಆತ್ಮನನ್ನು ತಿಳಿದಿಲ್ಲವೋ ಅವರ ಬುದ್ಧಿಯು ಆತ್ಮ ವಿಮುಖವಾಗಿರುತ್ತದೆ ಅಂದರೆ ಬಾಹ್ಯ ವಿಷಯಗಳಲ್ಲೇ ಸದಾರತವಾಗಿರುತ್ತದೆ. ಅಂತಹ ಆತ್ಮವಿಮುಖರಿಗೆ ಉಂಟಾಗುವ ಆನಂದದ ಸ್ವರೂಪವನ್ನು ಹೇಳಿದಿರಿ ಇನ್ನು ಜ್ಞಾನಿಗಳಿಗೆ ವಿಷಯೇಚ್ಛೆ ಉಂಟಾಗುತ್ತದೆಯೇ ಅಥವಾ ಇಲ್ಲವೆ ? ಮತ್ತು ಅವರಿಗೆ ವಿಷಯದಿಂದ ಆನಂದವು ಉಂಟಾಗುತ್ತದೆಯೇ ಇಲ್ಲವೆ ? ಹೇ ಭಗವಾನ್ ! ತಮ್ಮ ಸಮಾನ ಉದಾರರು ಯಾರಿದ್ದಾರೆ ? ಈ ಶಂಕೆಗೆ ಉತ್ತರ ಹೇಳಬೇಕಾಗಿ ಪ್ರಾರ್ಥಿಸುತ್ತೇನೆ.

## ಶ್ರೀ ಗುರುವಾಚ

ದೋಹಾ – ಸುನಹು ಶಿಷ್ಯ ಇಕ ಬಾತ ಮಮ, ಸಾವಧಾನ ಮನಕಾನ ।
ಹ್ವೈ ದ್ವೈ-ವಿಧ ಆತಮ-ವಿಮುಖ ಅಜ್ಞಾನೀ ರುಸುಜಾನ
॥ ೪೧ ॥

ಹ್ವೈ ವಿಸ್ಮೃತ ವ್ಯವಹಾರ ಮ್ಹೈ, ಕಬಹುಕ ಜ್ಞಾನೀ ಸಂತ ।
ಅಜ್ಞಾನೀ ವಿಮುಖ ಹೀ ರಹೈ ಯಹ ತೂ ಜಾನ ಸಿಧಂತ ॥೪೨॥

ತಾತ್ಪರ್ಯ – ಹೇ ಶಿಷ್ಯ ! ನೀನು ಮನಸ್ಸನ್ನೂ ಮತ್ತು ಶ್ರವಣೇಂದ್ರಿಯವನ್ನೂ ಸಾವಧಾನವಾಗಿ ಇಟ್ಟುಕೊಂಡು ಕೇಳು. ಆತ್ಮವಿಮುಖರು ಎರಡು ಪ್ರಕಾರವಾಗಿದ್ದಾರೆ ಒಬ್ಬನು ಅಜ್ಞಾನಿ, ಇನ್ನೊಬ್ಬನು ಜ್ಞಾನಿ ಜ್ಞಾನಿಗೂ ಸಹ ಕೆಲವು ಸಮಯ ವ್ಯವಹಾರ ಕಾಲದಲ್ಲಿ ಆತ್ಮರೂಪದ ಮರವೆ ಬರುತ್ತದೆ ಅಜ್ಞಾನಿಯಾದರೋ ಸದಾ–ಸರ್ವದಾ ಆತ್ಮ ಸ್ವರೂಪದಿಂದ ವಿಮುಖನಾಗಿಯೇ ಇರುತ್ತಾನೆ ಈ ಸಿದ್ಧಾಂತವನ್ನು ತಿಳಿ.

ಕೇವಲ ಅಜ್ಞಾನಿಯೇ ಆತ್ಮವಿಮುಖನಲ್ಲ. ಜ್ಞಾನವಂತನ ಬುದ್ಧಿಯೂ ಸಹ ವ್ಯವಹಾರಕ್ಕೆ ಬಂದಾಗ ತತ್ತ್ವವಿಮುಖ ಅರ್ಥಾತ್ ಆತ್ಮವಿಮುಖವಾಗುವುದು. ಜ್ಞಾನಿ ಮತ್ತು ಅಜ್ಞಾನಿಗಳಿಬ್ಬರೂ ವಿಷಯ ಭೋಗಿಸುವಾಗ ಸಮಾನರೆ ಒಂದು ವೇಳೆ ಜ್ಞಾನಿಯ ಬುದ್ಧಿಯು ಸರ್ವದಾ ಆತ್ಮಾಕಾರವೇ ಆಗಿದ್ದರೆ ಭೋಜನ ಪ್ರವಚನಾದಿಗಳು ನಡೆಯಲಾರವು. ಈ ಕಾರಣದಿಂದ ವ್ಯವಹಾರ ಕಾಲದಲ್ಲಿ ಜ್ಞಾನಿಯೂ ಸಹ ಆತ್ಮವಿಮುಖನಾಗಲೇ ಬೇಕು ವ್ಯವಹಾರ ಪೂರ್ಣವಾದ ಕೂಡಲೇ ಪುನಃ ಬುದ್ಧಿಯು ಆತ್ಮಾಕಾರವೇ ಆಗುವುದು.

ಅಜ್ಞಾನಿಯ ಬುದ್ಧಿಯಾದರೋ ಸದಾ ಸರ್ವತ್ರ ಆತ್ಮವಿಮುಖವಾಗಿರುವುದು. ಇನ್ನು ಜ್ಞಾನಿಯ ಬುದ್ಧಿಯು ಆತ್ಮವಿಮುಖವಾದಾಗ ವಿಷಯದಿಂದ ಉಂಟಾದ ಆನಂದವು ಅಜ್ಞಾನಿಯ ಆನಂದಕ್ಕೆ ಸಮವಾಗಿರುವುದು. ಏಕೆಂದರೆ ಅಂತಃಕರಣವು ಎರಡು ವಿಶೇಷ ವೃತ್ತಿಗಳನ್ನು ಒಂದೇ ಕಾಲದಲ್ಲಿ ಗ್ರಹಿಸಲಾರದು. ಒಂದು ಸಾಮಾನ್ಯ ವೃತ್ತಿ, ಒಂದು ವಿಶೇಷ ವೃತ್ತಿ ಇರಬಹುದು ಎರಡೂ ವಿಶೇಷ ವೃತ್ತಿಗಳಿರಲಾರವು. "ಇದಂ ರಜತಂ" – "ಇದು ಬೆಳ್ಳಿ" ಎಂಬಲ್ಲಿ 'ಇದಂ' ಸಾಮಾನ್ಯ ವೃತ್ತಿ, 'ರಜತಂ' ವಿಶೇಷ ವೃತ್ತಿ. ಈ ಎರಡು ವೃತ್ತಿಗಳು ಒಂದೇ ಸಮಯದಲ್ಲಿರಬಹುದು ಮತ್ತು ಜಾಗ್ರತಾಕಾರ ವೃತ್ತಿಯು ಉಂಟಾದಾಗ ಸ್ವಪ್ನಾಕಾರ ವೃತ್ತಿಯು ಉಂಟಾಗುವುದಿಲ್ಲ ಸ್ವಪ್ನಾಕಾರ ವೃತ್ತಿ ಉಂಟಾದಾಗ ಜಾಗ್ರತಾಕಾರ ವೃತ್ತಿಯು ಉಂಟಾಗು

ವುದಿಲ್ಲ. ಹಾಗೆಯೇ ಜ್ಞಾನಿಯ ಬುದ್ಧಿಯೂ ಸಹ ಆತ್ಮಾಕಾರ ವೃತ್ತಿರೂಪ ವಾದಾಗ ಅನಾತ್ಮಾಕಾರ ವೃತ್ತಿಯುಂಟಾಗುವುದಿಲ್ಲ. ಅಲ್ಲದೆ ಯಾವಾಗ ವೃತ್ತಿಯು ಅನಾತ್ಮಾಕಾರವಾಗಿರುವುದೋ ಆಗ "ಅಹಂ ಬ್ರಹ್ಮಾಽಸ್ಮಿ" ಎಂಬ ವಿಶೇಷ ವೃತ್ತಿ ಇರುವುದಿಲ್ಲ

ಉದಾ – ತಿಪ್ಪೆಯ ಮೇಲೆ ಮಲಗಿರುವ ಒಂದಾನೊಂದು ನಾಯಿಗೆ ದೇವಲೋಕದ ಸ್ವಪ್ನ ಬಿತ್ತು. ದೇವಲೋಕದಲ್ಲಿ ಎಲ್ಲಾ ಭೋಗಗಳನ್ನು ಭೋಗಿಸಿತು. ಎಚ್ಚರವಾಯಿತು. ಆಗ ಅದಕ್ಕೆ ಕಂಡದ್ದೇನು ? ತಿಪ್ಪೆಯೇ ತಿಪ್ಪೆಯು ಅಪರೋಕ್ಷವಾಯಿತು ; ದೇವಲೋಕವು ಪರೋಕ್ಷವಾಯಿತು.

ಜ್ಞಾನಿಗಳಿಗೆ ಸಂಸಾರವು ಪರೋಕ್ಷ. ಸ್ವಸ್ವರೂಪವು ಅಪರೋಕ್ಷ ಎರಡೂ ಒಂದೇ ಕಾಲದಲ್ಲಿರಲಾರವು. ಅಜ್ಞಾನಿಗಳಿಗೆ ಸ್ವಸ್ವರೂಪ ಚಿಂತನೆಯು ಪರೋಕ್ಷ; ಆತ್ಮ ಚಿಂತನೆಯು ಯಾವಾಗಲಾದರೊಮ್ಮೆ ಅಂದರೆ ಶ್ರವಣ ಕಾಲದಲ್ಲಿ ಮಾತ್ರವಿರುತ್ತದೆ. ಅರ್ಥಾತ್ ತಿಪ್ಪೆಯ ಮೇಲೆ ಮಲಗಿರುವ ನಾಯಿಗೆ ದೇವಲೋಕದ ಸ್ವಪ್ನ ಬಿದ್ದಂತೆ, ತತ್‌ಕ್ಷಣ ಅಂದರೆ ಶ್ರವಣದ ನಂತರ ಆತ್ಮಾಕಾರ ವೃತ್ತಿಯು ಹೋಗಿ ಅನಾತ್ಮಾಕಾರ ವೃತ್ತಿಯು ಹುಟ್ಟುತ್ತದೆ.

ಉದಾ – ಅನ್ಯ ವ್ಯವಹಾರದಲ್ಲಿ ಮಗ್ನನಾದ ಪುರುಷನಿಗೆ ಪೆಟ್ಟಿಗೆಯಲ್ಲಿ ತಾನು ತನ್ನ ಸ್ವಹಸ್ತದಿಂದ ಬಚ್ಚಿಟ್ಟ ಧನದ ವಿಸ್ಮೃತಿಯಾಗುವುದು. ಪುನಃ ಆ ವ್ಯವಹಾರವು ಸಮಾಪ್ತಿಯಾದನಂತರ ತಾನು ಇಟ್ಟ ಧನದ ಸ್ಮರಣೆಯಾಗುವುದು.

ಹಾಗೆಯೇ ಜ್ಞಾನಿಯ ಬುದ್ಧಿಯೂ ಸಹ ವ್ಯವಹಾರದಲ್ಲಿ ಮಗ್ನವಾಗಿದ್ದ ಕಾಲದಲ್ಲಿ ಆತ್ಮತತ್ತ್ವದ ವಿಸ್ಮೃತಿ ಉಂಟಾಗುವುದು. ಪುನಃ ಆ ವ್ಯವಹಾರವು ಸಮಾಪ್ತಿಯಾದನಂತರ ಮೊದಲಿನಂತೆಯೇ ಆತ್ಮಸ್ವರೂಪ ಆನಂದದ ಸ್ಮೃತಿ ಉಂಟಾಗುವುದು. ಆದ್ದರಿಂದ "ವ್ಯವಹಾರ ಕಾಲದಲ್ಲಿ ಜ್ಞಾನಿಯೂ ಸಹ 'ಪಶ್ವಾದಿಭಿಶ್ಚಾವಿಶೇಷಾತ್' ಪಶುವಿನಂತೆ ಅಂದರೆ ಅವಿವೇಕಿಗಳಂತೆ ವ್ಯವಹರಿಸುತ್ತಾನೆ" ಎಂದು ಶ್ರೀ ಶಂಕರ ಭಗವತ್ಪಾದಾಚಾರ್ಯರು ಶಾರೀರಕ ಭಾಷ್ಯದ ಪ್ರಥಮಾಧ್ಯಾಯದ ಪ್ರಥಮ ಪಾದದಲ್ಲಿ ಹೇಳಿದ್ದಾರೆ.

ಆದ್ದರಿಂದ ವ್ಯವಹಾರ ಕಾಲದಲ್ಲಿ ಜ್ಞಾನಿಗೂ ಅಜ್ಞಾನಿಗೂ ಯಾವ ಭೇದವೂ ಇರುವುದಿಲ್ಲ. ಆದರೆ ಭಾವನೆಯಲ್ಲಿ ವ್ಯತ್ಯಾಸವಿದೆ. ವಿಷಯ ಸಂಬಂಧದಿಂದ ಉಂಟಾದ ಆನಂದವನ್ನು ಜ್ಞಾನಿಯು "ಇದು ನನ್ನ ಸ್ವರೂಪಾನಂದ"ವೆಂದೂ, "ಇದು ನನ್ನ ಸ್ವರೂಪಕ್ಕೆ ಭಿನ್ನವಲ್ಲ"ವೆಂದೂ, "ಸ್ವರೂಪಾಭಾಸವೇ ಈ ಆನಂದ"ವೆಂದೂ ತಿಳಿಯುತ್ತಾನೆ. ಇದರಿಂದ ಜ್ಞಾನಿಗೆ ವಿಷಯ ಭೋಗಿಸುವಾಗಲೂ ಸಮಾಧಿ ಇರುತ್ತದೆ. ಇದನ್ನೇ ಭಗವಂತನು ಗೀತೆಯಲ್ಲಿ "ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯಚ" ಅಂದರೆ "ಅರ್ಜುನಾ, ಸರ್ವ ಕಾಲದಲ್ಲಿಯೂ ಸ್ವಸ್ವರೂಪದಲ್ಲಿಯೇ ಇದ್ದು ಸರ್ವ ಕೆಲಸಗಳನ್ನು ಮಾಡು'' ಎಂದಿದ್ದಾನೆ. ಆದ್ದರಿಂದ ಜ್ಞಾನಿಯು ಸದಾಸರ್ವತ್ರ ಸಮಾಧಿಯಲ್ಲಿರುತ್ತಾನೆ.

ಉದಾ. – ಬಾಲಕನು ತನ್ನ ಉಂಗುಷ್ಟವನ್ನು ಬಾಯಿಯಲ್ಲಿ ಇಟ್ಟು ಕೊಳ್ಳುವುದು, ದಂತರಹಿತ ವೃದ್ಧ ಪುರುಷನು ತನ್ನ ಅಧರೋಷ್ಟವನ್ನು ಚರ್ವಣ ಮಾಡುತ್ತಿರುವುದು ಅನ್ಯವಿಷಯಗಳ ಭೋಗದ ಇಚ್ಛೆಯಿಂದಲ್ಲ. ಹಾಗೆಯೇ ಜ್ಞಾನಿಯೂ ಸಹ ಶಾಸ್ತ್ರವಿರುದ್ಧ ಭೋಗಗಳನ್ನು ಮಾಡು ತ್ತಿದ್ದರೂ ಸ್ವಸ್ವರೂಪದ ಅನುಸಂಧಾನದಿಂದ ವಿಚಲಿತನಾಗದೆ ಇರುತ್ತಾನೆ.

ಸಾರಾಂಶ – ಅಯ್ಯಾ ! ನೀನು ಪರಮಾನಂದ ಸ್ವರೂಪನು. ಆನಂದ ವನ್ನು ವಿಷಯಗಳಿಂದ ಬೇಡುವವನಲ್ಲ ನಿನ್ನ ಆನಂದದ ಒಂದು ಅಣುವಿ ನಿಂದಲೇ ಈ ಜಗತ್ತು ಬಾಳುವುದು. ನೀನು ಆನಂದವನ್ನು ಬೇಡುವ ಭಿಕ್ಷೆ ಗಾರನಲ್ಲವೆಂದು ತಿಳಿ.

ಸಂಬಂಧ – "ನೀನು ಪರಮಾನಂದ ಸ್ವರೂಪನು", "ಜನನ ಮರಣಾದಿ ದುಃಖಗಳು ನಿನ್ನಲ್ಲಿ ಇಲ್ಲವೇ ಇಲ್ಲ'' ಎಂಬ ಎರಡು ಪ್ರಶ್ನೆಗಳಲ್ಲಿ ಮೊದಲನೆಯ ಪ್ರಶ್ನೆಗೆ ಸಂಬಂಧಪಟ್ಟ ಶಂಕಾ ಸಮಾಧಾನಗಳು ಹಿಂದೆ ಹೇಳಲ್ಪಟ್ಟವು. ಇನ್ನು ಎರಡನೇ ಪ್ರಶ್ನೆಗೆ ಸಂಬಂಧಪಟ್ಟ ಶಂಕಾ ಸಮಾ ಧಾನಗಳು ಹೇಳಲ್ಪಡುತ್ತವೆ. ಆ ವಿಷಯದಲ್ಲಿ ತತ್ತ್ವದೃಷ್ಟಿಯ ಪ್ರಶ್ನೆ :

## ತತ್ತ್ವದೃಷ್ಟಿರುವಾಚ

ದೋಹಾ – ಹೇ ಪ್ರಭು ಪರಮಾನಂದ ಬಖಾನ್ಯೋ
ಮೇರೊರೂಪಸುನ್ಯೈ ಪಹಚಾನೋ ।
ನಹಿತೋ ಮ್ಯೆ ಭವ–ಬಂಧನ–ಲೇಸಾ
ಕಹ್ಯೋ ಆಪ ವುನಿಯುಹ ಉಪದೇಸಾ॥ ॥ ೪೩ ॥

ಯಾವ್ಯೆ ಶಂಕಾ ಮುಹಿ ಯುಹ ಆವ್ಯೆ
ಜಾತ್ಯೆ ತವ ವಚ ಹಿಯು ನ ಸುಹಾವ್ಯೆ ।
ನಹಿವೋ ವ್ಯೆಯುಹ ಬಂಧ ಪಸಾರೋ
ಕಹೋಕೌನತೋ ಆಶ್ರಯ ನ್ಯಾರೊ ॥ ॥ ೪೪ ॥

ಭಗವಾನ್ ! ತಾವು "ನೀನು ಪರಮಾನಂದ ಸ್ವರೂಪನಾಗಿರುವೆ" ಎಂದು ಹೇಳಿದಿರಲ್ಲಾ, ಇದನ್ನು ನಾನು ಯಥಾರ್ಥವಾಗಿ ತಿಳಿದುಕೊಂಡೆನು. ಆದರೆ ತಾವು "ಜನ್ಮ ಮರಣಾದಿ ಸಂಸಾರ ದುಃಖಗಳು ನಿನ್ನಲ್ಲಿ ಇಲ್ಲವೇ ಇಲ್ಲ" ಎಂದು ಹೇಳಿದಿರಿ ಹಾಗೆ ಹೇಳಿದ್ದರೂ ಅದರ ನಿವೃತ್ತಿಯು ಸಂಭವಿಸುವುದಿಲ್ಲ ಈ ನಿಮ್ಮ ಮಾತು ನನ್ನ ಹೃದಯದಲ್ಲಿ ನಿಲ್ಲಲಿಲ್ಲ. ಒಂದು ವೇಳೆ ನನ್ನಲ್ಲಿ ಜನ್ಮ ಮರಣಾದಿ ಸಂಸಾರದ ದುಃಖವು ಇಲ್ಲವಾದರೆ ಅದು ಎಲ್ಲಿದೆ ? ಅದಕ್ಕೆ ಆಶ್ರಯರಾರು ? ನನಗಿಂತಲೂ ಭಿನ್ನವಾದ ಯಾವುದರ ಆಶ್ರಯದಲ್ಲಿ ದುಃಖ ವಿದೆ ? ಈ ವಿಷಯದಲ್ಲಿ ನನಗೆ ಸಂದೇಹವಿದೆ ಇದನ್ನು ಕೃಪೆಮಾಡಿ ತಿಳಿಸಲು ಕೇಳಿಕೊಳ್ಳುತ್ತೇನೆ.

## ಶ್ರೀ ಗುರುರ್ವಾಚ

ದೋಹಾ – ಸುನಹು ಸಿಷ್ಯ ಮಮ ಬಾನಿ, ಜಾತ್ಯೆತಬ ಸಂಕಾಮಿಟ್ಯೆ।
ಹೈಜಗಕೀ ಅತಿಹಾನಿ, ತೋ ಮೋ ಮ್ಯೆ ನಹಿ ಔರ ಮ್ಯೆ ॥೪೫॥

ತಾತ್ಪರ್ಯ – ಹೇ ಶಿಷ್ಯ ! ನನ್ನ ಮಾತನ್ನು ಕೇಳು. ಅದರಿಂದ ನಿನ್ನ ಶಂಕೆಯು ದೂರವಾಗುವುದು ಈ ಜಗತ್ತು ಅತ್ಯಂತ ಅಭಾವರೂಪ

ತಾತ್ಪರ್ಯ – ಹೇ ಶಿಷ್ಯ ! ನನ್ನ ಮಾತನ್ನು ಕೇಳು. ಅದರಿಂದ ನಿನ್ನ ಶಂಕೆಯು ದೂರವಾಗುವುದು ಈ ಜಗತ್ತು ಅತ್ಯಂತ ಅಭಾವರೂಪವಾಗಿರುವುದು ಇದು ನಿನ್ನಲ್ಲಿಯೂ, ನನ್ನಲ್ಲಿಯೂ, ಮತ್ತೆಲ್ಲಿಯೂ ಇರುವುದಿಲ್ಲ. ಹೀಗಿರುವಾಗ ಅದರ ಆಶ್ರಯ ಯಾರೆಂದು ಹೇಳಲಿ ?

ಇಲ್ಲಿ ನಿಶ್ಚಲದಾಸರು ದಿಟ್ಟತನದಲ್ಲಿ ಹೇಳುತ್ತಾರೆ "ಜಗತ್ತು ಅತ್ಯಂತಾಭಾವ ಇದಕ್ಕೆ ಇರುವಿಕೆಯೇ ಇಲ್ಲ"

ಸಂಸಾರದಲ್ಲಿ ಸತ್ತಾಗಳು ನಾಲ್ಕು : ೧ ಪಾರಮಾರ್ಥಿಕ ಸತ್ತ – ಇದು ಯಾವಾಗಲೂ ಬದಲಿಸುವುದಿಲ್ಲ. ಇಂತಹ ಪದಾರ್ಥ ಪರಬ್ರಹ್ಮ ಒಂದೇ ೨ ವ್ಯಾವಹಾರಿಕ ಸತ್ತ – ಇದು ಪಾರಮಾರ್ಥಿಕ ಸತ್ತಾಜ್ಞಾನವಾಗುವವರೆಗೆ ಇದ್ದು ಪಾರಮಾರ್ಥಿಕ ಜ್ಞಾನವಾದ ಕೂಡಲೇ ಇಲ್ಲದಂತಾಗುತ್ತದೆ ೩ ಪ್ರಾತಿಭಾಸಿಕ ಸತ್ತ – ವ್ಯವಹಾರ ಕಾಲವಿಲ್ಲದಾಗ ಇದ್ದು ವ್ಯವಹಾರಕಾಲ ಪ್ರಸಂಗ ಬಂದ ಕೂಡಲೇ ಇಲ್ಲದಂತಾಗುತ್ತದೆ. ಉದಾ – ಸ್ವಪ್ನ ಪದಾರ್ಥಗಳು ೪ ತುಚ್ಛಾ ಸತ್ತ – ಪಂದ್ಯಾಪುತ್ರ, ಶಶಶೃಂಗ ಇವು ತುಚ್ಛಾ ಸತ್ತಗಳು. ಇವು ಯಾವಾಗಲೂ ಇಲ್ಲ ಎಲ್ಲಿಯೂ ಇಲ್ಲ ಮೇಲೆ ಹೇಳಿದ ನಾಲ್ಕು ಸತ್ತಾಗಳಲ್ಲಿ "ಜಗತ್ತು ಅತ್ಯಂತಾಭಾವ" ಎಂಬುದು ಯಾವ ಸತ್ತಾಕ್ಕೆ ಸಂಬಂಧಪಟ್ಟದ್ದು ? ಜಗತ್ತು ಪಾರಮಾರ್ಥಿಕ ಸತ್ತೆಯಲ್ಲ ಏಕೆಂದರೆ ಮೂರೂ ಕಾಲದಲ್ಲಿರುವುದಿಲ್ಲ ಜಾಗ್ರದಾವಸ್ಥೆಯಲ್ಲಿ ಮಾತ್ರ ಇರುವಂತೆ ತೋರುತ್ತದೆ ಇನ್ನು ಪ್ರಾತಿಭಾಸಿಕ ಸತ್ತೆಯೂ ಅಲ್ಲ ಏಕೆಂದರೆ ವ್ಯವಹಾರ ಕಾಲದಲ್ಲಿರುತ್ತದೆ ಇನ್ನು ತುಚ್ಛ ಸತ್ತವೂ ಅಲ್ಲ. ಏಕೆಂದರೆ ಎದುರಿಗೆ ಸ್ಪಷ್ಟವಾಗಿ ಕಾಣುತ್ತದೆ ಆದ್ದರಿಂದ ಜಗತ್ತು ವ್ಯಾವಹಾರಿಕ ಸತ್ತ ಇದು ಪಾರಮಾರ್ಥಿಕ ಸತ್ತಾ ದೃಷ್ಟಿಯಿಂದ ಅತ್ಯಂತಾಭಾವ ಹೇಗೆಂದರೆ, ಪ್ರತೀತಿ ಕಾಲದಲ್ಲಿ ಮಾತ್ರ ತೋರುವ ಪ್ರಾತಿಭಾಸಿಕವಾದ ಕಲ್ಪಿತ ಸರ್ಪವು ವ್ಯಾವಹಾರಿಕ ಸತ್ತಾ ದೃಷ್ಟಿಯಿಂದ ಅತ್ಯಂತಾಭಾವವಾಗಿರುವಂತೆ, ಬ್ರಹ್ಮದಲ್ಲಿ ಕಲ್ಪಿತವಾದ ಈ ಜಗತ್ತು ಪರಮಾರ್ಥ ಸತ್ತಾ ದೃಷ್ಟಿಯಿಂದ ಅತ್ಯಂತಾಭಾವ. ಇದೇ "ಅತಿಹಾನಿ" ಎಂಬ ವಾಕ್ಯಕ್ಕೆ ಅರ್ಥ ಅಂದರೆ ಜಗತ್ತು ನಿತ್ಯ ನಿವೃತ್ತಿ

ಸಂಬಂಧ – ಅತ್ಯಂತಾಭಾವವಾದ ಜಗತ್ತು ತೋರಬಾರದಾಗಿತ್ತು ತೋರುವುದಕ್ಕೆ ಕಾರಣವೇನು ? ಪ್ರತ್ಯಕ್ಷವಾಗಿ ದುಃಖವು ಸರ್ವರಿಗೂ ವಿದಿತ ವಾಗಿದೆ. ಸರ್ವವಿದಿತವಾದ ದುಃಖವು ಇಲ್ಲವೇ ಇಲ್ಲವೆಂಬುವುದಾವರೂ ಹೇಗೆ?

ಪ್ರಶ್ನೆ – **ತತ್ತ್ವದೃಷ್ಟಿರುವಾಚ**

ದೋಹಾ – ಜೋ ಭಗವನ ಕಹು ಹೈ ನಹಿ, ಜನ್ಮ-ಮರನ ಜಗ-ಖೇದ ।
ಹ್ವೈ ಪ್ರತ್ಯಚ್ಛ ಪ್ರತೀತಿ ಕ್ಯೂ? ಕಹೋ ಆಪ ಯಹ ಭೇದ ॥ ೪೬ ॥

ಭಗವಾನ್ ! ಈ ಜನ್ಮ-ಮರಣ ದುಃಖರೂಪವಾದ ಈ ಜಗತ್ತು ನನ್ನಲ್ಲಿಯಾಗಲಿ, ಇನ್ನು ಎಲ್ಲಿಯಾದರೂ ಯಾವಾಗಲೂ ಇರುವುದಿಲ್ಲವೆಂದ ಮೇಲೆ ಇದು ಪ್ರತ್ಯಕ್ಷವಾಗಿ ಪ್ರತೀತಿಯಾಗುತ್ತದೆಯಲ್ಲಾ! ಯಾವ ವಸ್ತುವು ಇರುವುದಿಲ್ಲವೋ ಅದು ಪ್ರತೀತಿಯಾಗಬಾರದು. ಹೇಗೆ ವಂಧ್ಯಾಪುತ್ರ, ಶಶವಿಶಾಣ, ಆಕಾಶ ಪುಷ್ಪಗಳು ಇರುವುದಿಲ್ಲವೋ ಮತ್ತು ಅವು ಹೇಗೆ ಯಾವಾಗಲೂ ಪ್ರತೀತಿಯಾಗುವುದಿಲ್ಲವೋ ಹಾಗೆಯೇ ಈ ಸಂಸಾರವೂ ಸಹ ಇಲ್ಲದಿದ್ದ ಮೇಲೆ ಪ್ರತೀತಿಯಾಗಬಾರದಾಗಿತ್ತು. ಆದರೆ ಇದು ಪ್ರತೀತಿಯಾಗುತ್ತದೆ ಆದುದರಿಂದ ಈ ಜನ್ಮ ಮೊದಲಾದ ದುಃಖರೂಪವಾದ ಸಂಸಾರವು ಇಲ್ಲವೇ ಇಲ್ಲ ಅತ್ಯಂತಾಭಾವ ಎಂದು ಹೇಳುವುದು ಹೇಗೆ ಸಂಭವಿಸುತ್ತದೆ ?

ಸಮಾಧಾನ – **ಗುರುಉವಾಚ**

ದೋಹಾ – ಆತ್ಮರೂಪ, ಅಜ್ಞಾನತೈ, ಹ್ವೈ ಮಿಥ್ಯಾ ಪರತೀತಿ ।
ಜಗತ ಸ್ವಪ್ನ ನಭ-ನೀಲತಾ, ರಜ್ಜು-ಭುಜಗಕಿ ರೀತಿ ॥ ೪೭ ॥

ವಿವರಣೆ – ಇಲ್ಲದ ಪದಾರ್ಥ ತೋರುವುದಿಲ್ಲವೆಂಬ ನಿನ್ನ ಮಾತು ಸರಿಯಾದುದಲ್ಲ ; ಜನ್ಮ-ಮರಣಾದಿ ದುಃಖರೂಪವಾದ ಈ ಜಗತ್ತು ಸತ್ಯವಲ್ಲ. ಆದರೂ ಆತ್ಮನನ್ನು ಪರಬ್ರಹ್ಮವನ್ನಾಗಿ ತಿಳಿಯದ ಅಜ್ಞಾನದಿಂದ ಈ ಜಗತ್ತು ಮಿಥ್ಯಾ ಪ್ರತೀತಿಯಾಗುತ್ತದೆ. ಇಲ್ಲದ ಸ್ವಪ್ನ ಪದಾರ್ಥಗಳೂ, ಆಕಾಶದಲ್ಲಿಯ ನೀಲಿವರ್ಣವೂ ಮತ್ತು ರಜ್ಜುವಿನಲ್ಲಿ ಸರ್ಪವೂ ಸತ್ಯವಾಗಿರದೆ,

ಹೇಗೆ ಮಿಥ್ಯೆಯಾಗಿ ಪ್ರತೀತಿಯಾಗುವವೋ ಹಾಗೆಯೇ ಜನ್ಮಾದಿ ಜಗತ್ತು ಸತ್ಯವಾಗಿಲ್ಲ ಮಿಥ್ಯೆಯಾಗಿ ಪ್ರತೀತಿಯಾಗುತ್ತದೆ. ಭಗವಂತನೂ ಭಗವದ್ಗೀತೆಯ ಅ 9 ಶ್ಲೋ 33ರಲ್ಲಿ "ಅನಿತ್ಯಮಸುಖಂಲೋಕಂ'' ಎಂದಿದ್ದಾನೆ.

ಅಂದರೆ ಇಲ್ಲದ ಪದಾರ್ಥಗಳೂ ತೋರಬಹುದೆಂಬ ಭಾವ. ಸ್ವಪ್ನ ಪದಾರ್ಥಗಳೂ, ಆಕಾಶದ ನೀಲಿ ಬಣ್ಣವೂ, ಹಗ್ಗದಲ್ಲಿ ಕಂಡ ಸರ್ಪವೂ ನಿಜವಾಗಿಯೂ ಸ್ವರೂಪತಃ ಇಲ್ಲವೇ ಇಲ್ಲವಲ್ಲವೇ ? ಹಾಗಿದ್ದರೂ ಕಾಣುತ್ತವೆಯಲ್ಲ ! ಇಲ್ಲದ ಪದಾರ್ಥಗಳು ತೋರಬಾರದೆಂಬ ನಿನ್ನ ಮಾತಿಗೆ ಬಲವಿಲ್ಲ. ಏಕೆಂದರೆ ಇಲ್ಲದ ಪದಾರ್ಥಗಳೂ ತೋರುತ್ತವೆ. ಅದರಂತೆ ಪರಮಾರ್ಥವಾಗಿ ಮಿಥ್ಯವಾದ ಜಗತ್ತೂ ಸಹ ತೋರಬಹುದು. ಆದರೆ ಅದು ಮಿಥ್ಯೆ.

### ಪ್ರಶ್ನೆ - **ತತ್ತ್ವದೃಷ್ಟಿಉವಾಚ**

ದೋಹಾ – ಮಿಥ್ಯಾ ಸರ್ಪರಜ್ಜು ಮೈಜೈಸೈ
ಭಾಖ್ಯೋ ಭವ ಆತಮಮೈತೈಸೈ ।
ಕೈಸೈ ಸರ್ಪರಜ್ಜು ಮೈ ಭಾಸೈ
ಯಹ ಸಂಸಯ ಮನಬುದ್ಧಿವಿನಾಸೈ ॥ ॥ ೪೮ ॥

ಸ್ವಾಮಿ ! ರಜ್ಜುವಿನಲ್ಲಿ ತೋರಿದ ಕಲ್ಪಿತ ಸರ್ಪವು ಹೇಗೆ ಮಿಥ್ಯವಾಗಿರುವುದೋ, ಹಾಗೆಯೇ ಆತ್ಮನಲ್ಲಿ ತೋರಿದ ಈ ಭವ ದುಃಖವೂ ಮಿಥ್ಯೆ ಎಂದು ಹೇಳಿದಿರಿ. ಆದರೆ ನನಗೆ ದೃಷ್ಟಾಂತದ ಜ್ಞಾನವೇ ಇಲ್ಲ ದ್ರಾಷ್ಟಾಂತದ ಜ್ಞಾನವಾದರೂ ಹೇಗಾಗುವುದು ? ರಜ್ಜುವಿನಲ್ಲಿ ಸರ್ಪವು ಹೇಗೆ ಭಾಸವಾಯಿತು ? ಈ ಸಂಶಯವು ಮನಸ್ಸು ಮತ್ತು ಬುದ್ಧಿಗಳಲ್ಲಿ ಎದ್ದು ನಿಂತಿದೆ.

ವೇದಾಂತದಲ್ಲಿ ರಜ್ಜು–ಸರ್ಪ ದೃಷ್ಟಾಂತಕ್ಕೆ ಬಹಳ ಬೆಲೆಯಿದೆ. ರಜ್ಜು–ಸರ್ಪ ದೃಷ್ಟಾಂತ ತಿಳಿಯದೆ ಹೋದರೆ ಜಗತ್ಸತ್ಯತ್ವ ಭ್ರಾಂತಿಯು ನಿವೃತ್ತಿಯಾಗುವುದಿಲ್ಲ ಆದ್ದರಿಂದ ಇಲ್ಲಿ ರಜ್ಜು–ಸರ್ಪ ದೃಷ್ಟಾಂತವು ಉಕ್ತವಾಗಿದೆ.

## ಪ್ರಶ್ನೆಯ ಭಾವ

ದೋಹಾ – ಅಸತಖ್ಯಾತಿಪುನಿ ಆತಮಖ್ಯಾತಿ
ಖ್ಯಾತಿ ಅನ್ಯಥಾ ಅರು ಅಖ್ಯಾತೀ ।
ಸುಸ್ವೈಚಾರಿ ಮತ ಭ್ರಮಕೋ ರೌರಾ
ಮಾನೂ ಕೌನ ? ಕಹಹು ಯಹ ಚ್ಯೌರಾ ॥ ೪೯ ॥

ರಜ್ಜುವಿನಲ್ಲಿ ಸರ್ಪ ಮತ್ತು ಕಪ್ಪೆ ಚಿಪ್ಪಿನಲ್ಲಿ ರಜತ ಮೊದಲಾದ ಯಾವ ಭ್ರಮೆಗಳಿರುವವೋ ಆ ವಿಷಯದಲ್ಲಿ ನಾಲ್ಕು ಮತಗಳಿರುವವು.

೧ ಶೂನ್ಯವಾದಿಗಳ ಅಸತ್ ಖ್ಯಾತಿ ಮತ
೨. ಕ್ಷಣಿಕ ವಿಜ್ಞಾನವಾದಿಗಳ ಆತ್ಮಖ್ಯಾತಿ ಮತ
೩ ನ್ಯಾಯ ಮತ್ತು ವೈಶೇಷಿಕರ ಅನ್ಯಥಾಖ್ಯಾತಿ ಮತ
೪ ಸಾಂಖ್ಯ ಮತ್ತು ಪ್ರಭಾಕರರ ಅಖ್ಯಾತಿ ಮತ

### ೧. ಅಸತ್ ಖ್ಯಾತಿ ಮತ

ರಜ್ಜು–ಸರ್ಪ ದೃಷ್ಟಾಂತದಲ್ಲಿ ಇವರ ಅಭಿಪ್ರಾಯ : ರಜ್ಜುವಿನಲ್ಲಿ ಸರ್ಪವು ಹೇಗೆ ಅತ್ಯಂತ ಅಸತ್ತಾಗಿರುವುದೋ, ಹಾಗೆಯೇ ಅನ್ಯಸ್ಥಾನ ದಲ್ಲಿಯೂ ಸಹ ಅತ್ಯಂತ ಅಸತ್ ಆಗಿರುವುದು ಹೀಗೆ ಅತ್ಯಂತ ಅಸತ್ತಾದ ಸರ್ಪವು ರಜ್ಜುವಿನಲ್ಲಿ ಪ್ರತೀತಿಯಾಗುವುದಕ್ಕೆ ಅಸತ್ ಖ್ಯಾತಿ ಎಂದು ಹೇಳು ತ್ತಾರೆ

ಇದು ಶೂನ್ಯವಾದಿಗಳ ಮತ ಸುಷುಪ್ತಾವಸ್ಥೆಯಲ್ಲಿ ಏನೂ ಇರುವು ದಿಲ್ಲ. ನಂತರ ಜಗತ್ತು ಕಾಣುತ್ತದೆ ಆದ್ದರಿಂದ ಜಗತ್ತು ಶೂನ್ಯದಿಂದ ಬಂದಿದೆ ಶೂನ್ಯವೇ ಪರಮಾತ್ಮ ಅಸತ್ ಅಂದರೆ ಎಲ್ಲಿಯೂ ಇಲ್ಲದ್ದು; ಖ್ಯಾತಿ ಅಂದರೆ ತೋರುವುದು ಎಲ್ಲಿಯೂ ಇಲ್ಲದ್ದು ತೋರುತ್ತದೆ ಎಂದು ಹೇಳುತ್ತಾರೆ

### ೨. ಆತ್ಮ ಖ್ಯಾತಿ ಮತ

ಇದು ಬೌದ್ಧರ ಮತ ಇವರು ಕ್ಷಣಿಕ ವಿಜ್ಞಾನ ರೂಪವಾದ ಬುದ್ಧಿ ಯನ್ನೇ ಆತ್ಮನೆನ್ನುತ್ತಾರೆ ಇವರಿಗೆ ಕ್ಷಣಿಕ ವಿಜ್ಞಾನವಾದಿಗಳೆಂದು ಕರೆಯುತ್ತಾರೆ

ಇವರ ಅಭಿಪ್ರಾಯ ಹಗ್ಗದಲ್ಲಿಯೂ ಅದರಂತೆಯೇ ಬೇರೆ ಸ್ಥಳದಲ್ಲಿಯೂ ಸರ್ಪವಿಲ್ಲ ಸರ್ಪವು ಕ್ಷಣಿಕ ವಿಜ್ಞಾನ ರೂಪವಾದ ಬುದ್ಧಿಯಲ್ಲಿವೆ ಬುದ್ಧಿಯ ಹೊರಗ ಸರ್ಪವಿಲ್ಲ ಸರ್ವ ಪದಾರ್ಥಗಳೂ ಸಹ ಬುದ್ಧಿಯಿಂದ ಭಿನ್ನವಾಗಿರುವುದಿಲ್ಲ, ಬುದ್ಧಿಯು ಸರ್ವ ಪದಾರ್ಥಗಳ ಆಕಾರವನ್ನು ಧಾರಣ ಮಾಡುತ್ತಿರುತ್ತವೆ ಈ ಬುದ್ಧಿಯು ಕ್ಷಣಿಕ ವಿಜ್ಞಾನ ರೂಪವಾಗಿದೆ ಯಾವುದು ಕ್ಷಣ ಕ್ಷಣಕ್ಕೂ ಉತ್ಪನ್ನ ಮತ್ತು ನಾಶವಾಗುತ್ತದೆಯೋ ಅದೇ ವಿಜ್ಞಾನ ಆ ವಿಜ್ಞಾನವೇ ಸರ್ವ ಪದಾರ್ಥಗಳ ರೂಪದಿಂದ ಪ್ರತೀತಿಯಾಗುತ್ತದೆ ಆತ್ಮ= ಕ್ಷಣಿಕ ವಿಜ್ಞಾನ ರೂಪ ಬುದ್ಧಿ, ಅದರಲ್ಲಿ ಸರ್ಪರೂಪದಿಂದ ಖ್ಯಾತಿ (ಭಾನ) ಮತ್ತು ಕಥನವೇ ಆತ್ಮಖ್ಯಾತಿ ಮತ

ಇವರು ಜ್ಞಾನಾಧ್ಯಾಸವನ್ನು ಒಪ್ಪಿ ಅರ್ಥಾಧ್ಯಾಸವನ್ನು ಒಪ್ಪಿಲ್ಲ

### ೩. ಅನ್ಯಥಾ ಖ್ಯಾತಿ ಮತ

ಇದು ನೈಯಾಯಿಕರ ಮತ್ತು ವೈಶೇಷಿಕರ ಮತ ನೈಯಾಯಿಕ ಮತಾಚಾರ್ಯರು ಗೌತಮರು, ವೈಶೇಷಿಕ ಮತಾಚಾರ್ಯರು ಕಣಾದರು

ಇವರ ಅಭಿಪ್ರಾಯ · ಹುತ್ತ ಮೊದಲಾದ ಸ್ಥಳಗಳಲ್ಲಿ ಸತ್ಯವಾದ ಸರ್ಪವಿರುತ್ತದೆ ಅದು ರಜ್ಜುವಿನಲ್ಲಿರುವುದಿಲ್ಲ ಆದರೂ ಹುತ್ತದಲ್ಲಿರುವ ಸರ್ಪವು ನೇತ್ರದಿಂದ ಕಾಣಲ್ಪಡುತ್ತದೆ ಏಕೆಂದರೆ ನೇತ್ರದಲ್ಲಿ ದೋಷವಿದೆ ಆ ದೋಷದ ಬಲದಿಂದ ಹುತ್ತದಲ್ಲಿರುವ ಸತ್ಯ ಸರ್ಪವು ಸಮೀಪದಲ್ಲಿ ಪ್ರತೀತಿಯಾಗುತ್ತದೆ ಒಂದು ವೇಳೆ ಸತ್ಯವಾದ ಸರ್ಪಕ್ಕೂ ಮತ್ತು ನೇತ್ರಕ್ಕೂ ಮಧ್ಯೆ ಗೋಡೆ ಇತ್ಯಾದಿ ಪದಾರ್ಥಗಳಿದ್ದರೂ ಸಹ ದೋಷ ಸಹಿತ ನೇತ್ರಕ್ಕೆ ಈ ಸಾಮರ್ಥ್ಯ ಬರುತ್ತದೆ ಅದಕ್ಕೆ ಬಹು ದೂರದ ಹುತ್ತದಲ್ಲಿರುವ ಸರ್ಪವು ಪ್ರತೀತಿಯಾಗುತ್ತದೆ

ಈ ವಿಷಯದಲ್ಲಿ ಆಕ್ಷೇಪವೇನೆಂದರೆ – ದೋಷದಿಂದ ಸಾಮರ್ಥ್ಯವು ವೃದ್ಧಿಯಾಗುವುದಿಲ್ಲ, ಕ್ಷೀಣಿಸುತ್ತದೆ ಜಠರಾಗ್ನಿಯ ಪಚನ ಸಾಮರ್ಥ್ಯವು ವಾತ, ಪಿತ್ತ, ಕಫ ಮೊದಲಾದ ದೋಷಗಳಿಂದ ಕ್ಷೀಣವಾಗುವಂತೆ ನೇತ್ರದೋಷವೂ

ಸಹ ತಿಮಿರಾದಿ ದೋಷಗಳಿಂದ ಸಾಮರ್ಥ್ಯವು ಕ್ಷೀಣವಾಗಲಿಕ್ಕೇ ಬೇಕು. ಮತ್ತು ಹುತ್ತ ಮೊದಲಾದ ಸ್ಥಾನದಲ್ಲಿರುವ ಸರ್ಪದ ಜ್ಞಾನವು ದೋಷ ಸಹಿತ ನೇತ್ರದಿಂದಲೇ ಆಗುತ್ತದೆ ಎಂದ ಮೇಲೆ, ಶುದ್ಧ ನೇತ್ರದಿಂದ ಪರ ದೇಶದಲ್ಲಿದ್ದ ವಸ್ತುಗಳ ಪ್ರತ್ಯಕ್ಷಜ್ಞಾನವಾಗುವುದಿಲ್ಲ ; ಆದ್ದರಿಂದ ನೇತ್ರವು ದೋಷ ಸಹಿತವಾಗಿಯೇ ಇರಬೇಕು ಈ ಕಾರಣದಿಂದ "ದೋಷದಿಂದಲೇ ನೇತ್ರ ಸಾಮರ್ಥ್ಯವು ಅಧಿಕವಾಗುವುದು" ಎಂಬುದು ಸಮಂಜಸವಾಗಲಾರದು. ಮತ್ತು ಅದಕ್ಕೆ ಯಾವ ದೃಷ್ಟಾಂತವೂ ಇರುವುದಿಲ್ಲ.

ಇದಕ್ಕೆ ಸಮಾಧಾನವೇನೆಂದರೆ – ಈ ಆಕ್ಷೇಪವು ಸರಿಯಾದುದಲ್ಲ. ಏಕೆಂದರೆ ಇದು ಎಲ್ಲಾ ಕಡೆ ಸಂಭವಿಸುವುದಿಲ್ಲ. ದೋಷದಿಂದ ಸಾಮರ್ಥ್ಯವು ಹೆಚ್ಚಾಗಲೂಬಹುದು, ಕಡಿಮೆಯಾಗಲೂಬಹುದು. ಹೇಗೆಂದರೆ, ಪಿತ್ತ ದೋಷ ಇರುವವನು ನಾಲ್ಕು ಜನರು ಊಟ ಮಾಡುವಷ್ಟು ಅನ್ನವನ್ನು ಒಬ್ಬನೇ ಊಟ ಮಾಡುತ್ತಾನೆ. ಪಿತ್ತ ದೋಷದಿಂದ ಜಠರಾಗ್ನಿಯ ಪಚನ ಕಾರ್ಯ ಸಾಮರ್ಥ್ಯವು ಅಧಿಕವಾದಂತಾಯಿತು. ಅದರಂತೆ ನೇತ್ರದಲ್ಲಿ ತಿಮಿರಾದಿ ದೋಷಗಳಿರುವುದರಿಂದ ಅನ್ಯಸ್ಥಳದಲ್ಲಿರುವ ಸರ್ಪವನ್ನು ಪ್ರತ್ಯಕ್ಷ ಮಾಡುವ ಸಾಮರ್ಥ್ಯ ಉಂಟಾಗುತ್ತದೆ.

ಈ ಪ್ರಕಾರವಾಗಿ ಹುತ್ತ ಮೊದಲಾದ ಸ್ಥಳಗಳಲ್ಲಿರುವ ಸರ್ಪವು ಹಗ್ಗದಲ್ಲಿ ಖ್ಯಾತಿ (ಭಾನ) ಮತ್ತು ಕಥನವೇ ಅನ್ಯಥಾ ಖ್ಯಾತಿ ಮತ ಇರುವುದೊಂದು ಕಡೆ, ತೋರುವುದೊಂದು ಕಡೆ. ಇದೇ ಅನ್ಯಥಾ ಖ್ಯಾತಿ ಮತ.

## ಚಿಂತಾಮಣಿಕಾರನ ಮತ

ನ್ಯಾಯ ಮತದಲ್ಲಿ ಒಬ್ಬ ದೊಡ್ಡ ಪಂಡಿತನು ಉದಯವಾದನು. ಇವನು ''ನ್ಯಾಯ ತತ್ತ್ವ ಚಿಂತಾಮಣಿ'' ಎಂಬ ಗ್ರಂಥವನ್ನು ರಚಿಸಿ ಪ್ರಖ್ಯಾತನಾದನು. ಇವನ ಹೆಸರು ಗಂಗೇಶೋಪಾಧ್ಯಾಯನೆಂದಾದರೂ ಚಿಂತಾಮಣಿ ಗ್ರಂಥ ರಚಿಸಿದ್ದರಿಂದ ಚಿಂತಾಮಣಿಕಾರ ಎಂಬ ನಾಮವು ರೂಢವಾಯಿತು. ಇವನು ನ್ಯಾಯ ಶಾಸ್ತ್ರದಲ್ಲಿ ಅದ್ಭುತ ಕ್ರಾಂತಿಯನ್ನು

ಉಂಟುಮಾಡಿದನು ಇವನು ನ್ಯಾಯ ಶಾಸ್ತ್ರದಲ್ಲಿರುವ ಪ್ರತಿ ಪದಕ್ಕೂ ನವೀನ ಅರ್ಥ ಬರೆದು ಪ್ರಸಿದ್ಧನಾದನು. ಅನ್ಯಥಾ ಖ್ಯಾತಿ ಎಂಬ ಪದಕ್ಕೆ ಈ ಅರ್ಥ ಬರೆದಿದ್ದಾನೆ

ದೋಷ ಸಹಿತ ನೇತ್ರದಿಂದಲೇ ಹುತ್ತದಲ್ಲಿರುವ ಸರ್ಪದ ಜ್ಞಾನ ವಾಗುವುದಾದರೆ ನೇತ್ರಕ್ಕೂ ಹುತ್ತಕ್ಕೂ ಮಧ್ಯೆ ಇರುವ ಬೇರೆ ಪದಾರ್ಥಗಳ ಜ್ಞಾನವೂ ಸಹ ಆಗಬೇಕಾಗಿತ್ತು. ಮೂಸಿಯಲ್ಲಿರುವ ರಜತವು ಸಿಂಪಿಯಲ್ಲಿ ಭಾನವಾಗುವುದಾದರೆ ಮೂಸಿ ಮತ್ತು ಅದರಲ್ಲಿರುವ ಸರ್ವ ಪದಾರ್ಥಗಳ ಭಾನವೂ ಆಗಬೇಕಾಗಿತ್ತು. ಆದರೆ ಹಾಗೆ ಆಗುವುದಿಲ್ಲ ಆ ರೀತಿ ನೇತ್ರಕ್ಕೂ ಹುತ್ತಕ್ಕೂ ಮಧ್ಯೆ ಇರುವ ಪದಾರ್ಥಗಳ ಜ್ಞಾನವಾಗುವುದಿಲ್ಲ ಇದರಿಂದ ದೋಷ ಸಹಿತ ನೇತ್ರದಿಂದ ರಜ್ಜುವಿನ ನಿಜರೂಪದ ಭಾನವಾಗುವುದಿಲ್ಲ, ಸರ್ಪ ರೂಪದಿಂದ ಭಾನವಾಗುತ್ತದೆ. ಆದ್ದರಿಂದ ಹಗ್ಗವೇ ಅನ್ಯವಾಗಿ (ಅನ್ಯ ಪ್ರಕಾರದಿಂದ ಸರ್ಪ ರೂಪಿನಿಂದ) ಖ್ಯಾತಿ (ಬಾನ) ಯಾಗುತ್ತದೆ ಇದೇ ಅನ್ಯಥಾ ಖ್ಯಾತಿ ಮತ.

ಇರುವುದು ಒಂದು ಕಡೆ, ತೋರುವುದು ಒಂದು ಕಡೆ (ಅನ್ಯಥಾ= ಬೇರೆ ಕಡೆ, ಖ್ಯಾತಿ= ತೋರುವುದು) ಎಂಬ ತತ್ತ್ವವನ್ನು ಚಿಂತಾಮಣಿ ಕಾರನು "ಇರುವುದು ಹಗ್ಗ, ತೋರುವುದು ಸರ್ಪ; ಇರುವುದೊಂದು, ತೋರು ವುದೊಂದು"—ಇದೇ ಅನ್ಯಥಾ ಖ್ಯಾತಿ ಎಂದು ಹೇಳಿದ್ದಾನೆ.

ಇವರು ಜ್ಞಾನಾಧ್ಯಾಸವನ್ನು ಒಪ್ಪದೆ ಅರ್ಥಾಧ್ಯಾಸವನ್ನು ಮಾತ್ರ ಒಪ್ಪುತ್ತಾರೆ

### ೪. ಅಖ್ಯಾತಿ ಮತ್ತು ಮೇಲೆ ಹೇಳಿದ ಮೂರು ಮತಗಳ ಖಂಡನೆ

### ೧. ಅಸತ್ ಖ್ಯಾತಿ ಮತ ಖಂಡನೆ

ಅಖ್ಯಾತಿವಾದಿಗಳ ಅಭಿಪ್ರಾಯ ಅತ್ಯಂತ ಅಸತ್ತಾದ ಸರ್ಪದ ಪ್ರತೀತಿಯು ಉಂಟಾಗುವುದಾದರೆ ಅತ್ಯಂತ ಅಸತ್ತಾದ ವಂಧ್ಯಾಪುತ್ರ ಮತ್ತು ಶಶಶೃಂಗದ ಪ್ರತೀತಿಯೂ ಸಹ ಆಗಬೇಕಾಗುವುದು ಈ ಕಾರಣದಿಂದ ಅಸತ್ ಖ್ಯಾತಿಯು ಅಸಂಗತವಾಗಿರುವುದು.

### ೨. ಆತ್ಮಖ್ಯಾತಿ ಮತ ಖಂಡನೆ

ಒಂದು ವೇಳೆ ಕ್ಷಣಿಕ ವಿಜ್ಞಾನವೇ ಆಕಾರವಾಗುವ ಸರ್ಪಾದಿಗಳಾದರೋ

ಅವರ ಮತದಂತೆ ಕ್ಷಣಮಾತ್ರವಾಗಿರಬೇಕು. ಅಧಿಕ ಸಮಯದವರೆಗೆ ಸ್ಥಿರತೆಯೂ ಪ್ರತೀತಿಯೂ ಆಗಬಾರದು ಆದರೆ ಒಬ್ಬ ಮನುಷ್ಯ ಅರ್ಧ ಗಂಟೆ ನಿಂತು ನೋಡಿದರೂ ಸರ್ಪ ಕಾಣುತ್ತದೆ. ಆದ್ದರಿಂದ ಈ ಮತವೂ ಅಸಂಗತವಾಗಿರುವುದು

## ೩ ಅನ್ಯಥಾಖ್ಯಾತಿ ಮತ ಖಂಡನೆ

ಅನ್ಯಥಾಖ್ಯಾತಿಯ ಪ್ರಥಮ ರೀತಿಯಾದರೋ ಚಿಂತಾಮಣಿಕಾರನ ಮತದಿಂದ ದೂಷಿತನೇ ಆಗಿದೆ. ಇದರಂತೆ ಚಿಂತಾಮಣಿಕಾರನ ಅಭಿಪ್ರಾಯವೂ ಸಹ ಅಸಂಗತವಾಗಿದೆ ಏಕೆಂದರೆ ಸಂಸಾರದಲ್ಲಿ ಒಂದು ನೇಮವಿದೆ ಜ್ಞೇಯಾನುಸಾರವಾಗಿ ಜ್ಞಾನವಾಗಬೇಕು ಜ್ಞೇಯವು ರಜ್ಜು, ಜ್ಞಾನವು ಸರ್ಪ ಎಂದು ಹೇಳುವುದು ಅತ್ಯಂತ ವಿರುದ್ಧವಾದುದು ಆದ್ದರಿಂದ ಈ ಮತವೂ ಅಸಂಗತವಾಗಿರುವುದು

ಈ ರೀತಿಯಿಂದ ಹೀಗೆ ತಿಳಿಯುವುದು ಯೋಗ್ಯವಾಗಿದೆ· ಯಾವ ಸ್ಥಳದಲ್ಲಿ ರಜ್ಜುವಿನಲ್ಲಿ ಸರ್ಪಭ್ರಮೆಯಾಗುವುದೋ ಅಲ್ಲಿ ನೇತ್ರವು ತನ್ನ ವೃತ್ತಿದ್ವಾರಾ ರಜ್ಜುವಿನ ಸಂಬಂಧ ಪಡೆಯುವುದರಿಂದ ರಜ್ಜುವಿನ 'ಇದಂ' ರೂಪದ ಸಾಮಾನ್ಯ ಜ್ಞಾನವಾಗುತ್ತದೆ. ಅಲ್ಲದೆ ಸರ್ಪದ ಸ್ಮೃತಿಯೂ ಉಂಟಾಗುತ್ತದೆ ಹೇಗೆಂದರೆ, "ಇದು ಸರ್ಪವಾಗಿದೆ" – ಇದರಲ್ಲಿ ಎರಡು ಜ್ಞಾನಗಳಿವೆ "ಇದು'' ಎಂಬ ಅಂಶವು ರಜ್ಜುವಿನ ಸಾಮಾನ್ಯ ಪ್ರತ್ಯಕ್ಷ ಜ್ಞಾನವಾಗಿದೆ ''ಸರ್ಪವಿದೆ" ಎಂಬುದು ಸರ್ಪದ ಸ್ಮೃತಿರೂಪ ಜ್ಞಾನವಾಗಿದೆ ಈ ರೀತಿಯಿಂದ ''ಇದು ಸರ್ಪವಾಗಿದೆ" ಎನ್ನುವುದರಲ್ಲಿ ಎರಡು ಜ್ಞಾನಗಳಿವೆ ಆದರೆ ಪ್ರಮಾತನಲ್ಲಿ ಭಯದೋಷ ಪ್ರಮಾಣದಲ್ಲಿ ತಿಮಿರಾದಿ ದೋಷಗಳ ಬಲದಿಂದ ಪುರುಷನಿಗೆ ''ನನಗೆ ದ್ವಿವಿಧಜ್ಞಾನ ಉಂಟಾಗಿದೆ" ಎಂಬ ವಿವೇಕವು ಉಂಟಾಗುವುದಿಲ್ಲ ಹೀಗಿದ್ದರೂ "ಇದು" ಎಂಬುದು ರಜ್ಜುವಿನ ಸಾಮಾನ್ಯ ಪ್ರತ್ಯಕ್ಷ ಜ್ಞಾನವಾಗಿದೆ. ಸರ್ಪದ ಸ್ಮೃತಿರೂಪ ಜ್ಞಾನವಾಗಿದೆ ಈ ಕಾರಣದಿಂದಲೇ ಇದು ದ್ವಿವಿಧಜ್ಞಾನವಾಗಿದೆ. ಇದರಲ್ಲಿ ರಜ್ಜುವಿನ ಸಾಮಾನ್ಯ ಪ್ರತ್ಯಕ್ಷ ಜ್ಞಾನವೂ, ಸರ್ಪದ ಸ್ಮೃತಿಜ್ಞಾನವೂ ಇರುವು

ದೆಂಬ ವಿವೇಕವು ಉಂಟಾಗುವುದಿಲ್ಲ ಈ ಅವಿವೇಕಕ್ಕೆ ಸಾಂಖ್ಯ ಪ್ರಭಾಕರರ ಮತದಲ್ಲಿ ''ಭ್ರಮ'' ಎಂದು ಹೇಳಿದ್ದಾರೆ ಹೀಗೆಯೇ ಸರ್ವ ಭ್ರಮ ಸ್ಥಳ ದಲ್ಲಿಯೂ ತಿಳಿಯಬೇಕು ಈ ರೀತಿ ರಜ್ಜ್ವಾದಿಗಳಲ್ಲಿ ಸರ್ಪಾದಿಗಳ ಭ್ರಮೆಯ ಸಂಬಂಧದಲ್ಲಿ ನಾಲ್ಕು ಮತಗಳನ್ನು ಕೇಳಿದ್ದೇನೆ ಇವುಗಳಲ್ಲಿ ಯಾವುದು ಉತ್ತಮವಾದುದೋ ಅದನ್ನೇ ನನಗೆ ಹೇಳಿರಿ ಅದನ್ನೇ ನಾನು ತಿಳಿದು ಕೊಳ್ಳುತ್ತೇನೆ, ಎನ್ನುವುದು ತತ್ತ್ವದೃಷ್ಟಿ ಪ್ರಶ್ನೆಯ ಭಾವ

## ಅಖ್ಯಾತಿ ಮತ ಖಂಡನೆ

## ಶ್ರೀ ಗುರು ಉವಾಚ

ದೋಹಾ – ಖ್ಯಾತಿ ಅನಿರ್ವಚನೀಯ ಲಖಿ, ಪಂಚಮ ತಿನತೈ ಔರ |
ಯುಕ್ತಿಹೀನ ಮತ ಚಾರಿಯೆ, ಮನಹು ಭ್ರಮಕೀ ಠೌರ ||೫೦||

ತಾತ್ಪರ್ಯ – ಹೇ ಶಿಷ್ಯನೇ ! ಹಿಂದೆ ಹೇಳಿದ ನಾಲ್ಕು ಖ್ಯಾತಿಗಳಿಗೆ ವಿಲಕ್ಷಣವಾದ ಐದನೆಯದಾದ ಒಂದು ಅನಿರ್ವಚನೀಯ ಖ್ಯಾತಿ ಇದೆ. ಸರ್ವ ಭ್ರಮ ಸ್ಥಳಗಳಲ್ಲಿಯೂ ಅದನ್ನೇ ಗ್ರಹಿಸಬೇಕು. ಈ ನಾಲ್ಕು ಮತಗಳು ಯುಕ್ತಿಹೀನವಾಗಿವೆ

ಹಿಂದೆ ಹೇಳಿದ ಅಸತ್ ಖ್ಯಾತಿ, ಆತ್ಮಖ್ಯಾತಿ ಮತ್ತು ಅನ್ಯಥಾ ಖ್ಯಾತಿ ಗಳು ಅಸಂಗತವೆಂದು ಹೇಳಿದ ಹಾಗೆಯೇ ಅಖ್ಯಾತಿ ಮತವೂ ಸಹ ಅಸಂಗತ ವಾಗಿರುವುದು ಏಕೆಂದರೆ "ಇದು ಸರ್ಪವು " – ಈ ಜ್ಞಾನದಲ್ಲಿ (೧) "ಇದು" ಎಂಬ ಅಂಶವಾದ ರಜ್ಜುವಿನ ಸಾಮಾನ್ಯ ಜ್ಞಾನವು ಪ್ರತ್ಯಕ್ಷವಾಗಿರು ವುದು ಮತ್ತು (೨) "ಸರ್ಪ ಇದೆ'' ಎಂಬ ಅಂಶವು ಹಿಂದೆ ನೋಡಿದ ಸರ್ಪದ ಸ್ಮೃತಿಜ್ಞಾನವಾಗಿರುವುದು ಇದು ಅಖ್ಯಾತಿವಾದಿಯ ಮತವು. ಇದರಲ್ಲಿ ಪೂರ್ವದಲ್ಲಿ ನೋಡಿದ ಸರ್ಪದ ಸ್ಮೃತಿ ಎಂದು ತಿಳಿಯುವುದು ಸರಿ ಯಲ್ಲ. ಏಕೆಂದರೆ ಪೂರ್ವದಲ್ಲಿ ನೋಡಿದ ಸರ್ಪದ ನೆನವು ಮಾಡಿಕೊಂಡ ವನು ಭಯದಿಂದ ಓಡಿಹೋಗಲಾರ ಸ್ಮೃತಿಯಿಂದ ಭಯವು ಉಂಟಾಗಿರು

ವುದು ಎಲ್ಲಿಯೂ ಕಂಡುಬಂದಿರುವುದಿಲ್ಲ ಒಂದೆ ಹುಲಿಯನ್ನು ನೋಡಿದ ಒಬ್ಬಾನೊಬ್ಬ ಈ ದಿನ ಹುಲಿಯನ್ನು ಸ್ಮರಣೆಗೆ ತಂದುಕೊಂಡರೆ ಭಯವಾಗಲಿ, ಓಡಿಹೋಗುವುದಾಗಲಿ ಸಂಭವಿಸುವುದಿಲ್ಲ ಪ್ರತ್ಯಕ್ಷವಾಗಿ ನೋಡಿದವನು ಮಾತ್ರ ಭಯದಿಂದ ಓಡಿಹೋಗುತ್ತಾನೆಂಬುದು ಸರ್ವಮಾನ್ಯವಾಗಿದೆ ಆದ್ದರಿಂದ ಪೂರ್ವದಲ್ಲಿ ನೋಡಿದ ಸರ್ಪವನ್ನು ಸ್ಮರಣೆ ಮಾಡಿಕೊಂಡವನಿಗೆ ಭಯ–ಪಲಾಯನಗಳು ಉಂಟಾಗಬಾರದಾಗಿತ್ತು ಸನ್ಮುಖ ರಜ್ಜುವಿನಲ್ಲಿ ಸರ್ಪದ ಪ್ರತೀತಿಯಾಗುವುದರಿಂದಲೇ ಭಯ–ಪಲಾಯನಗಳು ಸಂಭವಿಸುತ್ತವೆ ಈ ಕಾರಣದಿಂದಲೇ ಸನ್ಮುಖ ರಜ್ಜುವಿನಲ್ಲಿಯೇ ಸರ್ಪದ ಪ್ರತೀತಿಯಾಗುತ್ತವೆ ಅದು ಪೂರ್ವದಲ್ಲಿ ನೋಡಿದ ಸರ್ಪದ ಸ್ಮೃತಿಯಲ್ಲ.

ಅಥವಾ – ರಜ್ಜುವಿನ ಯಥಾರ್ಥ ಜ್ಞಾನವಾದ ಮೇಲೆ "ನನಗ ರಜ್ಜುವಿನಲ್ಲಿ ಮಿಥ್ಯಾ ಸರ್ಪದ ಪ್ರತೀತಿಯಾಗಿತ್ತು" ಎಂದು ಪುರುಷನು ಹೇಳುತ್ತಾನೆಯೇ ವಿನಃ ರಜ್ಜುವಿನಲ್ಲಿ ಸರ್ಪದ ಸ್ಮರಣವಾಗಿತ್ತು ಎಂದು ಹೇಳುವುದಿಲ್ಲ. ಇದರಿಂದ ನೋಡಿದರೂ ರಜ್ಜುವಿನಲ್ಲಿ ಸರ್ಪದ ಪ್ರತೀತಿಯು ಉಂಟಾಗುವುದು ಈ ಕಾರಣದಿಂದ ಇದು ಪೂರ್ವದಲ್ಲಿ ನೋಡಿದ ಸರ್ಪದ ಸ್ಮೃತಿಯಲ್ಲ.

ಇನ್ನು "ಇದು ಸರ್ಪವಿದೆ" ಎಂಬ ಕಡೆಯಲ್ಲಿ 'ಇದು' ಎಂಬ ರಜ್ಜುವಿನ ಸಾಮಾನ್ಯ ಪ್ರತ್ಯಕ್ಷ ಜ್ಞಾನ ಮತ್ತು 'ಸರ್ಪ' ಎಂಬ ಸರ್ಪದ ಸ್ಮೃತಿಜ್ಞಾನ ಈ ಎರಡು ಜ್ಞಾನಗಳಿರುವುದಿಲ್ಲ ಒಂದೇ ಜ್ಞಾನವು ಪ್ರತೀತಿಯಾಗುತ್ತವೆ ಏಕೆಂದರೆ ಒಂದೇ ಅಂತಃಕರಣದಲ್ಲಿ ಒಂದೇ ಸಮಕಾಲದಲ್ಲಿ ಸಾಮಾನ್ಯ ಪ್ರತ್ಯಕ್ಷಜ್ಞಾನವೂ ಮತ್ತು ಸ್ಮೃತಿಜ್ಞಾನವೂ ಸಂಭವಿಸಲಾರವು. ಆದ್ದರಿಂದ ಅಖ್ಯಾತಿ ಮತವೂ ಅತ್ಯಂತ ಅಸಂಗತವಾಗಿರುವುದು. ಆದುದರಿಂದ ಅಸತ್ ಖ್ಯಾತಿ, ಆತ್ಮಖ್ಯಾತಿ, ಅನ್ಯಥಾ ಖ್ಯಾತಿ ಮತ್ತು ಅಖ್ಯಾತಿ ಮತಗಳು ಯುಕ್ತಿಹೀನವಾಗಿವೆ.

## ಅನಿರ್ವಚನೀಯ ಖ್ಯಾತಿ (ಸಿದ್ಧಾಂತ ಮತ)

ಸಿದ್ಧಾಂತದಲ್ಲಿ ಅನಿರ್ವಚನೀಯ ಖ್ಯಾತಿಯು ಪ್ರತಿಪಾದಿಸಲ್ಪಟ್ಟಿದೆ. ವಸ್ತುವನ್ನು ನೋಡಬೇಕೆಂಬ ಅಂತಃಕರಣ ವೃತ್ತಿಯು ನೇತ್ರಾದಿ ಇಂದ್ರಿಯ

ಗಳ ದ್ವಾರ ಹೊರಬಿದ್ದು ವಸ್ತುವಿನವರೆಗೆ ಹೋಗುತ್ತದೆ. ಅಂತಃಕರಣ ವೃತ್ತಿಯು ವಸ್ತುವನ್ನು ಆವರಿಸಿರುವ ತೂಲಾವಿದ್ಯಾ ಆವರಣವನ್ನು ನಿವಾರಣೆ ಮಾಡುತ್ತದೆ ಆಗ ವೃತ್ತಿಯಲ್ಲಿರುವ ಚಿದಾಭಾಸನು ವಸ್ತುವನ್ನು ಬೆಳಗುತ್ತಾನೆ ಆಗ ವಸ್ತುವು ಇಂಥಾದ್ದೆಂದು ತಿಳಿಯುತ್ತದೆ ಇದು ವಸ್ತುವನ್ನು ನೋಡುವ ರೀತಿ

ಒಬ್ಬಾನೊಬ್ಬ ಮನುಷ್ಯನು ಮಂದಾಂಧಕಾರದಲ್ಲಿ ದಾರಿ ನಡೆಯುತ್ತಿದ್ದ. ಅದೇ ದಾರಿಯಲ್ಲಿ ಸ್ವಲ್ಪ ಹೊತ್ತಿನ ಹಿಂದೆ ಒಬ್ಬ ರೈತ ಒಂದು ಹಗ್ಗವನ್ನು ಕೆಡವಿಕೊಂಡು ಹೋಗಿದ್ದ ಆ ಹಗ್ಗವು ಸೊಟ್ಟಸೊಟ್ಟಾಗಿ ಹಾವಿನಂತೆ ಬಿದ್ದಿತ್ತು ಈ ಪುರುಷನ ಅಂತಃಕರಣ ವೃತ್ತಿಯು ನೇತ್ರ ದ್ವಾರ ಹೊರ ಹೊರಟು ಆ ವಸ್ತುವಿನವರೆಗೆ ಹೋಯಿತು ಸ್ವಭಾವದಂತೆ ವೃತ್ತಿಯು ವಸ್ತುವಿನ ಮೇಲೆ ಆವರಿಸಿರುವ ಆವರಣವನ್ನು ನಿವಾರಣೆ ಮಾಡಬೇಕಾಗಿತ್ತು. ಆದರೆ ಇಲ್ಲಿ ಎರಡು ಆವರಣಗಳಿವೆ . ಮೊದಲೇ ಇರುವ ತೂಲಾವಿದ್ಯಾವರಣ ಒಂದು, ನಂತರ ಮಂದಾಂಧಕಾರ ಒಂದು ಈ ಎರಡೂ ಆವರಣಗಳನ್ನು ಭಂಗ ಮಾಡುವ ಶಕ್ತಿ ವೃತ್ತಿಗೆ ಇರುವುದಿಲ್ಲ ಆಗ ವೃತ್ತಿಯು ರಜ್ಜುವಿನ ಸಮಾನಾಕಾರ ಆಗಲಿಲ್ಲ ಈ ಕಾರಣದಿಂದ ರಜ್ಜುವಿನ ಆವರಣ ನಾಶವಾಗಲಿಲ್ಲ ಆಗ ವಸ್ತುವಿನ ಯಥಾರ್ಥ ಜ್ಞಾನವಾಗಲಿಲ್ಲ ಏನೋ ಇದೆ ಎಂದು ಮಾತ್ರ ತಿಳಿಯಿತು ಅದು ಇಂಥಾದ್ದೆಂದು ತಿಳಿಯಲಿಲ್ಲ ಆಗಲೇ ಭ್ರಮೆಯಾಗುವುದು

ಇಲ್ಲಿ ವಸ್ತುವಿನ ಸಾಮಾನ್ಯ ಜ್ಞಾನವಾಗಿ ವಿಶೇಷ ಜ್ಞಾನವಾಗಲಿಲ್ಲ ವಸ್ತುವಿನ ಸಾಮಾನ್ಯ ಜ್ಞಾನವಾಗಿ ವಿಶೇಷ ಜ್ಞಾನವಾಗದೆ ಇರುವಾಗ ಭ್ರಮೆ ಉಂಟಾಗುತ್ತದೆ

ಆಗ ರಜ್ಜು ಉಪಹಿತ ಚೇತನದ ಆಶ್ರಯದಲ್ಲಿರುವ ಅವಿದ್ಯೆಯಲ್ಲಿ ಕ್ಷೋಭೆ ಉಂಟಾಯಿತು. (ಉಪಾದಾನ ಕಾರಣವು ಕಾರ್ಯರೂಪವಾಗಿ ಪರಿಣಾಮವಾಗುವ ಅವಸ್ಥೆಗೆ ಕ್ಷೋಭೆ ಎನ್ನುತ್ತಾರೆ.) ಆಗ ಚೇತನದ ಆಶ್ರಯದಲ್ಲಿರುವ ಅವಿದ್ಯೆಯು ಸರ್ಪಾಕಾರವಾಗಿ ಪರಿಣಾಮವಾಯಿತು "ಇದು ಸರ್ಪ" ಎಂದು ಪುರುಷನು ಭಯದಿಂದ ಓಡಿದನು

ಈ ಅವಿದ್ಯಾ ಕಾರ್ಯವಾದ ಸರ್ಪವು ಎಂಥಾದ್ದು? ಇದು ಸತ್ತೊ?

ಇದು ಸತ್ತಾಗಿದ್ದರೆ ರಜ್ಜು ಜ್ಞಾನದಿಂದ ಬಾಧೆಯಾಗಬಾರದಾಗಿತ್ತು. ಆದರೆ ರಜ್ಜು ಜ್ಞಾನದಿಂದ ಅದರ ಬಾಧೆ ಉಂಟಾಗುತ್ತದೆ ಈ ಕಾರಣದಿಂದ ಅದು ಸತ್ತಲ್ಲ. ಮತ್ತು ಒಂದು ವೇಳೆ ಈ ಸರ್ಪವನ್ನು ಅಸತ್ತು ಅನ್ನೋಣವೇ ? ವಂಧ್ಯಾಪುತ್ರ ಶಶವಿಶಾಣದಂತೆ ಅದರ ಪ್ರತೀತಿಯಾಗಬಾರದಾಗಿತ್ತು ಆದರೆ ಸರ್ಪವು ಪ್ರತೀತಿಯಾಗುತ್ತದೆ. ಈ ಕಾರಣದಿಂದ ಅದು ಅಸತ್ತೂ ಅಲ್ಲ ಇನ್ನು ಆ ಸರ್ಪವನ್ನು ಸದಸತ್ತು ಅನ್ನೋಣವೇ ? ಸತ್ತು ಅಸತ್ತುಗಳು ಕತ್ತಲು ಬೆಳಕಿನಂತೆ ಒಂದು ಕಡೆ ಕೂಡಲಾರವು. ಆದ್ದರಿಂದ ಇದು ಸದಸತ್ತೂ ಅಲ್ಲ ಆದರೆ ಅದು ಸತ್ತು ಮತ್ತು ಅಸತ್ತುಗಳಿಗಿಂತಲೂ ವಿಲಕ್ಷಣವಾದ ಅನಿರ್ವಚನೀಯವಾಗಿರುವುದು

ಪ್ರಶ್ನೆ – ಸತ್ತು ಮತ್ತು ಅಸತ್ತುಗಳಿಗೂ ವಿಲಕ್ಷಣವೆಂದರೇನು ? ಸತ್ತು ಮತ್ತು ಅಸತ್ತುಗಳಿಗೂ ವಿಲಕ್ಷಣವಾದ ಮೂರನೆಯ ಪದಾರ್ಥ ಸಂಸಾರದಲ್ಲಿಲ್ಲವೇ ಇಲ್ಲವಲ್ಲ ?

ಉತ್ತರ – ಸತ್ತಿಗಿಂತಲೂ ಭಿನ್ನವಾದುದು ಅಸತ್ತು; ಅಸತ್ತಿಗಿಂತಲೂ ಭಿನ್ನವಾದುದು ಸತ್ತು. ಸತ್ತು ಅಸತ್ತು ಈ ಎರಡಕ್ಕಿಂತ ಭಿನ್ನವಾದ ಮೂರನೆಯ ಪದಾರ್ಥ ಸಂಸಾರದಲ್ಲಿ ಇಲ್ಲ ಎಂಬ ಮಾತು ನಿನ್ನ ದೃಷ್ಟಿಯಿಂದ ಸಮ್ಮತವೇ. ಆದರೆ ಅದು ವೇದಾಂತಿಗಳಿಗೆ ಮಾತ್ರ ತಿಳಿಯುತ್ತದೆ ಅದು ಅನಿರ್ವಚನೀಯ ಇದನ್ನು ಯಥಾರ್ಥವಾಗಿ ತಿಳಿದಾಗಲೇ ಜಗತ್ಸತ್ಯತ್ವ ಭ್ರಾಂತಿ ನಿವೃತ್ತಿಯಾಗುವುದು

ಪ್ರಶ್ನೆ – ಸತ್ತಿಗಿಂತ ವಿಲಕ್ಷಣವೆಂದರೇನು ?

ಉತ್ತರ – 'ಸತ್ತು' ಎಂದರೆ ತ್ರಿಕಾಲಾಬಾಧ್ಯವಾದುದು ಇದಕ್ಕೆ ವಿಲಕ್ಷಣವಾದುದೆಂದರೆ ಬಾಧಾಯೋಗ್ಯವಾದುದು ಎಂದರ್ಥ.

ಪ್ರಶ್ನೆ – ಅಸತ್ತಿಗೆ ವಿಲಕ್ಷಣವೆಂದರೇನು ?

ಉತ್ತರ – ಸ್ವರೂಪಹೀನವಾದ ವಂಧ್ಯಾಪುತ್ರಾದಿಗಳು ಅಸತ್ ಎಂದು ಹೇಳಿಸಿಕೊಳ್ಳುತ್ತವೆ. ಇವುಗಳು ಎಂದೂ ಪ್ರತೀತಿಯಾಗುವುದಿಲ್ಲ. ಇದಕ್ಕೆ ವಿಲಕ್ಷಣವೆಂದರೆ ಸ್ವರೂಪವಂತ ಪದಾರ್ಥ ಅರ್ಥಾತ್ ಪ್ರತೀತಿಯಾಗುವುದು.

ಸಾರಾಂಶ – ಸತ್ತಿಗೆ ವಿಲಕ್ಷಣವಾದುದು ಬಾಧಾಯೋಗ್ಯವಾದುದು, ಅಸತ್ತಿಗೆ ವಿಲಕ್ಷಣ ಪ್ರತೀತಿಯಾಗುವುದು ; ಯಾವುದು ಪ್ರತೀತಿಯಾಗುವುದೋ ಮತ್ತು ಬಾಧಾಯೋಗ್ಯವಾಗಿರುವುದೋ ಅದು ಅನಿರ್ವಚನೀಯ ಪದಾರ್ಥವು ರಜ್ಜುವಿನಲ್ಲಿ ತೋರಿದ ಸರ್ಪವು ಇಂಥಾದ್ದೆ ಸರ್ಪವು ತೋರುತ್ತಾ ಇದೆ ಬೆಳಕು ತಂದಾಕ್ಷಣ ಬಾಧೆಯಾಗುತ್ತದೆ ಪ್ರಪಂಚವು ಅರ್ಥಾತ್ ಜನ್ಮ–ಮರಣಾದಿ ದುಃಖರೂಪವಾದ ಸಂಸಾರವೂ ಸಹ ಇಂಥಾದ್ದೆ ಅಜ್ಞಾನ ಕಾಲದಲ್ಲಿ ತೋರುತ್ತಾ ಇದೆ, ಜ್ಞಾನ ಬಂದಾಕ್ಷಣ ನಿವೃತ್ತಿಯಾಗುತ್ತದೆ ಇದೇ ಅನಿರ್ವಚನೀಯ, ವೇದಾಂತ ಮತ ಇದು ವೇದಾಂತ ನಿಪುಣ ಪಂಡಿತರಿಗಲ್ಲದೆ ಉಳಿದವರಿಗೆ ತಿಳಿಯಲಾರದು

ಪ್ರಶ್ನೆ – ಸ್ವಾಮಿ, ರಜ್ಜುವಿನಲ್ಲಿ ತೋರಿದ ಸರ್ಪವು ನಿವೃತ್ತಿಯಾಯಿತು ಆದರೆ ಅಂತಃಕರಣದಲ್ಲಿ ಸರ್ಪಜ್ಞಾನ ಹಾಗೆಯೇ ಉಳಿಯಿತಲ್ಲ ! ಸರ್ಪ ನಿವೃತ್ತಿಯಾಗಿ ಸರ್ಪಜ್ಞಾನ ಹಾಗೇ ಉಳಿದರೆ ಪೂರ್ಣವಾಗಲಾರದು

ಉತ್ತರ – ಅಯ್ಯಾ! ಭ್ರಮ ಸ್ಥಳದಲ್ಲಿ, ಅಂತಃಕರಣಕ್ಕಿಂತ ಭಿನ್ನವಾದ ಅವಿದ್ಯೆಯ ಪರಿಣಾಮವಾದ ಸರ್ಪಾದಿ ವಿಷಯಗಳು ಮತ್ತು ಅವುಗಳ ಜ್ಞಾನ ಒಂದೇ ಸಮಯದಲ್ಲಿಯೇ ಉತ್ಪನ್ನವಾಗಿ ಒಂದೇ ಸಮಯದಲ್ಲಿ ಲಯವಾಗುವುವು ಹೊರಗಿನ ಭ್ರಾಂತಿಯಿಂದ ತೋರಿದ ಸರ್ಪವು ನಿವೃತ್ತಿಯಾದಾಗಲೇ ಅಂತಃಕರಣದಲ್ಲಿ ತತ್ಸಂಬಂಧ ಸರ್ಪಜ್ಞಾನವೂ ನಿವೃತ್ತಿಯಾಗುತ್ತದೆ ಹೇಗೆಂದರೆ, ಸರ್ಪ ಮತ್ತು ಸರ್ಪಜ್ಞಾನಗಳೆರಡೂ ಸಾಕ್ಷೀಭಾಸ್ಯಗಳೇ ರಜ್ಜು ಉಪಹಿತ ಚೇತನದ ಆಶ್ರಯದಲ್ಲಿರುವ ಅವಿದ್ಯೆಯ ಪರಿಣಾಮ ತಮೋಗುಣವೇ ಸರ್ಪ ಸಾಕ್ಷೀ ಚೇತನದ ಆಶ್ರಯದಲ್ಲಿರುವ ಅವಿದ್ಯೆಯ ಸತ್ವಗುಣದ ಪರಿಣಾಮವೇ ಸರ್ಪಜ್ಞಾನ ಸರ್ಪ ಮತ್ತು ಸರ್ಪಜ್ಞಾನಗಳೆರಡೂ ಅವಿದ್ಯೆ ಪರಿಣಾಮಗಳು

ಪ್ರಶ್ನೆ – ಸರ್ಪ ಮತ್ತು ಸರ್ಪಜ್ಞಾನಗಳೆರಡೂ ಅಂತಃಕರಣದ ಪರಿಣಾಮಗಳೆಂದರೆ ಬರುವ ದೋಷವೇನು ?

ಉತ್ತರ – ಹಾಗೆನ್ನಲಾಗದು. ಏಕೆಂದರೆ ಸಾಕ್ಷೀ ಚೇತನದ ಆಶ್ರಯದಲ್ಲಿರುವ ಅವಿದ್ಯೆಯ ಪರಿಣಾಮವೇ ಸರ್ಪಜ್ಞಾನ ರಜ್ಜು ಉಪಹಿತ ಚೇತನದ ಆಶ್ರಯದಲ್ಲಿರುವ ಅವಿದ್ಯೆಯ ಪರಿಣಾಮವೇ ಸರ್ಪ. ಆದ್ದರಿಂದ ಎರಡೂ ಅವಿದ್ಯೆಯ ಪರಿಣಾಮಗಳು ಅಂತಃಕರಣದ ಪರಿಣಾಮಗಳಲ್ಲ ಏಕೆಂದರೆ ರಜ್ಜುವಿನ ಜ್ಞಾನದಿಂದ ಸರ್ಪ ನಿವೃತ್ತಿಯಾದಾಗಲೇ ಸರ್ಪ ಜ್ಞಾನವೂ ನಿವೃತ್ತಿಯಾಗುತ್ತದೆ ಒಂದು ವೇಳೆ ಇದು ಅಂತಃಕರಣದ ಪರಿಣಾಮವಾಗಿದ್ದರೆ ಬಾಧೆಯಾಗಬಾರದಾಗಿತ್ತು ಆದ್ದರಿಂದ ಸರ್ಪ ಜ್ಞಾನವೂ ಸಹ ಅಂತಃಕರಣದ ಪರಿಣಾಮವಲ್ಲ ಅವಿದ್ಯಾ ಪರಿಣಾಮವೇ.

ಪ್ರಶ್ನೆ – ಸರ್ಪವು ಅನಿರ್ವಚನೀಯವೆಂದಾದರೆ ಸರ್ಪಜ್ಞಾನವು ಏನು ?

ಉತ್ತರ – ಸರ್ಪವು ಸತ್ತು ಮತ್ತು ಅಸತ್ತಿಗೆ ವಿಲಕ್ಷಣವಾದ ಅನಿರ್ವಚನೀಯವಾದಂತೆ ಸರ್ಪಜ್ಞಾನವೂ ಸಹ ಅನಿರ್ವಚನೀಯವೆ.

ರಜ್ಜು ಉಪಹಿತ ಚೇತನದ ಆಶ್ರಯದಲ್ಲಿರುವ ಅವಿದ್ಯೆಯ ತಮೋಗುಣಾಂಶವೇ ಸರ್ಪ ಮತ್ತು ಸಾಕ್ಷೀ ಚೇತನದ ಆಶ್ರಯದಲ್ಲಿರುವ ಅವಿದ್ಯೆಯ ಸತ್ವಗುಣದ ಅಂಶವೇ ಸರ್ಪಜ್ಞಾನವಾಗಿದೆ

ಯಾವ ಸಮಯದಲ್ಲಿ ರಜ್ಜು ಉಪಹಿತ ಚೇತನದ ಆಶ್ರಯದಲ್ಲಿರುವ ಅವಿದ್ಯೆಯು ಸರ್ಪಾಕಾರವಾಗಿ ಪರಿಣಾಮವಾಗುತ್ತದೋ, ಅದೇ ಸಮಯದಲ್ಲಿಯೇ ಸಾಕ್ಷೀ ಉಪಹಿತ ಚೇತನದ ಆಶ್ರಯದಲ್ಲಿರುವ ಅವಿದ್ಯೆಯು ಸರ್ಪ ಜ್ಞಾನವಾಗಿ ಪರಿಣಮಿಸುತ್ತದೆ ಏಕೆಂದರೆ ಯಾವ ನಿಮಿತ್ತದಿಂದ ರಜ್ಜು ಉಪಹಿತ ಚೇತನದ ಆಶ್ರಯದಲ್ಲಿರುವ ಅವಿದ್ಯೆಯಲ್ಲಿ ಕ್ಷೋಭೆ ಉಂಟಾಯಿತೋ, ಅದೇ ನಿಮಿತ್ತದಿಂದಲೇ ಸಾಕ್ಷೀ ಉಪಹಿತ ಚೇತನದ ಆಶ್ರಯದಲ್ಲಿರುವ ಅವಿದ್ಯೆಯಲ್ಲಿ ಕ್ಷೋಭೆ ಉಂಟಾಯಿತು ಇದರಿಂದ ಭ್ರಮ ಸ್ಥಳದಲ್ಲಿ ಸರ್ಪಾದಿ ವಿಷಯಗಳೂ ಮತ್ತು ಅವುಗಳ ಜ್ಞಾನವೂ ಒಂದೇ ಸಮಯದಲ್ಲಿ ಉತ್ಪನ್ನವಾಗುತ್ತವೆ ; ಮತ್ತು ಒಂದೇ ಸಮಯದಲ್ಲಿ ಅಂದರೆ ರಜ್ವಾದಿಗಳ ಅಧಿಷ್ಠಾನ ಜ್ಞಾನದಿಂದ (ಒಂದೇ ಸಮಯದಲ್ಲಿ) ನಿವೃತ್ತಿಯಾಗುತ್ತವೆ ಹಿಂದೆ ನೀನು ಸರ್ಪನಿವೃತ್ತಿಯಾಗಿ ಸರ್ಪಜ್ಞಾನ ಹಾಗೇ ಉಳಿಯುತ್ತದೆಯೇ ಎಂದು ಕೇಳಿದ್ದಕ್ಕೆ ಇದು ಉತ್ತರ.

ಪ್ರಶ್ನೆ – ಸರ್ಪ ಮತ್ತು ಸರ್ಪಜ್ಞಾನಗಳೆರಡೂ ಸಾಕ್ಷೀಭಾಸ್ಯಗಳೆಂದು ಹಿಂದೆ ಹೇಳಿದಿರಿ ಅದು ಸ್ಪಷ್ಟವಾಗಿ ತಿಳಿಯಲಿಲ್ಲ.

ಉತ್ತರ – ಮನಸ್ಸಿಟ್ಟು ಕೇಳು ರಜ್ಜು ಉಪಹಿತ ಚೇತನದ ಆಶ್ರಯದಲ್ಲಿರುವ ಬಾಹ್ಯ ಅವಿದ್ಯಾಂಶವೇ ಸರ್ಪಕ್ಕೆ ಉಪಾದಾನ ಕಾರಣವಾಗಿರುವುದು ಮತ್ತು ಸಾಕ್ಷೀ ಚೇತನದ ಆಶ್ರಯದಲ್ಲಿರುವ ಅಂತರ ಅವಿದ್ಯೆಯ ಅಂಶವೇ ಸರ್ಪ ಜ್ಞಾನರೂಪ ವೃತ್ತಿಗೆ ಉಪಾದಾನ ಕಾರಣವಾಗಿರುವುದು

ಇನ್ನು ಸ್ವಪ್ನದಲ್ಲಿಯಾದರೋ ಸ್ವಪ್ನ ಸಾಕ್ಷಿಯ ಆಶ್ರಯದಲ್ಲಿರುವ ಅವಿದ್ಯೆಯ ತಮೋಗುಣಾಂಶವೇ ಸ್ವಪ್ನ ಪದಾರ್ಥಗಳಾಗಿ ಪರಿಣಾಮವಾಗುತ್ತದೆ. ಮತ್ತು ಅದೇ ಸ್ವಪ್ನ ಸಾಕ್ಷಿಯ ಆಶ್ರಯದಲ್ಲಿರುವ ಅವಿದ್ಯೆಯ ಸತ್ವಗುಣವೇ ಸ್ವಪ್ನಜ್ಞಾನರೂಪವಾಗಿ ಪರಿಣಾಮವಾಗುತ್ತದೆ

ಇಲ್ಲಿ ಸ್ವಪ್ನ ಸಾಕ್ಷಿಯ ಆಶ್ರಯದಲ್ಲಿರುವ ಅಂತರ ಅವಿದ್ಯೆಯೇ ಸ್ವಪ್ನ ಪದಾರ್ಥಗಳಾಗಿಯೂ ಸ್ವಪ್ನ ಜ್ಞಾನವಾಗಿಯೂ ಪರಿಣಾಮ ಹೊಂದುವುದರಿಂದ ಆ ಅವಿದ್ಯೆಯೇ ಸ್ವಪ್ನ ಪದಾರ್ಥಗಳಿಗೂ ಸ್ವಪ್ನ ಜ್ಞಾನಕ್ಕೂ ಉಪಾದಾನ ಕಾರಣವಾಗಿದೆ ಈ ಕಾರಣದಿಂದ ಬಾಹ್ಯ ರಜ್ಜ್ವಾದಿಗಳಲ್ಲಿ ತೋರುವ ಸರ್ಪಾದಿಗಳೂ ಮತ್ತು ಅಂತರ ಸ್ವಪ್ನ ಪದಾರ್ಥಗಳೂ ಸಾಕ್ಷೀಭಾಸ್ಯಗಳೆ.

ಅವಿದ್ಯೆಯ ವೃತ್ತಿ ದ್ವಾರ ಯಾವುದನ್ನು ಸಾಕ್ಷಿಯು ಭಾಸಿಸುವುದೋ ಅದು ಸಾಕ್ಷೀಭಾಸ್ಯವೆಂದು ಗ್ರಹಿಸಬೇಕು ಏಕೆಂದರೆ ಅವಿದ್ಯೆಗೆ ಆಶ್ರಯ ಸಾಕ್ಷಿಯೆ

**ರಜ್ಜುವಿನಲ್ಲಿ ತೋರಿಬರುವ ಸರ್ಪವೂ ಮತ್ತು ಸರ್ಪಜ್ಞಾನವೂ ಅವಿದ್ಯೆಯ ಪರಿಣಾಮ ಮತ್ತು ಚೇತನದ ವಿವರ್ತವಾಗಿವೆ.**

ರಜ್ಜ್ವಾದಿಗಳಲ್ಲಿ ತೋರಿಬರುವ ಅನಿರ್ವಚನೀಯ ಸರ್ಪಾದಿಗಳು ಮತ್ತು ಅವುಗಳ ಜ್ಞಾನಗಳಿಗೆ ಭ್ರಮ ಎಂದು ಕರೆಯುತ್ತಾರೆ ಭ್ರಮ ಎಂದರೂ ಅಧ್ಯಾಸವೆಂದರೂ ಒಂದೇ. ಎರಡೂ ಪರ್ಯಾಯ ಪದಗಳು. ಈ ಭ್ರಮೆಯು ಅವಿದ್ಯೆಯ ಪರಿಣಾಮವಾಗಿದೆ ಮತ್ತು ಚೇತನದ ವಿವರ್ತವಾಗಿದೆ.

ಪ್ರಶ್ನೆ – ಪರಿಣಾಮವೆಂದರೇನು ?

ಉತ್ತರ – ಉಪಾದಾನ ಕಾರಣದ ಸಮಾನ ಸ್ವಭಾವವುಳ್ಳ ಅನ್ಯಥಾ ರೂಪಕ್ಕೆ ಪರಿಣಾಮವೆನ್ನುತ್ತಾರೆ ಅರ್ಥಾತ್ ಸಮಾನ ಸತ್ತೆಯುಳ್ಳವು ಗಳಾಗಿ ಅನ್ಯಥಾರೂಪವುಳ್ಳವುಗಳಿಗೆ ಪರಿಣಾಮವೆನ್ನುತ್ತಾರೆ.

ಉದಾ – ಹಾಲು ಮತ್ತು ಮೊಸರು ಎರಡೂ ವ್ಯಾವಹಾರಿಕ ಸತ್ತಾ ಗಳು ರೂಪಗಳು ಬೇರೆ ಬೇರೆಯಾಗಿವೆ. ಮತ್ತು ಹಾಲಿನ ರುಚಿ ಬೇರೆ, ಮೊಸರಿನ ರುಚಿ ಬೇರೆ ಇದೇ ಪರಿಣಾಮ

ಉಪಾದಾನ ಕಾರಣವಾದ ಅವಿದ್ಯೆಯು ಅನಿರ್ವಚನೀಯವಾಗಿದೆ ಅದರಂತೆ ಸರ್ಪ ಮತ್ತು ಸರ್ಪಜ್ಞಾನವೂ ಸಹ ಅನಿರ್ವಚನೀಯವೇ ಆಗಿದೆ ಈ ಕಾರಣದಿಂದ ಸರ್ಪ ಮತ್ತು ಸರ್ಪಜ್ಞಾನ ಅವಿದ್ಯೆಯು ಸಮಾನ ಸ್ವಭಾವ ಅರ್ಥಾತ್ ಸಮಾನ ಸತ್ತ ಉಳ್ಳವುಗಳಾಗಿವೆ ಇನ್ನು ಅವಿದ್ಯೆಗೆ ರೂಪವಿಲ್ಲ, ಸರ್ಪಕ್ಕೆ ಮತ್ತು ಸರ್ಪಜ್ಞಾನಕ್ಕೆ ರೂಪವಿವೆ, ಅಂದರೆ ಸ್ವರೂಪಗಳು ಭಿನ್ನ ಭಿನ್ನವಾದಂತಾಯಿತು ಇದು ಅವಿದ್ಯೆಯ ಪರಿಣಾಮ.

ಪ್ರಶ್ನೆ – ವಿವರ್ತವೆಂದರೇನು ?

ಉತ್ತರ – ಅಧಿಷ್ಠಾನದ ವಿಪರೀತ ಸ್ವಭಾವವುಳ್ಳ ಅನ್ಯಥಾ ಸ್ವರೂಪಕ್ಕೆ ವಿವರ್ತವೆನ್ನುತ್ತಾರೆ. ಅರ್ಥಾತ್ ವಿಷಮ ಸತ್ತೆಯುಳ್ಳ ಅನ್ಯಥಾರೂಪವಾಗಿ ರುವುದಕ್ಕೆ ವಿವರ್ತವೆನ್ನುತ್ತಾರೆ.

ರಜ್ಜು ಅವಚ್ಛಿನ್ನ ಅಧಿಷ್ಠಾನ ಚೇತನವು ಸದ್ರೂಪವಾಗಿವೆ. ಇನ್ನು ಸರ್ಪ ಮತ್ತು ಸರ್ಪಜ್ಞಾನವು ಸದ್ರೂಪಕ್ಕಿಂತ ವಿಲಕ್ಷಣವಾದ ಅನಿರ್ವಚ ನೀಯ ಸತ್ತಾಗಳಾಗಿವೆ. ಇಲ್ಲಿ ಸರ್ಪ ಮತ್ತು ಸರ್ಪಜ್ಞಾನಗಳು ತಮ್ಮ ಅಧಿಷ್ಠಾನ ಚೇತನಕ್ಕಿಂತ ವಿಷಮ ಸತ್ತೆಯುಳ್ಳವುಗಳಾದವು ಮತ್ತು ಚೇತನಕ್ಕೆ ಆಕಾರವಿಲ್ಲ , ಸರ್ಪ, ಸರ್ಪಜ್ಞಾನಕ್ಕೆ ಆಕಾರವಿದೆ ಆದ್ದರಿಂದ ಅನ್ಯಥಾರೂಪ ಉಳ್ಳವುಗಳಾದವು ಇಲ್ಲಿ ಚೇತನಕ್ಕೂ, ಸರ್ಪ ಮತ್ತು ಸರ್ಪಜ್ಞಾನಕ್ಕೂ ಸತ್ತೆಯೂ ವಿಷಮವಾಯಿತು ಮತ್ತು ರೂಪವೂ ಬೇರೆ ಯಾಯಿತು.

ಆದ್ದರಿಂದ ಸರ್ಪ ಮತ್ತು ಸರ್ಪಜ್ಞಾನವು ಅವಿದ್ಯೆಯ ಪರಿಣಾಮ

ಮತ್ತು ಚೇತನದ ವಿವರ್ತಗಳೆಂದು ಹೇಳಿಸಿಕೊಳ್ಳುತ್ತವೆ. ಇದರಂತೆ ಜನ್ಮ-ಮರಣಾದಿ ದುಃಖರೂಪವಾದ ಸಂಸಾರವೂ, ಸಂಸಾರಜ್ಞಾನವೂ ಸಹ ಅವಿದ್ಯೆಯ ಪರಿಣಾಮ ಮತ್ತು ಚೇತನದ ವಿವರ್ತವಾಗಿದೆ.

## ಸರ್ಪ ಮತ್ತು ಸರ್ಪಜ್ಞಾನಕ್ಕೆ ಅಧಿಷ್ಠಾನ

ಪ್ರಶ್ನೆ – ಸ್ವಾಮಿ ! ಸರ್ಪ ಮತ್ತು ಸರ್ಪಜ್ಞಾನಗಳೆರಡೂ ಅವಿದ್ಯೆಯ ಪರಿಣಾಮ ಚೇತನದ ವಿವರ್ತವೆಂದು ತಿಳಿಯಿತು. ಇನ್ನು ಸರ್ಪಕ್ಕೆ ಮತ್ತು ಸರ್ಪಜ್ಞಾನಕ್ಕೆ ಅಧಿಷ್ಠಾನ ಯಾರು ?

ಉತ್ತರ – ಕಲ್ಪಿತವಾದ ಸರ್ಪಕ್ಕೆ ರಜ್ಜು ಉಪಹಿತ ಚೇತನವೇ ಅಧಿಷ್ಠಾನ. ರಜ್ಜುವು ಅಧಿಷ್ಠಾನವಾಗಲಾರದು. ಏಕೆಂದರೆ ಸರ್ಪದಂತೆ ರಜ್ಜುವೂ ಸಹ ಕಲ್ಪಿತವೆ ಒಂದು ಕಲ್ಪಿತ ಪದಾರ್ಥವು ಇನ್ನೊಂದು ಕಲ್ಪಿತ ಪದಾರ್ಥಕ್ಕೆ ಅಧಿಷ್ಠಾನವಾಗಲಾರದು ಇದು ಒಂದು ನೇಮ. ಮತ್ತು ಜಡ ಪದಾರ್ಥವೂ ಅಧಿಷ್ಠಾನವಾಗಲಾರದು. ಇದೂ ಒಂದು ನೇಮ ಇದರಿಂದ ರಜ್ಜು ಉಪಹಿತ ಚೇತನವೇ ಸರ್ಪಕ್ಕೆ ಅಧಿಷ್ಠಾನ ಮತ್ತು ರಜ್ಜುವಿಗೂ ಅದೇ ಅಧಿಷ್ಠಾನ ಒಂದು ಪಕ್ಷ ರಜ್ಜು ವಿಶಿಷ್ಟವು ಅಧಿಷ್ಠಾನವೆಂದರೆ ಒಂದು ದೋಷ ಬರುತ್ತದೆ. ಏನೆಂದರೆ ರಜ್ಜುವೂ ಮತ್ತು ಚೇತನವೂ ಎರಡೂ ಅಧಿಷ್ಠಾನವೆಂದಾಗುವುದು ಆದರೆ ರಜ್ಜು ಭಾಗದಲ್ಲಿ ಅಧಿಷ್ಠಾನ ಬಾಧಿತವಾಗುವುದು. ಈ ಕಾರಣದಿಂದ ರಜ್ಜು ಉಪಹಿತ ಚೇತನವೇ ಅಧಿಷ್ಠಾನ. ರಜ್ಜು-ವಿಶಿಷ್ಟವು ಅಧಿಷ್ಠಾನವಾಗಲಾರದು ಇದರಂತೆ ಸರ್ಪಜ್ಞಾನಕ್ಕೆ ಅಧಿಷ್ಠಾನವು ಸಾಕ್ಷಿ ಚೇತನವೇ ಆಗಿದೆ

ಈ ಪ್ರಕಾರ ಭ್ರಮಸ್ಥಳಗಳಲ್ಲಿ ವಿಷಯ ಮತ್ತು ವಿಷಯಜ್ಞಾನಗಳ ಅಧಿಷ್ಠಾನವು ಉಪಾಧಿ ಭೇದದಿಂದ ಬೇರೆ ಬೇರೆಯಾಗಿ ಕಾಣುತ್ತದೆ ಒಂದೇ ಆಗಿರುವುದಿಲ್ಲ ರಜ್ಜುವಿನ ವಿಶೇಷ ರೂಪವು ಪ್ರತೀತಿಯಾಗದೆ ಇರುವುದರಿಂದ ಅವಿದ್ಯೆಯಲ್ಲಿ ಕ್ಷೋಭೆ ಉಂಟಾಗಿ ಸರ್ಪ ಮತ್ತು ಸರ್ಪಜ್ಞಾನ ಉಂಟಾದವು ರಜ್ಜುವಿನ ವಿಶೇಷ ರೂಪದ ಜ್ಞಾನವಾಗುವುದರಿಂದ ಸರ್ಪ ಮತ್ತು ಸರ್ಪಜ್ಞಾನ ನಿವೃತ್ತಿಯಾಗುತ್ತದೆ.

ಶಂಕಾ – ರಜ್ಜುವಿನ ಜ್ಞಾನದಿಂದ ಸರ್ಪದ ನಿವೃತ್ತಿಯು ಸಂಭವಿಸು

ವುದಿಲ್ಲ ಏಕೆಂದರೆ, ಮಿಥ್ಯಾವಸ್ತುವಿನ ಅಧಿಷ್ಠಾನ ಜ್ಞಾನದಿಂದ ಮಿಥ್ಯಾ ವಸ್ತುವು ನಿವೃತ್ತಿಯಾಗುತ್ತದೆ ಎನ್ನುವುದು ಅದ್ವೈತ ಸಿದ್ಧಾಂತ. ಮಿಥ್ಯಾ ಸರ್ಪಕ್ಕೆ ಅಧಿಷ್ಠಾನ ರಜ್ಜುವಲ್ಲ ; ರಜ್ಜು ಉಪಹಿತ ಚೇತನ ಇದರಿಂದ ರಜ್ಜುವಿನ ಜ್ಞಾನದಿಂದ ಸರ್ಪದ ನಿವೃತ್ತಿಯಾಗುವುದಿಲ್ಲ.

ಸಮಾಧಾನ – ರಜ್ಜು ಮೊದಲಾದ ಜಡ ಪದಾರ್ಥಗಳ ಜ್ಞಾನವು ಅಂತಃಕರಣದ ವೃತ್ತಿರೂಪವಾಗಿದೆ. ಈ ವೃತ್ತಿಗೆ ಆವರಣವನ್ನು ಭಂಗ ಮಾಡುವುದೇ ಪ್ರಯೋಜನ. ಈ ಆವರಣವು ಅವಿದ್ಯೆಯ ಶಕ್ತಿಯಾಗಿದೆ ಆದ್ದರಿಂದ ಈ ಆವರಣವು ಜಡವನ್ನು ಆಶ್ರಯಿಸಿಲ್ಲ ಅವಿದ್ಯೆಯ ಶಕ್ತಿಯಾದ ಈ ಆವರಣಕ್ಕೆ ಚೇತನವೇ ಆಶ್ರಯವಾಗಿರಬೇಕು. ಜಡವು ಆಶ್ರಯವಾಗ ಲಾರದು. ಇಲ್ಲಿ ಅಂತಃಕರಣ ವೃತ್ತಿಯು ರಜ್ಜುವಿನ ಮೇಲೆ ಆವರಿಸಿರುವ ಆವರಣವನ್ನು ಭಂಗ ಮಾಡಿತು, ಎಂದರೆ ರಜ್ಜು ಉಪಹಿತ ಚೇತನದ ಆಶ್ರಯ ದಲ್ಲಿರುವ ಅವಿದ್ಯೆಯ ಶಕ್ತಿಯಾದ ಆವರಣವನ್ನು ನಾಶ ಮಾಡಿತು ಎಂದು ಗ್ರಹಿಸಬೇಕು. ಆಗ ವೃತ್ತಿಯಲ್ಲಿರುವ ಚಿದಾಭಾಸನು ರಜ್ಜುವನ್ನು ಬೆಳಗು ತ್ತಾನೆ.

ಇಲ್ಲಿ ಚೇತನವು ಸ್ವಯಂಪ್ರಕಾಶವಾದುದರಿಂದ ಚಿದಾಭಾಸನ ಉಪ ಯೋಗ ಬೇಕಾಗಿಲ್ಲ.

ಉದಾ – ಬಾನದೊಳಗಿರುವ ತಿಂಡಿ ಪದಾರ್ಥವನ್ನು ಅಂಧಕಾರದಲ್ಲಿ ನೋಡಬೇಕಾದರೆ ಬಾನವನ್ನು ಹೊಡೆಯಬೇಕು; ಜೊತೆಗೆ ಬ್ಯಾಟರಿಯೂ ಬೇಕು. ಬಾನದೊಳಗಿರುವ ರತ್ನವನ್ನು ನೋಡಲು ಬಾನವನ್ನು ಭಂಗ ಮಾಡಿದರೆ ಸಾಕು , ಬ್ಯಾಟರಿಯ ಉಪಯೋಗವಿಲ್ಲ

ಈ ಪ್ರಕಾರ ಚಿದಾಭಾಸಸಹಿತ ಅಂತಃಕರಣದ ವೃತ್ತಿರೂಪ ಜ್ಞಾನ ದಲ್ಲಿ ಇರುವ ವೃತ್ತಿಭಾಗದ ಆವರಣ ಭಂಗರೂಪ ಫಲವು ಚೇತನದಲ್ಲಿ ಉಂಟಾಗುತ್ತದೆ ಇನ್ನು ಚಿದಾಭಾಸಭಾಗದ ಪ್ರಕಾಶರೂಪ ಫಲವು ರಜ್ಜುವಿ ನಲ್ಲಿದೆ. ಸಾರಾಂಶವೇನೆಂದರೆ, ಸಾಭಾಸಾಂತಃಕರಣ ವೃತ್ತಿಯು ಆವರಣ ಭಂಗ ಮಾಡಿತು ಎಂದರೆ ಚೇತನವನ್ನು ಆವರಿಸಿರುವ ಆವರಣವನ್ನು ಭಂಗ ಮಾಡಿತು ಎಂದು ಅರ್ಥ. ಇದು ವೃತ್ತಿಗೆ ಫಲ. ಇನ್ನು ವೃತ್ತಿಯಲ್ಲಿರುವ ಚಿದಾಭಾಸನಿಗೆ ರಜ್ಜುವನ್ನು ಪ್ರಕಾಶ ಮಾಡುವುದೇ ಫಲ. ಇದರಿಂದ ವೃತ್ತಿ

ಜ್ಞಾನಕ್ಕೆ ವಿಷಯು ಕೇವಲ ಜಡವಾದ ರಜ್ಜುವಲ್ಲ ಅಧಿಷ್ಠಾನ ಚೇತನ ಸಹಿತ ರಜ್ಜುವೇ ಸಾಭಾಸ ವೃತ್ತಿಗೆ ವಿಷಯವಾಗಿದೆ ಆದ್ದರಿಂದಲೇ ವೇದಾಂತ ಸಿದ್ಧಾಂತ ಗ್ರಂಥಗಳಲ್ಲಿ "ಅಂತಃಕರಣ ಜನ್ಯ ವೃತ್ತಿ ಜ್ಞಾನವು ಸರ್ವತ್ರ ಬ್ರಹ್ಮವನ್ನೇ ವಿಷಯೀಕರಿಸುತ್ತದೆ" ಎಂದು ಹೇಳಿದೆ. ಈ ಪ್ರಕಾರ ದಿಂದ ರಜ್ಜು ಜ್ಞಾನದಿಂದ ಆವರಣವು ನಿವಾರಣೆಯಾಗುವುದರ ಮೂಲಕ ಸರ್ಪದ ಅಧಿಷ್ಠಾನವಾದ ರಜ್ಜು ಅವಚ್ಛಿನ್ನ ಚೇತನದ ಭಾನವಾಗುತ್ತದೆ. ಆದ್ದರಿಂದ ರಜ್ಜುವಿನ ಜ್ಞಾನವಾಯಿತು ಎಂದರೆ ಸರ್ಪಕ್ಕೆ ಅಧಿಷ್ಠಾನವಾದ ಚೇತನದ ಜ್ಞಾನವಾಯಿತು ಎಂದು ಗ್ರಹಿಸಬೇಕು. ಇದರಿಂದಲೇ ಸರ್ಪ ನಿವೃತ್ತಿಯು ಸಂಭವಿಸುತ್ತದೆ.

ಎರಡನೆ ಶಂಕೆ – ಒಂದು ವೇಳೆ ರಜ್ಜುವಿನ ಜ್ಞಾನದಿಂದ ಸರ್ಪ ನಿವೃತ್ತಿ ಯಾದರೂ ಸರ್ಪಜ್ಞಾನವು ನಿವೃತ್ತಿಯಾಗುವುದಿಲ್ಲ. ಏಕೆಂದರೆ ಮಿಥ್ಯಾ ಸರ್ಪದ ಅಧಿಷ್ಠಾನವು ರಜ್ಜು ಅವಚ್ಛಿನ್ನ ಚೇತನ ; ಇನ್ನು ಸರ್ಪಜ್ಞಾನದ ಅಧಿಷ್ಠಾನವಾದರೋ ಸಾಕ್ಷೀಚೇತನ. ಹಿಂದೆ ಹೇಳಿದಂತೆ ರಜ್ಜುವಿನ ಜ್ಞಾನ ದಿಂದ ರಜ್ಜು ಅವಚ್ಛಿನ್ನ ಚೇತನದ ಭಾನವಾಗುತ್ತದೆಯೇ ವಿನಃ ಸಾಕ್ಷೀ ಚೇತನದ ಭಾನವಾಗುವುದಿಲ್ಲ. ಇದರಿಂದ ಸಾಕ್ಷೀಚೇತನದ ಆಶ್ರಯ ದಲ್ಲಿರುವ ಸರ್ಪಜ್ಞಾನವು ನಿವೃತ್ತಿಯಾಗಲಿಲ್ಲ. ಏಕೆಂದರೆ ಅಧಿಷ್ಠಾನದ ಜ್ಞಾನವಾಗದೆ ಕಲ್ಪಿತವು ನಿವೃತ್ತಿಯಾಗಲಾರದು. ಇದರಿಂದ ಸರ್ಪದ ಅಧಿಷ್ಠಾನವಾದ ರಜ್ಜು ಅರ್ಥಾತ್ ರಜ್ಜು ಅವಚ್ಛಿನ್ನ ಚೇತನದ ಜ್ಞಾನದಿಂದ ಸರ್ಪ ನಿವೃತ್ತಿಯಾಯಿತೇ ವಿನಃ ಸರ್ಪಜ್ಞಾನವು ನಿವೃತ್ತಿಯಾಗಲಿಲ್ಲ.

ಸಮಾಧಾನ – ಜ್ಞಾನವು ವಿಷಯಾಧೀನವಾಗಿರುತ್ತದೆ ಇಲ್ಲಿ ಸರ್ಪವು ವಿಷಯು ವಿಷಯುವಾದ ಸರ್ಪವು ನಿವೃತ್ತಿಯಾದ ಕೂಡಲೇ ಆ ಸರ್ಪ ವಿಷಯಕ್ಕೆ ಅಧೀನವಾದ ಜ್ಞಾನವೂ ಕೂಡಲೇ ನಿವೃತ್ತಿಯಾಗುವುದು

ಪ್ರಶ್ನೆ – ಅಧಿಷ್ಠಾನ ವಸ್ತುವಿನ ಜ್ಞಾನವಾಗದೆ ಕಲ್ಪಿತ ಪದಾರ್ಥವು ನಿವೃತ್ತಿಯಾಗುವುದಿಲ್ಲವಲ್ಲವೇ ? ಇಲ್ಲಿ ಸರ್ಪಜ್ಞಾನವು ಕಲ್ಪಿತ, ಅದರ ಅಧಿಷ್ಠಾನ ಸಾಕ್ಷೀಚೇತನ. ಸಾಕ್ಷೀಚೇತನದ ಜ್ಞಾನವು ಆಗಿಯೇ ಇಲ್ಲ ;

ಈ ರೀತಿ ಸಾಕ್ಷೀಚೇತನದ ಜ್ಞಾನವಾಗದೇ ಕಲ್ಪಿತವಾದ ಸರ್ಪಜ್ಞಾನವು ನಿವೃತ್ತಿಯಾಗುತ್ತದೆನ್ನುವುದು ಸಮಂಜಸವಾಗುವುದಿಲ್ಲ.

ಉತ್ತರ – ಶಿಷ್ಯಾ! ಇಲ್ಲಿ ನಿವೃತ್ತಿಯು ಎರಡು ಪ್ರಕಾರವಾಗಿರುವುದು : (೧) ಅತ್ಯಂತ ನಿವೃತ್ತಿ, (೨) ಕಾರಣದಲ್ಲಿ ಕಾರ್ಯದ ಲಯರೂಪ ನಿವೃತ್ತಿ

ಪ್ರಶ್ನೆ – ಅತ್ಯಂತ ನಿವೃತ್ತಿ ಎಂದರೇನು ?

ಉತ್ತರ – ಕಾರಣ ಸಹಿತ ಕಾರ್ಯವು ನಿವೃತ್ತಿಯಾಗುವುದಕ್ಕೆ ಅತ್ಯಂತ ನಿವೃತ್ತಿ ಎನ್ನುತ್ತಾರೆ

ಪ್ರಶ್ನೆ – ಈ ಎಲ್ಲಾ ಕಾರ್ಯಗಳಿಗೂ ಕಾರಣ ಯಾವುದು ?

ಉತ್ತರ – ಅಜ್ಞಾನವೇ ಈ ಎಲ್ಲಾ ಕಾರ್ಯಗಳಿಗೂ ಮೂಲಕಾರಣ

ಪ್ರಶ್ನೆ – ಅಜ್ಞಾನಸಹಿತ ಕಲ್ಪಿತ ಕಾರ್ಯದ ನಿವೃತ್ತಿ ಹೇಗಾಗುತ್ತದೆ ?

ಉತ್ತರ – ಅಜ್ಞಾನಸಹಿತ ಕಲ್ಪಿತ ಕಾರ್ಯದ ನಿವೃತ್ತಿಯು ಅದರ ಅಧಿಷ್ಠಾನದ ಜ್ಞಾನದಿಂದ ಸಂಭವಿಸುತ್ತದೆ.

ಪ್ರಶ್ನೆ – ಕಾರಣದಲ್ಲಿ ಕಾರ್ಯದ ಲಯ ನಿವೃತ್ತಿ ಎಂದರೇನು ? ಅದು ಹೇಗಾಗುವುದು ?

ಉತ್ತರ – ಕಾರಣದಲ್ಲಿ ಕಾರ್ಯದ ಲಯರೂಪ ನಿವೃತ್ತಿಯು ಅಧಿಷ್ಠಾನದ ಜ್ಞಾನವಿಲ್ಲದೇ ಆಗಬಹುದು ಇದಕ್ಕೆ ಅಧಿಷ್ಠಾನ ಜ್ಞಾನವಾಗಲೇ ಬೇಕೆಂಬ ನಿಬಂಧನೆಯಿಲ್ಲ.

ಉದಾ – ಸುಷುಪ್ತಾವಸ್ಥೆಯಲ್ಲಿ ಸರ್ವ ಪದಾರ್ಥಗಳೂ ತಮ್ಮ ಕಾರಣವಾದ ಅಜ್ಞಾನದಲ್ಲಿ ಲಯವಾಗುವುವು ಮತ್ತು ಪ್ರಳಯ ಕಾಲದಲ್ಲಿ ಸರ್ವ ಜಗತ್ತೂ ತನ್ನ ಕಾರಣವಾದ ಅಜ್ಞಾನದಲ್ಲಿ ಲಯವಾಗುವುದು ಇಂತಹ ನಿವೃತ್ತಿ ಅಥವಾ ಲಯಕ್ಕೆ ಅಧಿಷ್ಠಾನ ಜ್ಞಾನ ಬೇಕಾಗಿಲ್ಲ. ಇಲ್ಲಿ ಭೋಗೋಪ ಕರ್ಮಗಳ ಅಭಾವವೇ ಕಾರಣ. ಆದ್ದರಿಂದ ಕಾರ್ಯವು ತನ್ನ ಕಾರಣದಲ್ಲಿ ಲಯವಾಗುವಾಗ ಅಧಿಷ್ಠಾನ ಜ್ಞಾನದ ಅವಶ್ಯಕತೆಯಿಲ್ಲ. ಈ ನಿಯಮದಂತೆ ಸರ್ಪಜ್ಞಾನಕ್ಕೆ ಅಧಿಷ್ಠಾನವಾದ ಸಾಕ್ಷೀಚೇತನದ ಜ್ಞಾನವಾಗದೆ ಸರ್ಪಜ್ಞಾನವು ನಿವೃತ್ತಿಯಾಗುತ್ತದೆ. ಇಲ್ಲಿ ಸರ್ಪಜ್ಞಾನಕ್ಕೆ ವಿಷಯವಾದ

ಯಾವ ಸರ್ಪವಿರುವುದೋ ಆ ಸರ್ಪದ ಅಭಾವವೇ, ಸರ್ಪಜ್ಞಾನದ ಲಯಕ್ಕೂ ಕಾರಣವಾಗಿದೆ ಈ ಪ್ರಕಾರವಾಗಿ ಸರ್ಪದ ನಿವೃತ್ತಿಯು ರಜ್ಜುವಿನ ಅರ್ಥಾತ್ ರಜ್ಜು ಅವಚ್ಛಿನ್ನ ಚೇತನದ ಜ್ಞಾನದಿಂದ ನಿವೃತ್ತಿಯಾಗುತ್ತದೆ, ಮತ್ತು ಸರ್ಪಜ್ಞಾನವು ಸರ್ಪಜ್ಞಾನಕ್ಕೆ ವಿಷಯವಾದ ಸರ್ಪದ ಅಭಾವದಿಂದ ನಿವೃತ್ತಿಯಾಗುತ್ತದೆ

ಪ್ರಶ್ನೆ – ರಜ್ಜುವಿನ ಜ್ಞಾನದಿಂದ ಸರ್ಪ ಮತ್ತು ಸರ್ಪಜ್ಞಾನಗಳೆರಡೂ ನಿವೃತ್ತಿಯಾಗುವ ವಿಷಯವನ್ನು ಸುಲಭವಾಗಿ ತಿಳಿಯುವಂತೆ ಹೇಳಿರಿ.

ಉತ್ತರ – ಸರ್ಪ ಮತ್ತು ಸರ್ಪಜ್ಞಾನಗಳೆರಡೂ ರಜ್ಜುವಿನ ಜ್ಞಾನದಿಂದಲೇ ನಿವೃತ್ತಿಯಾಗುತ್ತವೆ ಏಕೆಂದರೆ ರಜ್ಜುವಿನ ಪ್ರತ್ಯಕ್ಷಜ್ಞಾನವಾದ ಕೂಡಲೇ ಅಂತಃಕರಣ ವೃತ್ತಿಯು ನೇತ್ರೇಂದ್ರಿಯ ದ್ವಾರ ಹೊರಬಿದ್ದು, ರಜ್ಜು ದೇಶದವರೆಗೆ ಹೋಗಿ, ರಜ್ಜುವಿನ ಸಮಾನಾಕಾರ ಹೊಂದುವುದು ಈ ಕಾರಣದಿಂದ ರಜ್ಜುವಿನ ಪ್ರತ್ಯಕ್ಷಜ್ಞಾನ ಕಾಲದಲ್ಲಿ ವೃತ್ತಿಗೆ ಅಧಿಷ್ಠಾನವಾದ ವೃತ್ತಿ ಉಪಹಿತ ಚೇತನ ಮತ್ತು ರಜ್ಜುವಿಗೆ ಅಧಿಷ್ಠಾನವಾದ ರಜ್ಜು ಉಪಹಿತ ಚೇತನಗಳೆರಡೂ ಒಂದಾದವು ವಸ್ತು ಮತ್ತು ವೃತ್ತಿಗಳು ಬೇರೆ ಬೇರೆಯಾಗಿರುವವರೆಗೂ ಅಧಿಷ್ಠಾನಗಳೂ ಬೇರೆಬೇರೆಯಾಗಿರುತ್ತವೆ. ವೃತ್ತಿಯೂ ವಸ್ತುವೂ ಒಂದಾದಾಗ ಆ ಎರಡರ ಅಧಿಷ್ಠಾನಗಳೂ ಒಂದಾಗುತ್ತವೆ ಈ ವೃತ್ತಿ ಉಪಹಿತ ಚೇತನಕ್ಕೂ ರಜ್ಜು ಉಪಹಿತ ಚೇತನಕ್ಕೂ ಭೇದವಿಲ್ಲ ಚೇತನದಲ್ಲಿ ಭೇದವೆಲ್ಲಿಂದ ಬರುತ್ತದೆ! ಉಪಾಧಿಗಳ ಭೇದದಿಂದ ಚೇತನದಲ್ಲೂ ಭೇದವು ಮಿಥ್ಯೆಯಿಂದ ಕಂಡುಬರುತ್ತದೆ.

ಇಲ್ಲಿ ವ್ಯಕ್ತಿ ಉಪಹಿತ ಚೇತನಕ್ಕೂ ಮತ್ತು ರಜ್ಜು ಉಪಹಿತ ಚೇತನಕ್ಕೂ ಭೇದಕ ಉಪಾಧಿಗಳು ವೃತ್ತಿ ಮತ್ತು ರಜ್ಜುಗಳಾಗಿವೆ. ಎಲ್ಲಿಯವರೆಗೆ ಈ ಉಪಾಧಿಗಳಾದ ವೃತ್ತಿ ಮತ್ತು ರಜ್ಜುಗಳು ಭಿನ್ನ ಭಿನ್ನ ದೇಶಗಳಲ್ಲಿರುತ್ತವೆಯೋ ಅಲ್ಲಿಯವರೆಗೆ ಉಪಾಧಿಗಳ ಅಧಿಷ್ಠಾನವಾದ ಚೇತನದಲ್ಲಿ ಭೇದವು ಕಂಡುಬರುತ್ತದೆ ಯಾವಾಗ ಎರಡು ಉಪಾಧಿಗಳೂ ಒಂದಾಗುವುವೋ ಅಂದರೆ ಒಂದೇ ದೇಶದಲ್ಲಿ ಸೇರುವುವೋ, ಆಗ ಉಪಹಿತ ಚೇತನಗಳೂ ಒಂದಾಗುವುವು. ಇದು ವೇದಾಂತ ಸಿದ್ಧಾಂತ.

ಬೇರೆ ಬೇರೆ ದೇಶಗಳಲ್ಲಿರುವ ಉಪಾಧಿಗಳ ಭೇದದಿಂದ ಉಪಹಿತ ಚೇತನಗಳಲ್ಲಿಯೂ ಭೇದ ಕಂಡುಬರುತ್ತವೆ ಉಪಾಧಿಗಳು ಒಂದಾದಾಗ ಆ ಎರಡು ಉಪಾಧಿಗಳ ಉಪಹಿತ ಚೇತನವೂ ಸಹ ಒಂದಾಗುವುದು

ಈ ಪ್ರಕಾರವಾಗಿ ರಜ್ಜುವಿನ ಪ್ರತ್ಯಕ್ಷಜ್ಞಾನವಾದ ಸಮಯದಲ್ಲಿ ರಜ್ಜು ಉಪಹಿತ ಚೇತನ ಮತ್ತು ವೃತ್ತಿ ಉಪಹಿತ ಚೇತನ ಒಂದಾಗುತ್ತದೆ

ಪ್ರಶ್ನೆ – ವೃತ್ತಿ ಉಪಹಿತ ಚೇತನವೆಂದರೇನು ?

ಉತ್ತರ – ಸಾಕ್ಷೀಚೇತನವೆಂದರೂ, ವೃತ್ತಿ ಉಪಹಿತ ಚೇತನವೆಂದರೂ ಒಂದೇ.

ಪ್ರಶ್ನೆ – ಸಾಕ್ಷೀಚೇತನವನ್ನೇ ವೃತ್ತಿ ಉಪಹಿತ ಚೇತನವೆನ್ನುವುದಾದರೂ ಹೇಗೆ ?

ಉತ್ತರ – ಹೇಗೆಂದರೆ, ಅಂತಃಕರಣ ಮತ್ತು ಅಂತಃಕರಣ ವೃತ್ತಿಯಲ್ಲಿರುವ ಆಭಾಸನನ್ನು ಪ್ರಕಾಶ ಮಾಡುವ ಚೇತನವನ್ನೇ ಸಾಕ್ಷಿ ಎಂದು ಕರೆಯುತ್ತಾರೆ. ಆದ್ದರಿಂದ ವೃತ್ತಿ ಉಪಹಿತ ಚೇತನವೆಂದರೂ ಸಾಕ್ಷೀಚೇತನವೆಂದರೂ ಒಂದೇ.

ಪ್ರಶ್ನೆ – ಇದರಿಂದಾದ ತೀರ್ಮಾನವೇನು ?

ಉತ್ತರ – ಈ ಪ್ರಕಾರವಾಗಿ ರಜ್ಜುವಿನ ಜ್ಞಾನವಾದ ಸಮಯದಲ್ಲಿ ಸಾಕ್ಷೀಚೇತನ, ರಜ್ಜು ಉಪಹಿತ ಚೇತನಗಳಿಗೆ ಅಭೇದವಾಗುತ್ತದೆ. ಮತ್ತು ರಜ್ಜು ಉಪಹಿತ ಚೇತನದ ಭಾನವು ರಜ್ಜುವಿನ ಜ್ಞಾನದಿಂದ ಸಂಭವಿಸುತ್ತದೆ. ಮತ್ತು ರಜ್ಜು ಉಪಹಿತ ಚೇತನಕ್ಕೆ ಅಭಿನ್ನವಾದ ಸಾಕ್ಷಿಯ ಭಾನವೂ ಸಹ ರಜ್ಜುವಿನ ಜ್ಞಾನದಿಂದಲೇ ಉಂಟಾಗುತ್ತದೆ.

ಈ ಪ್ರಕಾರವಾಗಿ ರಜ್ಜುವಿನ ಜ್ಞಾನವಾದ ಸಮಯದಲ್ಲಿ ಸರ್ಪಜ್ಞಾನಕ್ಕೆ ಅಧಿಷ್ಠಾನವಾದ ಸಾಕ್ಷೀಚೇತನದ ಭಾನವೂ ಆಗುವುದರಿಂದ ಕಲ್ಪಿತವಾದ ಸರ್ಪವೂ, ಸರ್ಪಜ್ಞಾನವೂ ನಿವೃತ್ತಿಯಾಗುತ್ತವೆ.

ಸರ್ಪವು ನಿವೃತ್ತಿಯಾಗಿ ಸರ್ಪಜ್ಞಾನವು ಹಾಗೇ ಉಳಿಯುತ್ತದೆಂಬುದಕ್ಕೆ ಇದು ಉತ್ತರ.

## ತತ್ತ್ವದೃಷ್ಟಿರುವಾಚ

ದೋಹಾ – ಯಹ ಮಿಥ್ಯಾ ಪರತೀತ ಹ್ವೈ, ಜಾನ್ಯೈ ಜಗತ ಅಪಾರ ।
ಸೋ ಭಗವನ್ ಮೋಕೂ ಕಹೌ, ಕೋ ಯಾಕೋ ಆಧಾರ
॥ ೫೧ ॥

ತಾತ್ಪರ್ಯ – ಹೇ ಭಗವಾನ್ ! ಪ್ರತೀತಿಯಾಗುವ ಈ ಅಪಾರವಾದ ಮಿಥ್ಯಾ ಜಗತ್ತಿಗೆ ಆಧಾರ ಯಾರು ? ನನಗೆ ಹೇಳಿರಿ

ಈ ಮಿಥ್ಯಾ ಜಗತ್ತು ಅಪಾರವಾದುದು ಬುದ್ಧಿಯು ಇದನ್ನು ಅಳೆಯಲಾರದು. ಏಕೆಂದರೆ ಕಾರ್ಯವು ತನ್ನ ಕಾರಣವನ್ನು ತಿಳಿಯಲಾರದು. ಬುದ್ಧಿಯೂ ಸಹ ಮಿಥ್ಯಾ ಜಗತ್ತಿನ ಕಾರ್ಯದಲ್ಲಿ ಒಂದು

ಪ್ರತಿಯೊಂದು ಆಧೇಯ ಪದಾರ್ಥಕ್ಕೂ ಆಧಾರ ಬೇಕು. ಹೂವಿಗೆ ಮೇಜು ಆಧಾರ. ಮೇಜಿನ ಆಧಾರವಿಲ್ಲದೆ ಹೂವು ಇರಲಾರದು. ಇಂತಹ ಅಪಾರವಾದ ಆಧೇಯವಾದ ಜಗತ್ತಿಗೆ ಆಧಾರವಿರಬೇಕಲ್ಲವೇ ! ಇನ್ನೊಂದು ನಿಯಮವೇನೆಂದರೆ ಆಧಾರ ದೊಡ್ಡದಾಗಿರಬೇಕು. ಆಧೇಯ ಸಣ್ಣದಾಗಿರಬೇಕು ಅಂದರೆ ಅಪಾರವಾದ ಮಿಥ್ಯಾ ಜಗತ್ತಿಗಿಂತ ಆಧಾರವು ದೊಡ್ಡದಾಗಿರಬೇಕು ಮತ್ತು ವಿಷಯದ ಸಾಮಾನ್ಯ ಜ್ಞಾನವಾಗಿ ವಿಶೇಷ ಜ್ಞಾನವಾಗದೆ ಇರುವಾಗ ಉಂಟಾಗುವ ಶಂಕೆ. ಈ ಪ್ರಶ್ನೆಯಲ್ಲಿ ಇಷ್ಟೆಲ್ಲಾ ಅಡಕವಾಗಿವೆ

## ಶ್ರೀ ಗುರು ಉವಾಚ

ದೋಹಾ – ತವ ನಿಜ–ರೂಪ–ಅಜ್ಞಾನ ತೈ, ಹ್ವೈ ಮಿಥ್ಯಾ ಜಗ ಭಾನ ।
ಅಧಿಷ್ಠಾನ ಆಧಾರ ತೂ, ರಜ್ಜು–ಭಜಂಗ–ಸಮಾನ ॥ ೫೨ ॥

ಹೇ ಶಿಷ್ಯ ! ತನ್ನ ನಿಜರೂಪವನ್ನು ತಿಳಿಯದೆ ಇರುವುದರಿಂದ ಈ ಮಿಥ್ಯಾ ಜಗತ್ತು ಪ್ರತೀತಿಯಾಗುತ್ತದೆ. ನೀನೇ ಈ ಜಗತ್ತಿಗೆ ಆಧಾರನು ಮತ್ತು ಅಧಿಷ್ಠಾನನು ಹಗ್ಗವನ್ನು ಹಗ್ಗವನ್ನಾಗಿ ತಿಳಿಯದೆ ಇರುವುದರಿಂದ ಮಿಥ್ಯಾ ಸರ್ಪವು ಪ್ರತೀತಿಯಾಗುತ್ತದೆ. ಆ ಮಿಥ್ಯಾ ಸರ್ಪಕ್ಕೆ ರಜ್ಜುವೇ ಆಧಾರ ಮತ್ತು ಅಧಿಷ್ಠಾನ.

ತನ್ನನ್ನು ಪರಬ್ರಹ್ಮವನ್ನಾಗಿ ತಿಳಿಯದೆ ಇರುವುದರಿಂದಲೇ ಈ ಅಪಾರ

ವಾದ ಮಿಥ್ಯಾ ಜಗತ್ತು ಪ್ರತೀತಿಯಾಗುತ್ತವೆ ಆದ್ದರಿಂದ ಈ ಅಪಾರವಾದ ಜಗತ್ತಿಗೆ ಆಧಾರ ಮತ್ತು ಅಧಿಷ್ಠಾನವು ನೀನೇ ಆಗಿದ್ದೀಯೆ ರಜ್ಜುವಿನ ಅಜ್ಞಾನದಿಂದ ಮಿಥ್ಯಾ ಸರ್ಪವು ಪ್ರತೀತಿಯಾಗುತ್ತದೆ , ಆ ಮಿಥ್ಯಾ ಸರ್ಪಕ್ಕೆ ರಜ್ಜುವೇ ಆಧಾರ ಅಧಿಷ್ಠಾನವಲ್ಲವೆ !

ಇಲ್ಲಿ ರಜ್ಜುವು ಅಧಿಷ್ಠಾನವೆಂದು ಹೇಳಿರುವುದು ಸ್ಥೂಲದೃಷ್ಟಿಯಿಂದ ಮಿಥ್ಯಾ ಸರ್ಪಕ್ಕೆ ಅಧಿಷ್ಠಾನವು ರಜ್ಜು ಉಪಹಿತಚೇತನವೇ ಆಗಿದೆ ರಜ್ಜುವು ರಜ್ಜು ಉಪಹಿತಚೇತನದ ಉಪಾಧಿಯಾಗಿರುವುದರಿಂದ ಸ್ಥೂಲದೃಷ್ಟಿಯಿಂದ ರಜ್ಜುವನ್ನೇ ಆಧಾರವೆಂದೂ, ಅಧಿಷ್ಠಾನವೆಂದೂ ಹೇಳಿದೆ.

## ಈ ಅಪಾರವಾದ ಮಿಥ್ಯಾಜಗತ್ತಿಗೆ ಆತ್ಮನೇ ಸಾಮಾನ್ಯರೂಪದಿಂದ ಆಧಾರನು ; ವಿಶೇಷರೂಪದಿಂದ ಅಧಿಷ್ಠಾನನು.

ಪ್ರಶ್ನೆ – ರಜ್ಜುವು ಮಿಥ್ಯಾ ಸರ್ಪಕ್ಕೆ ಸಾಮಾನ್ಯರೂಪದಿಂದ ಆಧಾರವು ಹೇಗೆ ?

ಉತ್ತರ – ರಜ್ಜುವಿನಲ್ಲಿ ಎರಡು ಸ್ವರೂಪಗಳಿವೆ ಒಂದು ಸಾಮಾನ್ಯ ರೂಪ, ಇನ್ನೊಂದು ವಿಶೇಷ ರೂಪ. “ಇದು ರಜ್ಜು” ಎನ್ನುವುದರಲ್ಲಿ ‘ಇದು’ ಎನ್ನುವುದು ಹಗ್ಗದ ಸಾಮಾನ್ಯರೂಪ. ಏಕೆಂದರೆ, ಯಾವುದು ಭ್ರಾಂತಿ ಕಾಲದಲ್ಲಿಯೂ, ಭ್ರಾಂತಿ ನಿವೃತ್ತಿಯಾದ ಮೇಲೂ ತೋರುತ್ತದೆಯೋ ಅದು ಸಾಮಾನ್ಯರೂಪ. ‘ಇದು’ ಎಂಬುದು ‘ಇದು ಸರ್ಪ’ ಎನ್ನುವ ಭ್ರಾಂತಿ ಕಾಲದಲ್ಲಿಯೂ, ‘ಇದು ರಜ್ಜು’ ಎಂಬ ಭ್ರಾಂತಿ ನಿವೃತ್ತಿ ಕಾಲದಲ್ಲಿಯೂ ತೋರುತ್ತದೆ ಆದ್ದರಿಂದ ‘ಇದು’ ಎನ್ನುವುದು ರಜ್ಜುವಿನ ಸಾಮಾನ್ಯರೂಪ. ಈ ರಜ್ಜುವಿನ ‘ಇದಂ’ ಎನ್ನುವ ಸಾಮಾನ್ಯರೂಪವೇ ಮಿಥ್ಯಾ ಸರ್ಪಕ್ಕೆ ಆಧಾರವಾಗಿದೆ.

ಪ್ರಶ್ನೆ – ಮಿಥ್ಯಾ ಸರ್ಪಕ್ಕೆ ರಜ್ಜುವು ವಿಶೇಷರೂಪದಿಂದ ಅಧಿಷ್ಠಾನವು ಹೇಗೆ ?

ಉತ್ತರ – “ಇದು ಸರ್ಪ” ಎಂಬ ಭ್ರಾಂತಿ ಕಾಲದಲ್ಲಿಯೂ, “ಇದು ರಜ್ಜು” ಎನ್ನುವ ಭ್ರಾಂತಿ ನಿವೃತ್ತಿ ಕಾಲದಲ್ಲಿಯೂ ಹಗ್ಗ ತೋರಿದಾಗ ಸರ್ಪ

ತೋರುವುದಿಲ್ಲ , ಸರ್ಪ ತೋರಿದಾಗ ರಜ್ಜು ತೋರುವುದಿಲ್ಲ. ಏಕೆಂದರೆ, ಯಾವುದು ತೋರದೆ ಇರುವುದರಿಂದ ಭ್ರಾಂತಿ ಉಂಟಾಗಿ, ಯಾವುದು ತೋರುವುದರಿಂದ ಭ್ರಾಂತಿ ನಿವೃತ್ತಿಯಾಗುತ್ತದೆಯೋ ಅದು ವಿಶೇಷ ರೂಪ. ರಜ್ಜುವು ತೋರದೆ ಇರುವುದರಿಂದ ಭ್ರಾಂತಿ ಉಂಟಾಯಿತು ; ರಜ್ಜುವು ತೋರಿದ ಮೇಲೆ ಭ್ರಾಂತಿ ನಿವೃತ್ತಿಯಾಯಿತು ಆದ್ದರಿಂದ ರಜ್ಜುವೇ ವಿಶೇಷ ರೂಪ ಈ ರಜ್ಜುವಿನ ವಿಶೇಷ ರೂಪವೇ ಮಿಥ್ಯಾ ಸರ್ಪಕ್ಕೆ ಅಧಿಷ್ಠಾನವಾಗಿರುವುದು

ಪ್ರಶ್ನೆ – ಆತ್ಮನ ಸಾಮಾನ್ಯ ರೂಪ ಯಾವುದು ?

ಉತ್ತರ – ರಜ್ಜುವಿನಲ್ಲಿ ಇರುವಂತೆ ಆತ್ಮನಲ್ಲಿಯೂ ಸಾಮಾನ್ಯ ರೂಪವೆಂದೂ, ವಿಶೇಷ ರೂಪವೆಂದೂ ಎರಡು ಸ್ವರೂಪಗಳಿವೆ. ಇದರಲ್ಲಿ ಸದ್ರೂಪವೇ ಆತ್ಮನ ಸಾಮಾನ್ಯರೂಪ.

ಪ್ರಶ್ನೆ – ಆತ್ಮನ ವಿಶೇಷ ರೂಪ ಯಾವುದು ?

ಉತ್ತರ – ಅಸಂಗತಾ, ಕೂಟಸ್ಥತಾ, ನಿತ್ಯಮುಕ್ತತಾ ಇತ್ಯಾದಿಗಳು ವಿಶೇಷರೂಪವಾಗಿವೆ.

ಪ್ರಶ್ನೆ – ಆತ್ಮನ ಸದ್ರೂಪವು ಸಾಮಾನ್ಯ ರೂಪವೆಂಬುದು ಹೇಗೆ ?

ಉತ್ತರ – ''ದೇಹಾದಿ ಸ್ಥೂಲ ಸೂಕ್ಷ್ಮ ಸಂಘಾತ ಇದೆ"– ಈ ವಾಕ್ಯದಲ್ಲಿ "ಇದೆ'' ಎಂಬ ಪದವೇ ಆತ್ಮನ ಸದ್ರೂಪ. ಏಕೆಂದರೆ ಸ್ಥೂಲ ಸೂಕ್ಷ್ಮ ಸಂಘಾತವು ಮಿಥ್ಯೆಯಾದರೂ ಸತ್ಯವೆಂದು ತಿಳಿದ ಭ್ರಾಂತಿ ಕಾಲದಲ್ಲಿಯೂ ಮಿಥ್ಯಾ ಸಂಘಾತಕ್ಕಿಂತ ಅಭಿನ್ನವಾಗಿ "ಇದೆ" ಎಂಬ ಸದ್ರೂಪವು ಪ್ರತೀತಿಯಾಗುವುದು , ಮತ್ತು ಭ್ರಾಂತಿ ನಿವೃತ್ತಿ ಕಾಲದಲ್ಲಿಯೂ ಸದ್ರೂಪದ ಸ್ಪಷ್ಟತ್ವವಿದೆ ಆದ್ದರಿಂದ ಆತ್ಮನ ಸದ್ರೂಪವೇ ಸಾಮಾನ್ಯ ರೂಪ

ಪ್ರಶ್ನೆ – ಆತ್ಮನ ಅಸಂಗತಾದಿ ರೂಪಗಳು ವಿಶೇಷ ರೂಪಗಳು ಹೇಗೆ ?

ಉತ್ತರ – "ದೇಹಾದಿ ಸ್ಥೂಲ ಸೂಕ್ಷ್ಮ ಸಂಘಾತ"ವು ಸತ್ಯವೆಂಬ ಭ್ರಾಂತಿ ಕಾಲದಲ್ಲಿ ಆತ್ಮನ ಅಸಂಗತಾದಿ ರೂಪಗಳು ಪ್ರತೀತಿಯಾಗುವುದಿಲ್ಲ. ಆತ್ಮನ ಅಸಂಗತಾದಿ ಸ್ವರೂಪಗಳು ಕಾಣದೆ ಇರುವಾಗ ದೇಹಾದಿ ಸಂಘಾತ

ಗಳು ಸತ್ಯವೆಂಬ ಭ್ರಾಂತಿಯುಂಟಾಗುತ್ತದೆ ; ಆತ್ಮನ ಅಸಂಗತಾದಿ ಸ್ವರೂಪ ಗಳು ತಿಳಿದಾಗ ಭ್ರಾಂತಿಯು ನಿವೃತ್ತಿಯಾಗುತ್ತದೆ. ಆದ್ದರಿಂದ ಆತ್ಮನ ಅಸಂಗತಾದಿ ಸ್ವರೂಪಗಳು ವಿಶೇಷ ರೂಪಗಳು.

ಎಲ್ಲಾ ಭ್ರಾಂತಿಗಳಲ್ಲಿಯೂ ಸಾಮಾನ್ಯ ರೂಪವೇ ಆಧಾರವಾಗಿರುವುದು, ವಿಶೇಷ ರೂಪವೇ ಅಧಿಷ್ಠಾನವಾಗಿರುವುದು. ಸರ್ಪಕ್ಕೆ ಆಶ್ರಯವಾದ ರಜ್ಜುವಿನ ಸಾಮಾನ್ಯ ರೂಪವಾದ "ಇದಂ" ರೂಪವು ಸರ್ಪಕ್ಕೆ ಆಧಾರವಾಗಿದೆ ಮತ್ತು ವಿಶೇಷ-ರಜ್ಜು ಸ್ವರೂಪವೇ ಅಧಿಷ್ಠಾನವಾಗಿರುವಂತೆ ಈ ಅಪಾರವಾದ ಮಿಥ್ಯಾ ಪ್ರಪಂಚಕ್ಕೆ ಆಶ್ರಯವಾದ ಆತ್ಮನ ಸಾಮಾನ್ಯ ಸ್ವರೂಪವಾದ "ಸದ್ರೂಪ"ವು ಪ್ರಪಂಚಕ್ಕೆ ಆಧಾರವಾಗಿದೆ ಮತ್ತು ಅಸಂಗತಾ, ಕೂಟಸ್ಥತಾ, ನಿತ್ಯಮುಕ್ತತಾ ಮೊದಲಾದ ವಿಶೇಷ ರೂಪಗಳು ಅಧಿಷ್ಠಾನವಾಗಿವೆ.

ಸಂಬಂಧ – ಮಿಥ್ಯಾ ಸರ್ಪಕ್ಕೆ ಆಧಾರ ಮತ್ತು ಅಧಿಷ್ಠಾನ ರಜ್ಜುವಾಗಿದೆ. ಆ ಮಿಥ್ಯಾ ಸರ್ಪಕ್ಕೆ ಭಿನ್ನವಾದ ಮನುಷ್ಯನು ಸರ್ಪಕ್ಕೆ ದ್ರಷ್ಟನು. ಅದರಂತೆ ಜಗತ್ತಿನ ಆಧಾರ ಅಧಿಷ್ಠಾನನು ಆತ್ಮನಾದರೆ ಈ ಆತ್ಮನಿಗಿಂತ ಭಿನ್ನನಾದ ಮಿಥ್ಯಾ ಜಗತ್ತನ್ನು ನೋಡುವ ದ್ರಷ್ಟನು ಬೇಕಲ್ಲವೆ ? ಆ ದ್ರಷ್ಟನಾರು ? ಎಂಬ ವಿಷಯದಲ್ಲಿ ತತ್ತ್ವದೃಷ್ಟಿ ಪ್ರಶ್ನಿಸುತ್ತಾನೆ.

## ತತ್ತ್ವದೃಷ್ಟಿರುವಾಚ

ದೋಹಾ – ಮಿಥ್ಯಾ ವಸ್ತು ಜಗತ ಮೈ ಜೆ ಹೈ,
ಅಧಿಷ್ಠಾನ ಮೈ ಕಲ್ಪಿತ ತೆಹೈ ।
ಅಧಿಷ್ಠಾನ ಸೊ ದ್ವಿವಿಧ ಪಿಛಾನಹು,
ಇಕ ಚೇತನ ದೂಜೋ ಜಡ ಜಾನಹೂ ॥ ೫೪ ॥

ದೋಹಾ – ಅಧಿಷ್ಠಾನ ಜಡವಸ್ತು ಜಹಾಹೈ, ದ್ರಷ್ಟಾತಾತೈಭಿನ್ನ ತಹಾಹೈ।
ಜಹಾ ಹೋಯ ಚೇತನ ಆಧಾರಾ, ತಹಾ ನದ್ರಷ್ಟಾಹೋವೈನ್ಯಾರಾ ॥

ದೋಹಾ – ಚೇತನ ಮಿಥ್ಯಾ ಸ್ವಪ್ನಕೋ, ಅಧಿಷ್ಠಾನ ನಿರ್ಧಾರ ।
ಸೋಈ ದ್ರಷ್ಟಾ ಭಿನ್ನ ನಹಿ, ತೈಸೈ ಜಗತ ವಿಚಾರ ॥ ೫೬ ॥

ಜಗತ್ತಿನಲ್ಲಿ ಯಾವ ಯಾವ ಮಿಥ್ಯಾ ಪದಾರ್ಥಗಳಿವೆಯೋ ಅವೆಲ್ಲವೂ ತನ್ನ ಅಧಿಷ್ಠಾನದಲ್ಲಿ ಕಲ್ಪಿತಗಳಾಗಿವೆ. ಅಧಿಷ್ಠಾನವು ಎರಡು ಪ್ರಕಾರ ವಾಗಿರುತ್ತದೆ ಒಂದು ಚೇತನ ಅಧಿಷ್ಠಾನ, ಮತ್ತೊಂದು ಜಡ ಅಧಿಷ್ಠಾನ. ಎಲ್ಲಿ ಜಡ ವಸ್ತುವು ಅಧಿಷ್ಠಾನವಾಗಿರುತ್ತದೆಯೋ ಅಲ್ಲಿ ದ್ರಷ್ಟನು ಅಧಿಷ್ಠಾನ ಕ್ಕಿಂತ ಭಿನ್ನವಾಗಿರುತ್ತಾನೆ

ಉದಾ – ಮಿಥ್ಯಾ ಸರ್ಪಕ್ಕೆ ಅಧಿಷ್ಠಾನವಾದ ರಜ್ಜುವು ಜಡ. ಆದ್ದ ರಿಂದ ದ್ರಷ್ಟನು ಅಧಿಷ್ಠಾನಕ್ಕಿಂತ ಬೇರೆಯಾದ ಪುರುಷನಾಗಿರುತ್ತಾನೆ.

ಇನ್ನು ಎಲ್ಲಿ ಅಧಿಷ್ಠಾನವು ಚೇತನವಾಗಿರುತ್ತದೆಯೋ ಅಲ್ಲಿ ಅಧಿಷ್ಠಾನ ಕ್ಕಿಂತ ಬೇರೆಯಾದ ದ್ರಷ್ಟನಿರುವುದಿಲ್ಲ ಆ ಚೇತನವೇ ಆಧಾರವೂ, ಅಧಿಷ್ಠಾ ನವೂ, ದ್ರಷ್ಟವೂ ಆಗಿರುತ್ತದೆ.

ಉದಾ – ಮಿಥ್ಯಾ ಸ್ವಪ್ನಕ್ಕೆ ಸಾಕ್ಷೀಚೇತನವೇ ಅಧಿಷ್ಠಾನ. ಆ ಸಾಕ್ಷೀಚೇತನವೇ ಸ್ವಪ್ನಕ್ಕೆ ದ್ರಷ್ಟ. ಅದರಂತೆ ಜಗತ್ತಿನ ಅಧಿಷ್ಠಾನವು ಚೇತನ ಭೂತವಾದ ಆತ್ಮವಾದ್ದರಿಂದ ದ್ರಷ್ಟನೂ ಆತ್ಮನೇ; ಪ್ರತ್ಯೇಕ ದ್ರಷ್ಟನಿರು ವುದಿಲ್ಲ

ಸಿದ್ಧಾಂತವೇನೆಂದರೆ – ಮಿಥ್ಯಾ ಸರ್ಪಕ್ಕೆ ಸಾಕ್ಷೀಚೇತನವೇ ಅಧಿ ಷ್ಠಾನ ಆ ಸಾಕ್ಷೀಚೇತನವು ಚೇತನವಾದ್ದರಿಂದ ಅದೇ ದ್ರಷ್ಟ. ಇದರಿಂದ ಸರ್ವ ಕಲ್ಪಿತ ಪದಾರ್ಥಗಳ ದ್ರಷ್ಟ ಅಧಿಷ್ಠಾನವೇ ಆಗಿರುತ್ತದೆ.

ವಿ. ಸೂ ನೇತ್ರೇಂದ್ರಿಯವು ಪದಾರ್ಥಗಳನ್ನು ನೋಡುವ ದೃಷ್ಟಿ ಯಿಂದ ಅದು ದ್ರಷ್ಟವಾಗುತ್ತದೆ ಇನ್ನು ಈ ನೇತ್ರೇಂದ್ರಿಯದ ಅಂಧತ್ವ, ಮಂದತ್ವ, ಪಟುತ್ವಗಳು ಮನಸ್ಸಿಗೆ ಗೋಚರವಾಗುವುದರಿಂದ ನೇತ್ರೇಂದ್ರಿ ಯವು ದೃಶ್ಯವಾಯಿತು. ಮನಸ್ಸು ದ್ರಷ್ಟವಾಯಿತು. ಈ ಮನಸ್ಸಾದರೂ ದೃಶ್ಯವೇ ಒಬ್ಬ ಪುರುಷನು ತಂದೆಯ ದೃಷ್ಟಿಯಿಂದ ತಾನು ಮಗನಾಗಿ ಕಾಣುತ್ತಾನೆ, ಇನ್ನು ಮಗನ ದೃಷ್ಟಿಯಿಂದ ತಂದೆಯಾಗಿ ಕಾಣುತ್ತಾನೆ. ಅದರಂತೆ ಈ ಇಂದ್ರಿಯ ಮನಸ್ಸುಗಳು ದೃಶ್ಯ ಪದಾರ್ಥಗಳ ದೃಷ್ಟಿಯಿಂದ ದ್ರಷ್ಟವಾಗಿಯೂ, ದ್ರಷ್ಟನ ದೃಷ್ಟಿಯಿಂದ ದೃಶ್ಯಗಳಾಗಿಯೂ ಕಾಣುತ್ತವೆ.

ಈ ಮನಸ್ಸಿನ ಸುಖದುಃಖಗಳು, ಸುಖದುಃಖಗಳಿಲ್ಲದಿರುವ ಅಭಾವ ಕಾಲವೆಲ್ಲವೂ ಸಾಕ್ಷಿಯಾದ ಆತ್ಮನಿಗೆ ಕಾಣುವುದರಿಂದ ಸರ್ವ ಜಗತ್ತಿಗೆ ಆತ್ಮನೊಬ್ಬನೇ ದ್ರಷ್ಟ. ಉಳಿದ ಎಲ್ಲಾ ಸರ್ವ ಪದಾರ್ಥಗಳೂ ದೃಶ್ಯಗಳು. ''ವಿಜ್ಞಾತಾರಮರೇ ಕೇನವಿಜಾನೀಯಾತ್'' ಹೇ ! ಮೈತ್ರೇಯಿ, ನೋಡುವವನನ್ನು ನೋಡುವವರಾರು ? ಎಂಬ ಉಲ್ಲೇಖವು ಬೃಹದಾರಣ್ಯಕೋಪನಿಷತ್ತಿನಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಆದ್ದರಿಂದ ದ್ರಷ್ಟನಾದ ಆತ್ಮನು ಎಂದೂ ದೃಶ್ಯಸ್ಥಾನಕ್ಕೆ ಬರುವುದಿಲ್ಲ. ನಾಮರೂಪಾತ್ಮಕವಾದ ಜಗತ್ತನ್ನೂ, ಈ ಜಗತ್ತನ್ನು ಅರಿಯುವ ನೇತ್ರಾದಿ ಇಂದ್ರಿಯಗಳನ್ನೂ, ಇಂದ್ರಿಯಗಳ ಅಂಧತ್ವಾದಿಗಳನ್ನು ತಿಳಿಯುವ ಮನಸ್ಸನ್ನೂ, ಮನಸ್ಸಿನಲ್ಲಿ ಸತ್ವಗುಣ ಉಂಟಾದಾಗ ಸತ್ಯಶಮದಮೆಗಳೂ, ರಜೋಗುಣ ಉತ್ಪನ್ನವಾದಾಗ ಕಾಮಕ್ರೋಧಾದಿಗಳೂ, ತಮೋಗುಣ ಅಭಿವೃದ್ಧಿಯಾದಾಗ ಪ್ರಮಾದ ನಿದ್ರಾದಿಗಳೂ ಉಂಟಾಗುವುದನ್ನೂ, ಅವುಗಳ ಅಭಾವಗಳನ್ನೂ, ನಿರ್ವಿಕಾರಿಯಾಗಿ, ಅಸಂಗನಾಗಿ, ಕೂಟಸ್ಥನಾಗಿ ನೋಡುವ ಆತ್ಮನೊಬ್ಬನೇ ಈ ಅಪಾರವಾದ ಮಿಥ್ಯಾ ಜಗತ್ತಿಗೆ ದ್ರಷ್ಟನು.

ಇಂತಹ ಭಾವವು ಒಂದೇ ಒಂದು ಸಾರಿ ಬಂದರೂ ಸಾಕು, ಅವನೇ ನಿತ್ಯಮುಕ್ತ. ಇಂತಹ ಸದವಕಾಶ ನಿಮಗೆಲ್ಲಾ ಒದಗಲಿ.

ಸಂಬಂಧ – ಈ ಅಪಾರವಾದ ಮಿಥ್ಯಾ ಸಂಸಾರವು ದುಃಖರೂಪವಾದರೂ ಇದು ಅತ್ಯಂತ ಹಾನಿಯಾದ್ದರಿಂದ ನಿವೃತ್ತಿಮಾಡಿಕೊಳ್ಳಬೇಕೆಂಬ ಇಚ್ಛೆ ಯಾರಿಗೂ ಉಂಟಾಗಲಾರದೆಂದು ಹಿಂದೆ ಪ್ರಾರಂಭಿಸಿದ್ದನ್ನು ಉಪಸಂಹರಿಸಲು ಉದ್ಯುಕ್ತರಾಗುತ್ತಾರೆ.

## ಶ್ರೀ ಗುರುರ್ವಾಚ

ದೋಹಾ – ಇಮ ಮಿಥ್ಯಾಸಂಸಾರ ದುಃಖ, ಹ್ವೈತೋಮ್ಯೆ ಭ್ರಮ–ಭಾನ ।
ತಾಕೀ ಕಹಾ ನಿವೃತ್ತಿ ತೂ, ಚಾಹೈ ಸಿಷ್ಯ ಸುಜಾನ ॥೫೭॥

ತಾತ್ಪರ್ಯ – ಹೇ ಶಿಷ್ಯ ! ಈ ಪ್ರಕಾರ ನಿನ್ನಲ್ಲಿ ಕಲ್ಪಿತವಾದ ಸಂಸಾರರೂಪಿ ದುಃಖವು ಮಿಥ್ಯೆಯಾಗಿದ್ದರೂ ಭ್ರಾಂತಿಯಿಂದ ಪ್ರತೀತಿ

ಯಾಗುತ್ತದೆ ಇಂತಹ ಕಲ್ಪಿತವಾದ ಭ್ರಾಂತಿಯಿಂದ ಪ್ರತೀತಿಯಾಗುವ ಈ ಮಿಥ್ಯಾ ದುಃಖದ ನಿವೃತ್ತಿಯ ಇಚ್ಛೆಯು ಯಾರಿಗೂ ಉಂಟಾಗುವುದಿಲ್ಲ. ಒಬ್ಬಾನೊಬ್ಬ ಮಂತ್ರಗಾರನು ತನ್ನ ಮಂತ್ರಶಕ್ತಿಯ ಬಲದಿಂದ ನಿನ್ನ ಒಬ್ಬ ಶತ್ರುವನ್ನು ಸೃಷ್ಟಿಸಿ ತೋರಿಸುತ್ತಾನೆ ಆದರೂ ಆ ಶತ್ರುವನ್ನು ಕೊಲ್ಲಲು ಯಾರೂ ಉದ್ಯುಕ್ತರಾಗುವುದಿಲ್ಲ. ಅದರಂತೆ ಈ ಮಿಥ್ಯಾ ಸಂಸಾರವು ಭ್ರಾಂತಿಯಿಂದ ತೋರಿದರೂ ಅದರ ನಿವೃತ್ತಿಗೆ ಯಾರೂ ಉದ್ಯುಕ್ತರಾಗುವುದಿಲ್ಲ.

ಸಂಬಂಧ – ಈ ಜನ್ಮ ಮರಣ ಮೊದಲಾದ ದುಃಖವನ್ನು ಕೊಡುವ ಈ ಸಂಸಾರವು ಮಿಥ್ಯೆಯಾದರೂ ದುಃಖಗಳನ್ನು ಕೊಡುವುದರಿಂದ ಅದನ್ನು ನಿವೃತ್ತಿಮಾಡಿಕೊಳ್ಳಲೇಬೇಕು. ಆ ಉಪಾಯವನ್ನು ಗುರುಗಳಲ್ಲಿ ಪ್ರಶ್ನಿಸುತ್ತಾನೆ.

### ತತ್ತ್ವದೃಷ್ಟಿರುವಾಚ

ದೋಹಾ – ಜಗಯದ್ಯಪಿ ಮಿಥ್ಯಾ ಗುರುದೇವಾ,
ತಧಾಪಿ ಮೈ ಚಾಹು ತಿಹಿ ಛೇವಾ ।
ಸ್ವಪ್ನ ಭಯಾನಕ ಜಾಕೂ ಭಾಸೈ,
ಕರಿ ಸಾಧನ ಜನಜಿವು ತಿಹಿನಾಸ ॥ ॥ ೫೮ ॥

ಯಾತೈ ಹ್ವೈ ಜಾತೈಜಗ ಹಾನಾ,
ಸೊ ಉಪಾಯ ಭಾಖೋ ಭಗವಾನಾ ।
ತುಮು ಸಮಾನ ಸತಗುರು ನಹಿ ಆನಾ,
ಶ್ರವನ ಪುಂ ಕದೆ ವಂಚಕ ನಾನಾ ॥ ೫೯ ॥

ಭಗವಾನ್ ! "ಸಂಸಾರವು ನನ್ನಲ್ಲಿ ಮಿಥ್ಯಾರೂಪದಿಂದ ಪ್ರತೀತಿಯಾಗುತ್ತದೆ ಸತ್ಯರೂಪದಿಂದ ಇಲ್ಲವೇ ಇಲ್ಲ'' ಎಂದು ಹೇಳಿದಿರಿ. ಒಂದು ವೇಳೆ ನೀವು ಹೇಳಿದ ಈ ಮಾತು ಸತ್ಯವಾದರೂ ಸಹ ಮಿಥ್ಯಾರೂಪಿನಿಂದಾದರೂ ಏಕೆ ತೋರಬೇಕು ? ಯಾವ ಉಪಾಯದಿಂದ ಜನ್ಮ ಮರಣಾದಿ ಸಂಸಾರಗಳು ನನ್ನಲ್ಲಿ ಭಾನವಾಗುವುದಿಲ್ಲವೋ ಆ ಉಪಾಯವನ್ನೂ ತಾವು ಹೇಳಿರಿ.

ಮತ್ತು "ಮಿಥ್ಯಾ ವಸ್ತುವಿನ ನಿವೃತ್ತಿಯ ಸಲುವಾಗಿ ಸಾಧನಗಳು ಬೇಕಾಗಿಲ್ಲ"ವೆಂದು ಹೇಳಿದಿರಿ; ಈ ಮಾತೂ ಸತ್ಯವೇ. ಆದರೂ ಗುರುದೇವಾ ! ಯಾವ ಮಿಥ್ಯಾ ಪದಾರ್ಥಗಳು ದುಃಖಕ್ಕೆ ಸಾಧನವಾಗಿರುವವೋ ಅವು ಸುಳ್ಳಾದರೂ ದೂರ ಮಾಡಿಕೊಳ್ಳಬೇಕು. ಉದಾಹರಣೆ – ಒಬ್ಬಾನೊಬ್ಬ ಪುರುಷನು ದಿನವೂ ಭಯಾನಕ ಸ್ವಪ್ನಗಳನ್ನು ನೋಡುತ್ತಾನೆ. ಸ್ವಪ್ನವು ಮಿಥ್ಯೆ ಎಂದು ತಿಳಿದಿದ್ದರೂ ಸ್ವಪ್ನಕ್ಕೆ ಭಯಪಟ್ಟ ಆ ಪುರುಷನು ಬಲ್ಲ ಪಂಡಿತರಲ್ಲಿ ಹೋಗಿ ಭಯಾನಕ ಸ್ವಪ್ನ ನಿವೃತ್ತಿಗಾಗಿ ಉಪಾಯಗಳನ್ನು ಕೇಳುತ್ತಾನಲ್ಲವೆ ! ಮತ್ತು ಪಂಡಿತರ ಆಜ್ಞೆಯಂತೆ ಮಿಥ್ಯಾ ಸ್ವಪ್ನಗಳನ್ನು ಕಳೆದುಕೊಳ್ಳಲು ಜಪತಪಾದಿ ನಿವಾರಣೋಪಾಯಗಳನ್ನು ಮಾಡುವುದು ಕಂಡು ಬರುತ್ತದೆಯಲ್ಲವೆ ! ಅದರಂತೆ ಈ ಜಗತ್ತು ಮಿಥ್ಯೆಯಾದರೂ ಜನ್ಮ ಮರಣಾದಿ ದುಃಖಗಳನ್ನು ಕೊಡುವುದರಿಂದ ಅದರ ನಿವಾರಣ ಸಾಧನಗಳನ್ನೂ ಹೇಳಬೇಕು ನಿಮ್ಮ ಸಮಾನ ಗುರುಗಳಿಲ್ಲ, ಎಂದು ಪ್ರಶ್ನೆಮಾಡುತ್ತಾನೆ.

**ಶ್ರೀ ಗುರುವಾಣೀ**

ದೋಹಾ – ಸೋಮೈ ಕಹ್ಯೋ ಬಖಾನಿ, ಜೊ ಸಾಧನ ತೈ ಪೂಛಿಯೋ ।
ನಿಜ-ಹಿಯ ನಿಶ್ಚಯ ಆನಿ, ರಹೈ ನ ರಂಚಕ ಖೇದ ಜಗ
॥ ೬೦ ॥

ಎಲೈ ಶಿಷ್ಯನೇ ! ನೀನು ಜಗದ್ರೂಪಿ ದುಃಖದ ನಿವೃತ್ತಿಯ ಸಾಧನವನ್ನು ಹೇಳಬೇಕೆಂದು ಕೇಳಿದೆ ಅದಕ್ಕೆ ನಾನು ಈ ಮೊದಲೇ ಉತ್ತರವನ್ನು ಹೇಳಿದ್ದೇನೆ. ಅದನ್ನೇ ನೀನು ದೃಢವಾಗಿ ಮನಸ್ಸಿನಲ್ಲಿ ವಿಚಾರ ಮಾಡು ಅದರಿಂದ ಜಗದ್ರೂಪಿ ದುಃಖವು ನಿಲ್ಲಲಾರದು.

**ಶ್ರೀ ಗುರುವಾಣೀ**

ದೋಹಾ – ನಿಜ ಆತಮ ಅಜ್ಞಾನ ತೈ, ಹ್ವೈ ಪ್ರತೀತ ಜಗ ಖೇದ ।
ನಸೈ ಸು ತಾಕೇ ಬೋಧ ತೈ, ಯಹ ಭಾಖತ ಮುನಿ–ವೇದ ॥
ಜಗ ಮೊಮೈ ನಹಿ, ಬ್ರಹ್ಮಮೈ 'ಅಹಂ ಬ್ರಹ್ಮ'ಯಹಜ್ಞಾನ ।
ಸೋ ತೋಕೂ ಸಿಷಮೈ ಕಹ್ಯೋ, ನಹಿ ಉಪಾಯ ಕೋ ಆನ
॥ ೬೨ ॥

ಎಲೈ ಶಿಷ್ಯನೆ! ತನ್ನ ನಿಜಸ್ವರೂಪದ ಅಜ್ಞಾನದಿಂದ ಈ ಜಗದ್ರೂಪಿ ದುಃಖವು ಪ್ರತೀತಿಯಾಗುತ್ತದೆ ಮತ್ತು ಆತ್ಮಜ್ಞಾನದಿಂದ ದೂರವಾಗುತ್ತದೆ. ಯಾವುದರ ಅಜ್ಞಾನದಿಂದ ಯಾವುದು ಪ್ರತೀತಿಯಾಗುತ್ತದೆಯೋ ಅದು ಅದರ ಜ್ಞಾನದಿಂದಲೇ ನಿವೃತ್ತಿಯಾಗುವುದು – ಇದು ಒಂದು ನೇಮ. ರಜ್ಜುವಿನ ಅಜ್ಞಾನದಿಂದ ಸರ್ಪವು ಪ್ರತೀತಿಯಾಗುತ್ತದೆ ಮತ್ತು ರಜ್ಜುವಿನ ಜ್ಞಾನದಿಂದ ಸರ್ಪವು ನಿವೃತ್ತಿಯಾಗುತ್ತದೆ ಅದರಂತೆ ಆತ್ಮನ ಅಜ್ಞಾನದಿಂದ ಜಗತ್ತು ಪ್ರತೀತಿಯಾಗುತ್ತದೆ ಮತ್ತು ಆತ್ಮಜ್ಞಾನದಿಂದ ಜಗತ್ತು ದೂರವಾಗುತ್ತದೆ ಇದೇ ಆತ್ಮಜ್ಞಾನ. ಇದು ನನ್ನಿಂದ ನಿನಗೆ ಮೊದಲೇ ಹೇಳಲ್ಪಟ್ಟಿದೆ.

"ಈ ಮಿಥ್ಯೆಯಾದ ಜಗತ್ತು ಎಲ್ಲೆಲ್ಲಿಯೂ ಇಲ್ಲ ನೀನು ಪರಬ್ರಹ್ಮಸ್ವರೂಪನು"–ಇದೇ ಆತ್ಮಜ್ಞಾನದ ಸ್ವರೂಪ ಆತ್ಮನು ಯಾವುದಕ್ಕೂ ಸಂಬಂಧಪಡದ ಪರಬ್ರಹ್ಮವು "ಬ್ರಹ್ಮ" ಎಂಬ ಪದಕ್ಕೆ ದೊಡ್ಡದು, ಚತುರ್ಮುಖ ಬ್ರಹ್ಮ, ವೇದ, ಮಾಯೆ (''ಮಮಯೋನಿರ್ಮಹದ್ಬ್ರಹ್ಮ") ಇಷ್ಟು ಅರ್ಥಗಳು. ಇಲ್ಲಿ "ಬ್ರಹ್ಮ" ಎಂಬ ಶಬ್ದಕ್ಕೆ ''ದೊಡ್ಡದು'' ಎಂದು ಗ್ರಹಿಸಬಹುದು ಮತ್ತು ಪರಬ್ರಹ್ಮವೆಂದೂ ಗ್ರಹಿಸಬಹುದು ಎರಡೂ ಒಂದೇ ಅರ್ಥ. ದೊಡ್ಡದು ಎಂದರೆ ಎಷ್ಟು ದೊಡ್ಡದು ? ಮನಸ್ಸು ಎಷ್ಟು ದೊಡ್ಡದನ್ನು ಕಲ್ಪಿಸಬಹುದೋ ಅದಕ್ಕಿಂತಲೂ ದೊಡ್ಡದು. "ಮನಸೋಜವೀಯೊ" ಮನಸ್ಸು ಅದನ್ನು ಗ್ರಹಿಸಲಾರದು. ಅಂತಹ ತ್ರಿವಿಧ ಪರಿಚ್ಛಿನ್ನರಹಿತ ಪರಬ್ರಹ್ಮವೇ ನೀನೆಂಬ ಜ್ಞಾನವೇ ನಿಜವಾದ ಜ್ಞಾನ. ದುಃಖನಿವೃತ್ತಿಗೆ ಇದಕ್ಕಿಂತ ಬೇರೆ ಉಪಾಯವೇ ಇಲ್ಲ. ''ನಾನ್ಯಃ ಪಂಥಾಽಯ ನಾಯ ವಿದ್ಯತೇ.''

ಪ್ರಶ್ನೆ – ಯುಕ್ತಿಯಿಂದ ನಿರ್ಣಯ ಮಾಡಿ ತೋರಿಸಿರಿ

ಉತ್ತರ – ಅಯ್ಯಾ! ನೀನು ಯಾವ ದುಃಖಕ್ಕೆ ಹೆದರಿದ್ದೀಯೋ ಆ ದುಃಖವು ಇರುವುದಾದರೆ ಮೂರೂ ಕಾಲದಲ್ಲಿರಬೇಕಾಗಿತ್ತು. ''ಯದ್ರೂಪೇಣ ಯನ್ನಿಶ್ಚಿ ತದ್ರೂಪೇಣ ನ ವ್ಯಭಿಚರತಿ ತತ್ಸತ್ಯಂ"–ಯಾವುದು ಯಾವಾಗಲೂ ವ್ಯತ್ಯಾಸ ಹೊಂದದೆ ಒಂದೇ ರೀತಿ ಇರುವುದೋ ಅದು ಸತ್ಯ ಪದಾರ್ಥ. ಈ ದುಃಖಕ್ಕೆ ಆ ಲಕ್ಷಣವಿಲ್ಲ. ಸುಷುಪ್ತಾವಸ್ಥೆಯಲ್ಲಿ ಅದಕ್ಕೆ ಇರುವಿಕೆ

ಯಿಲ್ಲ ಎಲ್ಲಿ ಮನಸ್ಸಿರುತ್ತದೆಯೋ ಅಲ್ಲಿ ದುಃಖವಿರುತ್ತದೆ ಸುಷುಪ್ತಾವಸ್ಥೆಯಲ್ಲಿ ಮನಸ್ಸೇ ಇಲ್ಲ. ದುಃಖ ಎಲ್ಲಿಂದ ಬರುತ್ತದೆ? ಆತ್ಮನ ಸ್ವರೂಪದಲ್ಲಿ ದುಃಖದ ಲೇಶವೂ ಇಲ್ಲ. ಆದರೂ ತೋರುತ್ತದೆಯಲ್ಲಾ ಎಂದರೆ, ತೋರಿದಾಕ್ಷಣಕ್ಕೆ ಸತ್ಯವಲ್ಲ. ಮತ್ತು ತೋರುವುದೆಲ್ಲಾ ಸತ್ಯವಲ್ಲ. ತೋರಿದರೂ ಇರುವಿಕೆ ಇಲ್ಲದೆ ತೋರುತ್ತದೆ. ತೋರಿದರೂ ತನ್ನ ಅಧಿಷ್ಠಾನವಾದ ಆತ್ಮನಿಗೆ ಯಾವ ಹಾನಿಯನ್ನೂ ಉಂಟುಮಾಡುವುದಿಲ್ಲ. ಯಾವ ಅಧಿಷ್ಠಾನದಲ್ಲಿ ಯಾವ ಕಲ್ಪಿತ ಪದಾರ್ಥಗಳು ಭಾ ನ ವಾ ಗು ತ್ತ ವೆ ಯೋ ಅವು ತನ್ನ ಅಧಿಷ್ಠಾನಕ್ಕೆ ದೋಷವನ್ನುಂಟುಮಾಡಲಾರವು. ಅಧಿಷ್ಠಾನವಾದ್ದರಜ್ಜುವಿನಲ್ಲಿ ಪ್ರತೀತಿಯಾದ ಕಲ್ಪಿತ ಸರ್ಪವು ತನ್ನ ಅಧಿಷ್ಠಾನವಾದ ರಜ್ಜುವನ್ನು ವಿಷಯುಕ್ತವನ್ನಾಗಿ ಮಾಡಲಾರದು. ಮತ್ತು ಮರುಮರೀಚಿಕೆ ಜಲವು ತನ್ನ ಅಧಿಷ್ಠಾನವಾದ ಭೂಮಿಯನ್ನು ನೀರಿನಿಂದ ನೆನಸಲಾರದು. ಇದರಂತೆ ಆತ್ಮನಲ್ಲಿ ಕಲ್ಪಿತವಾದ ಜಗತ್ತು ತನ್ನ ಅಧಿಷ್ಠಾನವಾದ ಆತ್ಮನಿಗೆ ಯಾವ ದೋಷವನ್ನೂ ಉಂಟುಮಾಡಲಾರದು.

ಪ್ರಶ್ನೆ – ಸ್ವಾಮಿ ! ಮರುಮರೀಚಿಕೆ ಜಲದ ನೀರು ಯಾವ ವಿಧವಾದ ಉಪಯೋಗಕ್ಕೂ ಬರುವುದಿಲ್ಲ. ಅದರಂತೆ ಈ ಜಗತ್ತು ಮಿಥ್ಯವಾಗಿದ್ದರೆ ಯಾವ ಉಪಯೋಗಕ್ಕೂ ಬರಬಾರದಾಗಿತ್ತು. ಆದರೂ ಉಪಯೋಗವಾಗುತ್ತಿದೆಯಲ್ಲಾ?

ಉತ್ತರ – ಅಯ್ಯಾ! ಉಪಯೋಗಿಸಬಹುದು. ಆದರೂ ಮಿಥ್ಯೆ, ಮಿಥ್ಯೆ ಎಂದು ತಿಳಿದು ಉಪಯೋಗಿಸಬಹುದು. ಹೇಗೆಂದರೆ, ಘಟಕ್ಕೆ ಉಪಾದಾನ ಕಾರಣವಾದ ಮಣ್ಣು ಸತ್ಯವೋ ? ಘಟ ಸತ್ಯವೋ ? ಮಣ್ಣು ಒಂದೇ ಸತ್ಯ; ಘಟವು ಬರೀ ತೋರಿಕೆ ಅಲ್ಲವೇ ? ಘಟವು ಮಿಥ್ಯೆ ಎಂದು ತಿಳಿದರೂ ನೀರು ತರಲು ಉಪಯೋಗವಾಗುವುದಿಲ್ಲವೆ ! ಅದರಂತೆ ಜಗತ್ತು ಮಿಥ್ಯೆಯಾದರೂ ಉಪಯೋಗಕ್ಕೆ ಬರುತ್ತದೆ.

ಘಟದ ಒಡೆಯುವಿಕೆ ಬರುವಿಕೆ ಇತ್ಯಾದಿ ಯಾವ ಕಾರ್ಯವೂ ಮಣ್ಣಿಗೆ ಸಂಬಂಧವಿಲ್ಲ. ಅದರಂತೆ ರಾಗದ್ವೇಷ ಸುಖ-ದುಃಖ ಕರ್ತೃತ್ವ-ಭೋಕ್ತೃತ್ವಾದಿಗಳು ತನ್ನ ಅಧಿಷ್ಠಾನವಾದ ಆತ್ಮನಿಗೆ ಯಾವ ದೋಷವನ್ನೂ ಉಂಟು

ನಾತಲಾರವು. ಈ ಜಗದ್ರೂಪಿ ಸುಖದುಃಖಾದಿಗಳು ಆತ್ಮನ ಮೇಲೆ ಪರಿಣಾಮ ಮಾಡುವ ಪಕ್ಷಕ್ಕೆ ಕಳೆದುಕೊಳ್ಳಬೇಕೆಂಬ ನಿಯಮವಿತ್ತು. ಇಲ್ಲಿ ಜಗತ್ತಿನ ಅಂಟೇ ಆತ್ಮನಿಗಿಲ್ಲ. ಸೂರ್ಯನ ಆಶ್ರಯದಲ್ಲಿರುವ ಮೋಡಗಳು ತಮ್ಮ ಅಧಿಷ್ಠಾನವಾದ ಸೂರ್ಯನನ್ನು ಏನೂ ದೋಷಯುಕ್ತವನ್ನಾಗಿ ಮಾಡ ಲಾರವು ಅದರಂತೆ ಜಗದ್ರೂಪಿ ದುಃಖವೂ ಯಾವ ದೋಷವನ್ನೂ ನಿನ್ನಲ್ಲಿ ಉಂಟುಮಾಡಲಾರವು ಎಂದ ಮೇಲೆ ಅವುಗಳನ್ನು ನಿವೃತ್ತಿಮಾಡಿಕೊಳ್ಳ ಬೇಕೆಂಬ ಭ್ರಾಂತಿಯಾದರೂ ಏಕೆ ? ಇದನ್ನೇ ಶ್ರೀ ಸರ್ಪಭೂಷಣ ಶಿವ ಯೋಗಿಗಳು ಜ್ಞಾನ ಶತಕದಲ್ಲಿ "ಮಲವಿಸರ್ಜನೆ ಮಾಡಿದ ಪುರುಷನು ಮಲದ ದುರ್ವಾಸನೆ ನಿವಾರಣೆ ಮಾಡಲು ಪ್ರಯತ್ನಪಡದಂತೆ, ಜಗದ್ರೂಪಿ ದುಃಖವು ಮಿಥ್ಯೆ ಎಂದು ವಿಸರ್ಜಿಸಿದ ನಂತರ ಅದರ ದುರ್ವಾಸನಾರೂಪ ದುಃಖವನ್ನು ನಿವಾರಣೆ ಮಾಡಿಕೊಳ್ಳಬೇಕೆಂಬ ಇಚ್ಛೆಯು ಹೀನಾಯವಾದುದು" ಎಂದು ಹೇಳಿದ್ದಾರೆ. ಇದನ್ನೇ ನಿಶ್ಚಲದಾಸರು ಇಲ್ಲಿ "ಜಗ ಮೋ ಮೈನಹಿ, ಬ್ರಹ್ಮಮೈ ಅಹಂಬ್ರಹ್ಮ, ಯಹಜ್ಞಾನ" ಎಂದು ಹೇಳಿದ್ದಾರೆ "ಜಗತ್ತು ನನ್ನಲ್ಲಿ ಇಲ್ಲವೇ ಇಲ್ಲ ನಾನು ಪರಬ್ರಹ್ಮ'' – ಇದೇ ನಿಜವಾದ ಜ್ಞಾನ. ಜಗತ್ತಿನ ನಿವೃತ್ತಿಗೆ ಇದೊಂದೇ ಉಪಾಯ ; ಬೇರೆ ಉಪಾಯವಿಲ್ಲ. ಇದನ್ನು ನೀನು ಪುನಃ ನೆನಪು ಮಾಡಿಕೊ.

## ಶ್ರೀ ಗುರುವಾಚ

ದೋಹಾ – ಕರ್ಮ-ಉಪಾಸನ ತೈ ನಹಿ, ಜಗ-ನಿದಾನ ತಮ-ನಾಸ ।
ಅಂಧಕಾರ ಜಿಮ ಗೇಹ ಮೈ, ನಸೈನ ಬಿನ ಪರಕಾಸ ॥೬೩॥

ಈ ದೋಹವು ಉದಾಹರಣೆ ಸಹಿತ ವೇದಾಂತ ಸಿದ್ಧಾಂತವನ್ನು ಪ್ರತಿ ಪಾದಿಸುತ್ತದೆ.

ಜಗತ್ತಿನ ಉಪಾದಾನ ಕಾರಣವು ಅಜ್ಞಾನವಾಗಿದೆ ಈ ಅಜ್ಞಾನದ ನಾಶದಿಂದ ಜಗತ್ತಿನ ನಾಶವು ತನ್ನಷ್ಟಕ್ಕೆ ತಾನೇ ಆಗುತ್ತದೆ. ಏಕೆಂದರೆ ಉಪಾದಾನ ಕಾರಣವು ನಾಶವಾಗಲು ಕಾರ್ಯವೂ ಸಹ ನಾಶವಾಗುವುದು.

ಮಣ್ಣೇ ನಾಶವಾಗುವಾಗ ಘಟಕ್ಕೆಲ್ಲಿ ಇರುವಿಕೆ ಬಂತು ! ಇಂತಹ ಜಗತ್ತಿನ ಉಪಾದಾನ ಕಾರಣವಾದ ಅಜ್ಞಾನವು ಕೇವಲ ಜ್ಞಾನದಿಂದಲೇ ನಿವೃತ್ತಿ ಆಗುವುದು. ಕರ್ಮೋಪಾಸನೆಗಳಿಂದ ನಾಶವಾಗಲಾರದು. ಏಕೆಂದರೆ ಅಜ್ಞಾನಕ್ಕೆ ವಿರೋಧಿ ಜ್ಞಾನ ಒಂದೇ; ಕರ್ಮೋಪಾಸನೆಗಳು ವಿರೋಧಿಗಳಲ್ಲ. ಯಾವ ಪದಾರ್ಥವು ನಾಶವಾಗಬೇಕಾದರೂ ಅದಕ್ಕೆ ವಿರೋಧವಾದ ಪದಾರ್ಥದಿಂದಲೇ ಸಾಧ್ಯ ಎಣ್ಣೆಯನ್ನು ಎಣ್ಣೆಯಿಂದಲೇ ನಿವಾರಣೆ ಮಾಡಿಕೊಳ್ಳುತ್ತಾರೆ. "ಯಥಾ ಪಂಕೇನ ಪಂಕಾಂಭ''– ಕೆಸರನ್ನು ಕೆಸರಿನಿಂದಲೇ ನಿವಾರಣೆ ಮಾಡಿಕೊಳ್ಳದೆ ಅದಕ್ಕೆ ವಿರೋಧವಾದ ನೀರಿನಿಂದ ನಿವಾರಣೆ ಮಾಡುವುದು ಕಂಡುಬರುತ್ತದೆ.

ಕರ್ಮೋಪಾಸನೆಗಳು ಅಜ್ಞಾನಕ್ಕೆ ವಿರೋಧಿಗಳಲ್ಲ. ಅವೂ ಸಹ ಅಜ್ಞಾನದ ಕಾರ್ಯಗಳೇ. ಕಾರ್ಯವು ಕಾರಣವನ್ನು ನಾಶಮಾಡಲಾರದು. ವಸ್ತ್ರವು ತಂತುಗಳನ್ನು ಹೇಗೆ ನಾಶ ಮಾಡೀತು ? ಅದರಂತೆ ಕರ್ಮೋಪಾಸನೆಗಳು ಅಜ್ಞಾನವನ್ನು ನಿವಾರಣೆ ಮಾಡದೆ ಅಜ್ಞಾನವನ್ನೇ ಬಲಪಡಿಸುತ್ತವೆ. ಶಿವಪೂಜೆ ಮಾಡಿದ ಪುರುಷನು "ನಾನು ಶಿವಪೂಜೆ ಮಾಡಿದೆನು'' ಎಂದು ಹೇಳುವ ಅಹಂಕಾರವು ಅಜ್ಞಾನಕ್ಕೆ ಇನ್ನಷ್ಟು ಬಲಕೊಟ್ಟಂತಾಯಿತು. ಆದುರಿಂದ ಅಜ್ಞಾನಕ್ಕೆ ಕರ್ಮೋಪಾಸನೆಗಳು ವಿರೋಧಿಗಳಲ್ಲ.

ಮನೆಯೊಳಗಿರುವ ಕತ್ತಲು ಜಪ ತಪ ಧ್ಯಾನಾದಿಗಳಿಂದಲೂ, ಕತ್ತಿ ಇತ್ಯಾದಿ ಅಸ್ತ್ರಗಳಿಂದಲೂ ನಿವಾರಣೆಯಾಗದೆ ಪ್ರಕಾಶ ಒಂದರಿಂದಲೇ ನಿವಾರಣೆಯಾಗುವುದು. ಅಂಧಕಾರಕ್ಕೆ ವಿರೋಧಿ ಪ್ರಕಾಶ ಒಂದೇ. "ತಿಮಿರಹರಯೆನಮಃ" ಎಂಬ ಸೂರ್ಯನ ಸ್ತೋತ್ರವೂ ಇದನ್ನೇ ಸೂಚಿಸುತ್ತದೆ ಆದ್ದರಿಂದ ಅಂಧಕಾರವು ಪ್ರಕಾಶ ಒಂದರಿಂದಲೇ ದೂರವಾಗುವುದು ಅದರಂತೆ ಬುದ್ಧಿ ಎಂಬ ಒಂದು ಮನೆಯಲ್ಲಿ ಅನಾದಿ ಕಾಲದಿಂದ ಅಂಧಕಾರರೂಪ ಅಜ್ಞಾನವು ತುಂಬಿಕೊಂಡಿದೆ. ಈ ಅಜ್ಞಾನರೂಪಿ ಅಂಧಕಾರವು ಜ್ಞಾನರೂಪಿ ಪ್ರಕಾಶದಿಂದ ದೂರವಾಗುತ್ತದೆ. ಬೇರಾವ ಸಾಧನದಿಂದಲೂ ದೂರವಾಗುವುದಿಲ್ಲ.

## ಇಲ್ಲಿಯವರೆಗೆ ಹೇಳಿದ ವಿಷಯವನ್ನು ಉಪಸಂಹರಿಸುತ್ತಾರೆ

## ಶ್ರೀ ಗುರು ಉವಾಚ

ದೋಹಾ – ಭಾಖ್ಯೋ ಸಿಷ ಉಪದೇಸ ವ್ಹೈ, ಜಗ ಭಂಜಕ ಹಿಯಧಾರಿ ।
ಜೋ ಯಾವ್ಹೈ ಸಂಸಯ ರಹ್ಯೋ, ಸೋ ತುಂ ಪೂಛವಿಚಾರಿ॥

ಹೇ ಶಿಷ್ಯ ! ಜಗತ್ತನ್ನು ನಿವಾರಣೆ ಮಾಡಿಕೊಳ್ಳುವ ಉಪಾಯವನ್ನು ಹೇಳಿದ್ದೇನೆ. ಇದನ್ನು ನಿನ್ನ ಹೃದಯದಲ್ಲಿ ಧಾರಣೆ ಮಾಡಿಕೊ. ಇದರಲ್ಲಿ ಯಾವ ಶಂಕೆ ಇದ್ದರೂ ಪುನಃ ಕೇಳು.

## ತತ್ತ್ವದೃಷ್ಟಿರುವಾಚ

ದೋಹಾ – ಭೋ ಭಗವನ ಜೋ ಕುಛು ತುಮ ಭಾಖ್ಯೋ,
ಸೋ ಸಬ ಸತ್ಯ ಜಾನಿಹಿಯ ರಾಖ್ಯೋ ।
ಜಗ–ನಿದಾನ ಅಜ್ಞಾನ ಬಖಾನ್ಯೋ,
ತಾಕೋ ಭಂಜಕ ಜ್ಞಾನ ಪಿ ಭಾನ್ಯೋ ॥ ೬೫ ॥
ಜ್ಞಾನ ರೂಪ ವರ್ಣನ ಪುನಿ ಕೀನಾ,
ಜಗ ಮಿಥ್ಯಾ ಸೋವ್ಹೈ ಭಲ ಚೀನಾ ।
ಸುಖಸ್ವರೂಪ ಆತಮ ಪರಕಾಸ್ಯೋ,
ದಯಾ ತಿಹಾರೀ ಸೋ ಮೋಹಿ ಭಾಸ್ಯೋ ॥ ೬೬ ॥
ಪುನಿಭಾಖ್ಯೋ "ತು ಬ್ರಹ್ಮಸ್ವರೂಪ"
ಯಹ ವ್ಹೈ ಲಖ್ಯೋನ ಭೇದ ಅನೂಪ ।
ಯಾವ್ಹೈ ಮೋಹಿ ಸಂಕಾ ಇಕ ಆವ್ಹೈ,
ಜೀವ–ಬ್ರಹ್ಮಕೋ ಭೇದ ಜನಾವ್ಹೈ ॥ ೬೭ ॥

ಭಗವಾನ್ ! ತಾವು ಇಲ್ಲಿಯವರೆಗೆ ಏನೇನು ಹೇಳಿದಿರೋ ಅದೆಲ್ಲವನ್ನೂ ಸತ್ಯವೆಂದು ತಿಳಿಯುತ್ತೇನೆ. "ಜಗತ್ತು ಮಿಥ್ಯವಾದುದು, ಈ ಮಿಥ್ಯಾ ಜಗತ್ತಿಗೆ ಕಾರಣವಾದುದು ಅಜ್ಞಾನ, ಅಜ್ಞಾನಕ್ಕೆ ವಿರೋಧಿಯಾದ ಜ್ಞಾನದಿಂದಲೇ ಜಗತ್ತಿನ ನಿವೃತ್ತಿಯಾಗುತ್ತದೆ" ಎಂದು ಹೇಳಿದಿರಿ. ಮತ್ತು

ಜ್ಞಾನದ ಸ್ವರೂಪವನ್ನೂ ಹೇಳಿದಿರಿ. "ಜಗತ್ತು ಮಿಥ್ಯವಾದುದು ಮತ್ತು ಜೀವನು ಆನಂದ ಸ್ವರೂಪನು ಮತ್ತು ಬ್ರಹ್ಮಕ್ಕಿಂತಲೂ ಭಿನ್ನನಲ್ಲ, ಬ್ರಹ್ಮ ಸ್ವರೂಪವೇ ಆಗಿದ್ದಾನೆ" ಎಂಬ ನಿಶ್ಚಯವೇ ಜ್ಞಾನ ಇದನ್ನೂ ಸಹ ನಾನು ತಿಳಿದುಕೊಂಡೆನು.

ಆದರೆ "ಜೀವ-ಬ್ರಹ್ಮರು ಒಂದೇ" ಎಂಬ ತಾತ್ಪರ್ಯವು ತಿಳಿಯಲಿಲ್ಲ ಏಕೆಂದರೆ ಜೀವ-ಬ್ರಹ್ಮರಲ್ಲಿ ಭೇದವನ್ನು ತೋರಿಸುವ ಆಕ್ಷೇಪವು ನನ್ನ ಹೃದಯದಲ್ಲಿ ತುಂಬಲ್ಪಟ್ಟಿದೆ ಅದೇನೆಂದರೆ—

## ಪ್ರಮೇಯಗತ ಸಂಶಯದ ಸ್ವರೂಪ
## ತತ್ತ್ವದೃಷ್ಟಿರುವಾಚ

ದೋಹಾ – ಪುನ್ನಿ-ಪಾಪ ಕಾ ಹೂ ಮೈ ಕರ್ತಾ,
ಜನ್ಮ-ಮರನ ಔರ ಸುಖ-ದುಖ-ಧರ್ತಾ ।
ಔರ ಅನೇಕ ಭಾಂತಿ ಜಗ ಭಾಸೈ,
ಜಹೂ ಜ್ಞಾನ ಅಜ್ಞಾನ ಜು ನಾಸೈ ॥ ೭೮ ॥

ಜೋ ಯಾತೈ ವಿಪರೀತ ಸ್ವರೂಪಾ,
ತಾಕೋ ಬ್ರಹ್ಮ ಕಹತ ಮುನಿ-ಭೂಪಾ ।
ಕಹೋ ಏಕ ತಾ ಕೈಸೆ ಜಾನೂ,
ರೂಪ ವಿರುದ್ಧ ಹಿಯೆ ಪಹಚಾನೂ ॥ ೭೯ ॥

ಭಗವಾನ್ ! (೧) ನಾನು ಪುಣ್ಯ ಪಾಪಗಳನ್ನು ಮಾಡುವ ಕರ್ತ ನಾಗಿರುವೆನು. (೨) ಅವುಗಳ ಫಲಗಳಾದ ಜನ್ಮ-ಮರಣ ಮತ್ತು ಸುಖ ದುಃಖಾದಿಗಳನ್ನು ಭೋಗಿಸುವ ಭೋಕ್ತನಾಗಿರುವೆನು. (೩) ಅನೇಕ ವಿಧ ವಾದ ಸಂಸಾರವು ನನ್ನಲ್ಲಿ ಪ್ರತೀತಿಯಾಗುತ್ತದೆ. (೪) ಈ ಪ್ರತೀತಿಯಾಗುವ ಸಂಸಾರಕ್ಕೆ ಕಾರಣವಾದುದು ಅಜ್ಞಾನ. ಈ ಅಜ್ಞಾನವನ್ನು ನಿವಾರಣೆ ಮಾಡಿಕೊಳ್ಳುವುದಕ್ಕೋಸ್ಕರ ಜ್ಞಾನವನ್ನು ಬಯಸುವವನಾಗಿದ್ದೇನೆ. ಇಷ್ಟು ನನ್ನಲ್ಲಿ ದೋಷಗಳಿವೆ. ಇನ್ನು ಬ್ರಹ್ಮದಲ್ಲಾದರೋ ಯಾವ ದೋಷಗಳೂ ಇಲ್ಲ. ಏಕೆಂದರೆ (೧) ಬ್ರಹ್ಮದಲ್ಲಿ ಪುಣ್ಯವೂ ಇಲ್ಲ ಪಾಪವೂ ಇಲ್ಲ. (೨)

ಆ ಪುಣ್ಯ ಪಾಪಗಳ ಫಲವಾದ ಜನ್ಮ–ಮರಣ ಸುಖದುಃಖಾದಿಗಳೂ ಇಲ್ಲ. (೩) ಬ್ರಹ್ಮದಲ್ಲಿ ಯಾವ ಕ್ಲೇಶವೂ ಇಲ್ಲ. (೪) ಈ ಕ್ಲೇಶ ನಿವೃತ್ತಿಗಾಗಿ ಜ್ಞಾನದ ಇಚ್ಛೆಯೂ ಇಲ್ಲ.

ಈ ರೀತಿ ಬ್ರಹ್ಮದ ಸ್ವರೂಪಕ್ಕೂ ನನ್ನ ಸ್ವರೂಪಕ್ಕೂ ಇಷ್ಟು ವಿರುದ್ಧ ವಾದ ಲಕ್ಷಣಗಳಿರುವಾಗ ಜೀವಬ್ರಹ್ಮ ಏಕತೆಯು ಅರ್ಥಾತ್ "ನಾನು ಪರಬ್ರಹ್ಮನು'' ಎಂಬ ನಿಶ್ಚಯವಾದರೂ ಹೇಗಾಗುತ್ತದೆ ?

(೧) ಈಶ್ವರನು ಸಮಷ್ಟಿ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳನ್ನು ತಿಳಿಯುತ್ತಾನೆ. ಎಲ್ಲೆಲ್ಲಿ ಏನಾಗುತ್ತದೆ ಎಂಬ ಸರ್ವ ವಿಷಯವೂ ಅವನಿಗೆ ಗೊತ್ತು. ಜೀವನಿಗೆ ಗೋಡೆಯ ಹಿಂದೆ ಏನಾಗುತ್ತದೆ ಎಂಬುದೇ ಗೊತ್ತಿಲ್ಲ ಮತ್ತು ತನ್ನ ದೇಹದ ವಿಷಯದಲ್ಲಿಯೇ ಸರಿಯಾದ ತಿಳುವಳಿಕೆಯಿಲ್ಲ. (೨) ಈಶ್ವರನು ಸರ್ವಶಕ್ತನು – ಎಲ್ಲವನ್ನೂ ಮಾಡಬಲ್ಲನು. ಒಂದೇ ಕ್ಷಣಕ್ಕೆ ಜಗತ್ತನ್ನು ನಾಶಮಾಡಿ ಇನ್ನೊಂದು ಕ್ಷಣಕ್ಕೆ ಪುನಃ ಸೃಷ್ಟಿಸಬಲ್ಲನು ಜೀವ ನಾದರೋ ಒಂದು ಹೂವನ್ನೂ ಸೃಷ್ಟಿ ಮಾಡಲಾರ. ತನ್ನ ದೇಹದ ಮೇಲೆಯೇ ಇವನಿಗೆ ಒಡೆತನವಿಲ್ಲ. (೩) ಈಶ್ವರನು ಸರ್ವವ್ಯಾಪಿ; ಅವನು ಇಲ್ಲದ ಸ್ಥಳವೇ ಇಲ್ಲ. ಸರ್ವಭೂತಗಳ ಒಳಗೂ ಹೊರಗೂ ಆವರಿಸಿದ್ದಾನೆ. ಜೀವನಾದರೋ ತನ್ನ ದೇಹದಲ್ಲಿ ಮಾತ್ರವಿದ್ದಾನೆ ಇವನು ಪರಿಚ್ಛಿನ್ನ. (೪) ಈಶ್ವರನಾದರೋ ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ ಮತ್ತು ಅಭಿ ನಿವೇಶವೆಂಬ ಪಂಚಕ್ಲೇಶ ರಹಿತನು ಜೀವನಿಗೆ ತಾನಾರೆಂಬ ತಿಳುವಳಿಕೆ ಯಿಲ್ಲದ ಅವಿದ್ಯೆಯೂ, ತಾನಲ್ಲದ ಬುದ್ಧ್ಯಾದಿಗಳಲ್ಲಿ ತಾನೆಂಬ ಅಸ್ಮಿತೆಯೂ, ಅನುಕೂಲ ಪ್ರತಿಕೂಲ ಪದಾರ್ಥದ ಸಂಬಂಧ ಉಂಟಾದಾಗ ರಾಗದ್ವೇಷಾದಿ ವೃತ್ತಿಗಳೂ, ಮತ್ತು ಮರಣದ ಭಯವೆಂಬ ಅಭಿನಿವೇಶವೂ ಇರುವುದರಿಂದ ಜೀವನು ಪಂಚಕ್ಲೇಶ ಸಹಿತನು ಇಷ್ಟೊಂದು ಪರಸ್ಪರ ವಿರುದ್ಧವಾದ ಲಕ್ಷಣ ಗಳು ಪ್ರತ್ಯಕ್ಷವಾಗಿ ಕಾಣುವಾಗ "ನಾನೇ ಪರಬ್ರಹ್ಮವು'', "ಅಹಂ ಬ್ರಹ್ಮಾಸ್ಮಿ'' ಎಂಬ ಮಾತು ನಿಜವಾಗಿ ಸಿದ್ಧಿಸಲಾರದು.

ಇದು ಪ್ರಮೇಯಗತ ಸಂಶಯದ ಸ್ವರೂಪ.

ಪ್ರಶ್ನೆ – ಪ್ರಮೇಯಗತ ಸಂಶಯವೆಂದರೇನು ?

ಉತ್ತರ – ಜೀವಬ್ರಹ್ಮರ ಭೇದವು ಸತ್ಯವೋ, ಅಭೇದವು ಸತ್ಯವೋ ಎಂಬುದು ಪ್ರಮೇಯಗತ ಸಂಶಯ ಅರ್ಥಾತ್ ಮೋಕ್ಷ ಸಂಬಂಧವಾದ ಸಂಶಯ.

ಈ ಸಂಶಯಗಳು ಇರುವವರೆಗೆ ಅಪರೋಕ್ಷ ಜ್ಞಾನವಾಗುವುದಿಲ್ಲ. ಈ ವಿಷಯವಾಗಿ ವಿಚಾರ ಸಾಗರದ ಪ್ರಥಮ ಭಾಗದಲ್ಲಿ ವಿವರವಾಗಿ ಬರೆಯಲ್ಪಟ್ಟಿದೆ.

## ಪ್ರಮಾಣಗತ ಸಂಶಯದ ಸ್ವರೂಪ

## ತತ್ತ್ವದೃಷ್ಟಿರುವಾಚ

ದೋಹಾ – ಸುನಹು ಗುರು ದೂಜೋ ಪುನಿ ಸಂಸೈ,
ಜೀವ-ಬ್ರಹ್ಮ-ಏಕತ್ವ ಪ್ರಸಂಸೈ ।
ಏಕ ವೃಕ್ಷ ಮೈ ಸಮದ್ವೈ ಪಚ್ಛೀ,
ಫಲ ಭೋಗೈ ಇಕ ದೂಜೋ ಸ್ವಚ್ಛೀ ॥ ೭೦ ॥

ಭೋಗರಹಿತ ಪರಕಾಸ ಅಸಂಗಾ,
ವೇದ ವಚನ ಯಹ ಕಹತ ಪ್ರಸಂಗಾ ।
ಕರ್ಮ ಉಪಾಸನ ಪುನಿ ಬಹು ಭಾಖೈ,
ಜೀವ-ಬ್ರಹ್ಮ-ಯಾತೈ ದ್ವಯರಾಖೈಂ ॥ ೭೧ ॥

ತಾತ್ಪರ್ಯ – ಗುರುದೇವ ! ನನಗೆ ಇನ್ನೊಂದು ಸಂಶಯವಿರುವುದು. ಅದನ್ನೂ ತಾವು ಹೇಳಬೇಕು. ಇದರಿಂದಲೂ ಸಹ ಜೀವ-ಬ್ರಹ್ಮರ ಏಕತೆಯು ಸಿದ್ಧಿಸುವುದಿಲ್ಲ. "ಒಂದು ವೃಕ್ಷದ ಮೇಲೆ ಎರಡು ಪಕ್ಷಿಗಳಿವೆ. ಒಂದು ಫಲವನ್ನು ಭೋಗಿಸುತ್ತದೆ; ಇನ್ನೊಂದು ನಿರ್ಮಲವಾಗಿದೆ. ಅದು ಭೋಗ ರಹಿತವಾದುದು ; ಪ್ರಕಾಶ ರೂಪವಾದುದು ಮತ್ತು ಅಸಂಗವಾದುದು ಎಂದು ವೇದದಲ್ಲಿ ಹೇಳಿದೆ. ಕರ್ಮ ಉಪಾಸನೆಗಳನ್ನೂ ಸಹ ವೇದದಲ್ಲಿ ಬಹುವಾಗಿ ಹೇಳಿದೆ. ಇವುಗಳಿಂದಲೂ ಸಹ ಜೀವ-ಬ್ರಹ್ಮರ ಭೇದವೇ ಸಿದ್ಧವಾಗುತ್ತದೆ.

ಅಥರ್ವಣ ವೇದಕ್ಕೆ ಸಂಬಂಧಪಟ್ಟ ಪ್ರಸಿದ್ಧವಾದ ಮುಂಡಕೋಪನಿಷತ್ತಿನ ಮೂರನೇ ಮುಂಡಕದ ಮೊದಲನೆ ಖಂಡದ ಮೊದಲನೆಯ ಮಂತ್ರದಲ್ಲಿ ಈ ರೀತಿ ಹೇಳಲ್ಪಟ್ಟಿದೆ :—

ದ್ವಾಸುಪರ್ಣಾ ಸಯುಜಾ ಸಖಾಯಾ
ಸಮಾನಂ ವೃಕ್ಷಂ ಪರಿಷ್ವ ಸ್ವಜಾತೇ ।
ತಯೋ ರನ್ಯಃ ಪಿಪ್ಪಲಂ ಸ್ವಾದ್ವತ್ತ್ಯ
ನ್ನಶ್ನನ್ನನ್ಯೋ ಅಭಿಚಾಕಶೀತಿ ॥ ಮುಂ ॥

ಮತ್ತು ಕೃಷ್ಣ ಯಜುರ್ವೇದಕ್ಕೆ ಸಂಬಂಧಿಸಿದ ಕಾಠಕೋಪನಿಷತ್ತಿನಲ್ಲಿಯೂ ಹೀಗೆ ಹೇಳಿದೆ :-

ಋತಂ ಪಿಬಂತೌ ಸುಕೃತಸ್ಯ ಲೋಕೇ
ಗುಹಾಂ ಪ್ರವಿಷ್ಟೌಪರಮೇಪರಾರ್ಧೆ ।
ಛಾಯಾತಪೌ ಬ್ರಹ್ಮವಿದೋ ವದಂತಿ
ಪಂಚಾಗ್ನಯೋ ಯೇಚ ತ್ರಿಣಾಚಿಕೇತಾ ॥

ತಾತ್ಪರ್ಯವೇನೆಂದರೆ:– ಬುದ್ಧಿರೂಪ ವೃಕ್ಷದಲ್ಲಿ ಎರಡು ಪಕ್ಷಿಗಳಿವೆ. ಅವೆರಡೂ ಸಮಾನವಾಗಿರುವುವು. ಅವುಗಳಲ್ಲಿ ಒಂದು ಕರ್ಮಫಲಗಳ ಭೋಕ್ತೃ, ಮತ್ತೊಂದು ಸ್ವಚ್ಛ (ಶುದ್ಧ) ಭೋಗರಹಿತವಾದುದು ; ಅಸಂಗ ಮತ್ತು ಭೋಕ್ತೃನನ್ನು ಪ್ರಕಾಶ ಮಾಡುತ್ತದೆ. ಇವುಗಳಲ್ಲಿ ಕರ್ಮಫಲಗಳ ಭೋಕ್ತೃವೇ ಜೀವನು ಮತ್ತು ಎರಡನೆಯದೇ ಪರಮಾತ್ಮನು ಜೀವನು ಕರ್ಮಗಳನ್ನು ಮಾಡುತ್ತಾನೆ; ತತ್ಫಲವಾದ ಸುಖದುಃಖ ಜನ್ಮ-ಮರಣಾದಿಗಳನ್ನು ಅನುಭವಿಸುತ್ತಾನೆ. ಪರಮಾತ್ಮನಾದರೋ ಅಕರ್ತ ; ಆದ್ದರಿಂದ ಅಭೋಕ್ತೃ. ಇದರಿಂದ ಜೀವಬ್ರಹ್ಮರ ಏಕತೆಯು ಹೇಗೆ ಸಿದ್ಧಿಸುತ್ತದೆ ?

ಮತ್ತೊಂದು – ವೇದದಲ್ಲಿ ೮೦ ಭಾಗ ಕರ್ಮವನ್ನೂ, ೧೬ ಭಾಗ ಉಪಾಸನೆಯನ್ನೂ ಮತ್ತು ಕೇವಲ ೪ ಭಾಗ ಜ್ಞಾನವನ್ನೂ ಹೇಳಿದೆ ಇದರಿಂದ ವೇದದಲ್ಲಿ ಕರ್ಮ ಉಪಾಸನೆಗಳೇ ಬಹುವಾಗಿ ಮತ್ತು ಬಹು ಪ್ರಕಾರವಾಗಿ

ಹೇಳಲ್ಪಟ್ಟಿರುವುವು. ಆದರೆ ಜೀವ-ಬ್ರಹ್ಮರ ಏಕತೆಯು ಸಿದ್ಧಿಸುವುದಾದರೆ ಅರ್ಥಾತ್ ಜೀವನೇ ಪರಬ್ರಹ್ಮನಾದರೆ, ವೇದದಲ್ಲಿ ಜೀವನಿಗಾಗಿಯೇ ಹೇಳಲ್ಪಟ್ಟ ಬಹು ಪ್ರಕಾರದ ಕರ್ಮೋಪಾಸನೆಗಳು ವ್ಯರ್ಥವಾದುವಲ್ಲಾ? ಆ ರೀತಿ ವ್ಯರ್ಥವಾಗುವ ಕರ್ಮೋಪಾಸನೆಗಳ ಅವಶ್ಯಕತೆಯನ್ನು ವೇದದಲ್ಲಿ ಏಕೆ ಪ್ರತಿಪಾದಿಸಬೇಕಾಗಿತ್ತು? ಏಕೆಂದರೆ ತಾವು ಒಂದು ವೇಳೆ ಜೀವಬ್ರಹ್ಮರ ಏಕತ್ವವನ್ನು ಒಪ್ಪಿಕೊಳ್ಳುವುದಾದರೆ (೧) ಬ್ರಹ್ಮದಲ್ಲಿ ಜೀವಸ್ವರೂಪವು ಅಂತರ್ಭಾವವಾಗಿದೆ ಎಂದು ಹೇಳುತ್ತೀರೋ? (೨) ಅಥವಾ ಜೀವನಲ್ಲಿ ಬ್ರಹ್ಮಸ್ವರೂಪವು ಅಂತರ್ಭಾವವಾಗಿದೆ ಎಂದು ಹೇಳುತ್ತೀರೋ?

೧. ಒಂದು ವೇಳೆ ಬ್ರಹ್ಮದಲ್ಲಿ ಜೀವಸ್ವರೂಪವು ಅಂತರ್ಭಾವವಾಗಿದೆ ಎಂದು ಹೇಳಿದರೆ – ಜೀವನಿಗೆ ಬ್ರಹ್ಮಸ್ವರೂಪ ಉಂಟಾಗುವುದರಿಂದ ಅರ್ಥಾತ್ ಜೀವನೇ ಬ್ರಹ್ಮವಾದುದರಿಂದ ಅಧಿಕಾರಿಗಳ ಅಭಾವವಾಗುತ್ತದೆ. ಅಧಿಕಾರಿಯೇ ಇಲ್ಲದ ಮೇಲೆ ವೇದದಲ್ಲಿ ಅಧಿಕಾರಿಗಳಿಗಾಗಿಯೇ ಹೇಳಲ್ಪಟ್ಟ ಬಹು ಪ್ರಕಾರವಾದ ಕರ್ಮೋಪಾಸನೆಗಳು ನಿಷ್ಫಲವಾಗಲಿಲ್ಲವೇ (ವ್ಯರ್ಥವಾಗಲಿಲ್ಲವೇ)?

೨. ಒಂದು ವೇಳೆ ಜೀವನಲ್ಲಿ ಬ್ರಹ್ಮಸ್ವರೂಪದ ಅಂತರ್ಭಾವವಾಗಿದೆ ಎಂದು ಹೇಳಿದರೆ – ಬ್ರಹ್ಮಕ್ಕೆ ಜೀವಭಾವವು ಉಂಟಾಗುವುದರಿಂದ ಯಾವುದರ ಉಪಾಸನೆಯನ್ನು ಮಾಡಬೇಕಾಗಿತ್ತೋ ಆ ಉಪಾಸ್ಯದ ಅಭಾವ ಕಂಡು ಬರುತ್ತದೆ. ಉಪಾಸ್ಯ ದೇವತೆಯೇ ಇಲ್ಲದ ಮೇಲೆ ಉಪಾಸಕನೂ ಉಪಾಸ್ಯವೂ ನಿಷ್ಫಲವಾಗುವುದಿಲ್ಲವೇ?

ಮತ್ತು ಕರ್ಮಕ್ಕೆ ಫಲ ಕೊಡತಕ್ಕಂಥ ಪರಮಾತ್ಮನ ಅಭಾವವಾಗುವುದರಿಂದ ಕರ್ಮವೂ ಕರ್ಮಿಯೂ ವ್ಯರ್ಥವಾಗಲಿಲ್ಲವೇ?

ಪ್ರಶ್ನೆ – ಕರ್ಮವೇ ಈಶ್ವರ, ಅದರಿಂದಲೇ ಫಲವಾಗುವುದು, ಪ್ರತ್ಯೇಕ ಈಶ್ವರನ ಅವಶ್ಯವಿಲ್ಲ ಎಂದು ಮೀಮಾಂಸಕರ ಮತವಿರುವುದಲ್ಲಾ?

ಉತ್ತರ – ಇದು ಸರಿಯಾದುದಲ್ಲ. ಏಕೆಂದರೆ, ಕರ್ಮವೇ ಫಲ ಕೊಡಲಾರದು. ಕರ್ಮವು ಜಡ. ಜಡಕ್ಕೆ ಫಲ ಕೊಡುವ ಸಾಮರ್ಥ್ಯವಿರುವುದಿಲ್ಲ. ಕೂಲಿ ಮಾಡುವ ಒಬ್ಬಾನೊಬ್ಬ ಪುರುಷನಿಗೆ ಅವನ ಕೆಲಸವೇ ಫಲ ಕೊಡು

ವುದಿಲ್ಲ ಫಲ ಕೊಡುವವನು ಬೇರೆಯಾಗಿ ಅಂದರೆ ಕರ್ಮಕ್ಕಿಂತ ಬೇರೆಯಾಗಿರಬೇಕು ಆದ್ದರಿಂದ ಕರ್ಮಕ್ಕೆ ತಕ್ಕ ಫಲ ಕೊಡುವ ಈಶ್ವರನೊಬ್ಬ ಇರಲೇಬೇಕಲ್ಲವೆ ! ಫಲಕೊಡುವ ಈಶ್ವರನ ಸಿದ್ಧಿಯಾದ ಮೇಲೆ ಫಲ ಭೋಗಿಸುವ ಜೀವನೂ ಇರುವನೆಂದು ಸಿದ್ಧವಾಗುತ್ತದೆ. ಆದ್ದರಿಂದ ಬ್ರಹ್ಮದಲ್ಲಿ ಜೀವನ ಸ್ವರೂಪವನ್ನೂ, ಜೀವನಲ್ಲಿ ಬ್ರಹ್ಮದ ಸ್ವರೂಪವನ್ನೂ ಅಂತರ್ಭಾವ ಮಾಡಿದರೂ ದೋಷವೆ. ಈ ರೀತಿ ಯಾವ ವಿಧದಿಂದಲೂ ಜೀವಬ್ರಹ್ಮರ ಏಕತೆಯು ಸಿದ್ಧಿಸುವುದಿಲ್ಲ.

ಇದು ಪ್ರಮಾಣಗತ ಸಂಶಯದ ಸ್ವರೂಪ. ಇನ್ನು ಶ್ರೀ ಗುರುಗಳು ಅಧಿಕಾರಿಯಾದ ಸಂಶಯಗ್ರಸ್ತನಾದ ತತ್ತ್ವದೃಷ್ಟಿಗೆ ಜೀವಬ್ರಹ್ಮರ ಏಕತೆಯನ್ನು ದೃಷ್ಟಾಂತದ ಮೂಲಕ ಸಿದ್ಧಮಾಡಿಕೊಡುತ್ತಾರೆ.

## ಆಕಾಶ ದೃಷ್ಟಾಂತ

### ಶ್ರೀ ಗುರುವಾಚ

ದೋಹಾ – ಸುನಹು ಸಿಸ್ಯ ಇಕ ಕಹೂ ವಿಚಾರಾ,
ಹ್ವೈ ಜಾತೈ ಸಂಕಾ ನಿಸ್ತಾರಾ ।
ಘಟಾಕಾಸ ಇಕ ಜಲ–ಆಕಾಸಾ,
ಮೇಘಾಕಾಸ ಮಹಾ–ಆಕಾಸಾ ॥೭೨॥

ಚಾರಿ ಭೇದ ಯೆ ನಭಕೆ ಜಾನಹು,
ಪುನಿ ಚೇತನಕೆ ತಥಾ ಪಿಛಾನಹು ।
ಇಕ ಕೂಟಸ್ಥ ಜೀವ ಪುನಿ ಕಹಿಯೇ,
ಇಸ ಬ್ರಹ್ಮ ಹಿಯ ಜಾನ್ಯೈ ರಹಿಯೆ ॥೭೩॥

ಜಬ ಇನಕೋ ತೂರೂಪ ಪಛಾನ್ಯೈ,
ನಿಜ ಸಂಕಾ ತಬ ಹೀ ಸಬ ಭಾನ್ಯೈ ।
ಯಾತೈ ಸುವ ಇನಕೋ ಅಬ ಭೇದಾ,
ನಸ್ಯೈ ಸುನತ ಜನ್ಮಾದಿಕ ಖೇದಾ ॥೭೪॥

ಹೇ ಶಿಷ್ಯನೆ ! ನಿನಗೆ ಯಾವ ಶಂಕೆ ಬಂದಿದೆಯೋ, ಅದು ಯಾವುದರಿಂದ ನಿವಾರಣೆಯಾಗುತ್ತದೆಯೋ ಆ ವಿಚಾರವನ್ನು ಹೇಳುತ್ತೇನೆ, ಕೇಳು ಒಂದೇ ಒಂದಾದ ಆಕಾಶದಲ್ಲಿ ನಾಲ್ಕು ಭೇದಗಳಿರುವವು ಅವು - ೧. ಘಟಾಕಾಶ, ೨ ಜಲಾಕಾಶ, ೩ ಮೇಘಾಕಾಶ, ೪. ಮಹಾಕಾಶಗಳು ಅದರಂತೆಯೇ ಒಂದೇ ಒಂದಾದ ಚೇತನದಲ್ಲಿ ನಾಲ್ಕು ಭೇದಗಳಿರುವುವು ಅವು ಯಾವುವೆಂದರೆ: ೧. ಕೂಟಸ್ಥ ಚೇತನ, ೨. ಜೀವಚೇತನ, ೩ ಈಶ್ವರಚೇತನ, ೪ ಬ್ರಹ್ಮಚೇತನ. ಇವುಗಳ ಸ್ವರೂಪವನ್ನು ನೀನು ಯಥಾರ್ಥವಾಗಿ ತಿಳಿದುಕೊಂಡರೆ ನಿನಗುಂಟಾದ ಶಂಕೆಯು ನಿವಾರಣೆಯಾಗುವುದು. ಆದುದರಿಂದ ನಾನು ಇವುಗಳ ಸ್ವರೂಪ ವರ್ಣನೆಯನ್ನು ಮಾಡುತ್ತೇನೆ. ನೀನು ಅವುಗಳನ್ನು ತಿಳಿದುಕೊಂಡು ಸಂಶಯರಹಿತನಾಗಿ ಜನ್ಮಾದಿಕ ಸಂಸಾರದಿಂದ ಮುಕ್ತನಾಗುತ್ತೀಯೆ

## ಘಟಾಕಾಶ ಸ್ವರೂಪ ವರ್ಣನೆ

ದೋಹಾ – ಜಲಪೂರಿತ ಘಟಕೂ ಜುದೆ, ಜಿತನೋ ನಭ ಅವಕಾಶ ।
ಯುಕ್ತಿ-ನಿಪುನ ಪಂಡಿತ ಕಹ್ಯೈ, ತಾಕೂ ಘಟ-ಆಕಾಸ ॥೭೫॥

ಜಲದಿಂದ ಪೂರಿತವಾದ ಘಟವು ಆಕಾಶದಲ್ಲಿಡಲು ಎಷ್ಟು ಅವಕಾಶವಿದೆಯೋ ಅಷ್ಟು ಅವಕಾಶವನ್ನು ಘಟಾಕಾಶವೆಂದು ಪಂಡಿತರು ಕರೆಯುತ್ತಾರೆ.

ಪ್ರಶ್ನೆ – ಘಟದ ಹೊರಗಿರುವ ಆಕಾಶಕ್ಕೆ ಮಹಾಕಾಶವೆನ್ನುವರು ಘಟದ ಒಳಗಿರುವ ಆಕಾಶಕ್ಕೆ ಘಟಾಕಾಶವೆಂದೇಕೆ ಕರೆಯಬಾರದು ?

ಉತ್ತರ – ಇದರಲ್ಲಿ ದೋಷವಿದೆ. ಘಟದ ಹೊರಗಿರುವುದು ಮಹಾಕಾಶ, ಘಟದ ಒಳಗಿರುವುದು ಘಟಾಕಾಶವಾದರೆ ಘಟವು ಇರಲು ಅವಕಾಶವಾಗಿರುವ ಆಕಾಶಕ್ಕೆ ಏನೆಂದು ಕರೆಯಬೇಕು ? ಕಪಾಲಾಕಾಶವೆನ್ನುವುದಾದರೆ ಅದು ಶಾಸ್ತ್ರ ಸಮ್ಮತವಲ್ಲ ಮತ್ತು ಈ ಕಪಾಲಾಕಾಶವು ಐದನೆಯದಾದುದರಿಂದ ಇದನ್ನು ಶಾಸ್ತ್ರವು ಪರಿಗ್ರಹಿಸಿಲ್ಲ.

## ಜಲಾಕಾಶ ಸ್ವರೂಪ ವರ್ಣನೆ

ದೋಹಾ – ಜಲ-ಪೂರಿತ ಘಟಮೈ ಜು ಪುನಿ, ಹೈ ನಭ ಕೋ ಆಭಾಸ ।
ಘಟಾಕಾಸ-ಯುತ ವಿಜ್ಞ ಜನ, ಭಾಖತ ಜಲ-ಆಕಾಶ ॥೭೬॥

ಜಲಪೂರಿತವಾದ ಘಟದಲ್ಲಿ ನಕ್ಷತ್ರಾದಿಸಹಿತ ಆಕಾಶದ ಪ್ರತಿಬಿಂಬವು ಬೀಳುತ್ತದೆ ಈ ಆಕಾಶದ ಪ್ರತಿಬಿಂಬವೂ ಮತ್ತು ಘಟಾಕಾಶವೂ ಎರಡೂ ಸೇರಿ ಜಲಾಕಾಶವೆಂದು ಕರೆಸಿಕೊಳ್ಳುತ್ತದೆ.

ಪ್ರಶ್ನೆ – ಜಲದಿಂದ ಪೂರಿತವಾದ ಘಟವನ್ನೇ ಏಕೆ ತೆಗೆದುಕೊಳ್ಳ ಬೇಕು ? ಬರೀ ಘಟವನ್ನೇಕೆ ಗ್ರಹಿಸಬಾರದು ?

ಉತ್ತರ – ಜಲದ ವಿನಃ ಪ್ರತಿಬಿಂಬ ಉಂಟಾಗುವುದಿಲ್ಲ. ಈ ಕಾರಣದಿಂದ ಜಲಪೂರಿತ ಘಟದಲ್ಲಿ ಬಿದ್ದ ಆಕಾಶದ ಪ್ರತಿಬಿಂಬವನ್ನೇ ಜಲಾ ಕಾಶವೆಂದು ಗ್ರಹಿಸಿದ್ದಾರೆ.

ಈ ಜಲಾಕಾಶಕ್ಕೆ ಸಂಬಂಧಪಟ್ಟ ಎರಡು ಪಕ್ಷಗಳಿವೆ. ೧. ಘಟಾ ಕಾಶ + ಘಟದಲ್ಲಿಯ ಜಲ + ಘಟದ ಜಲದಲ್ಲಿ ಬಿದ್ದ ಘಟಾಕಾಶದ ಪ್ರತಿ ಬಿಂಬವೇ ಜಲಾಕಾಶವೆಂದು ಹೇಳುತ್ತಾರೆ. ಇದು ಒಂದು ಪಕ್ಷ.

೨. ಮಹಾಕಾಶ + ಘಟದಲ್ಲಿಯ ಜಲ + ಘಟದೊಳಗಿರುವ ಜಲದಲ್ಲಿ ಬಿದ್ದ ಮಹಾಕಾಶದ ಪ್ರತಿಬಿಂಬ – ಈ ಮೂರೂ ಸೇರಿ ಜಲಾಕಾಶವೆನ್ನುವುದು ಇನ್ನೊಂದು ಪಕ್ಷ. ಹೇಗಾದರೂ ಗ್ರಹಿಸಬಹುದು.

ಶಂಕೆ – ಆಕಾಶದ ಪ್ರತಿಬಿಂಬವಾಗುವುದಿಲ್ಲ ಕೇವಲ ನಕ್ಷತ್ರಾದಿಗಳ ಪ್ರತಿಬಿಂಬವಾಗುವುದು ಏಕೆಂದರೆ ಆಕಾಶ ರೂಪರಹಿತವಾದುದು. ಈ ಕಾರಣದಿಂದ ಆಕಾಶಕ್ಕೆ ಪ್ರತಿಬಿಂಬವಿಲ್ಲ ರೂಪವುಳ್ಳ ಪದಾರ್ಥಕ್ಕೆ ಮಾತ್ರ ಪ್ರತಿಬಿಂಬ ಉಂಟಾಗುತ್ತದೆ. ಆದ್ದರಿಂದ ಆಕಾಶದ ಪ್ರತಿಬಿಂಬ ಸಿದ್ಧಿ ಸುವುದಿಲ್ಲ.

ಸಮಾಧಾನ —

ದೋಹಾ – ಜೋ ಜಲಮೈ ಆಕಾಶಕೊ, ನಹಿ ಪ್ರತಿಬಿಂಬ ಲಖಾಇ ।
ಥೋರೈ ಮೈ ಗಂಭೀರ ತಾ, ಹ್ವೈ ಪ್ರತೀತ ಕಿಂಹಿ ಭಾಇ ॥೭೭॥

ದೋಹಾ – ಯಾತ್ಯೆ ಜಲವ್ಮೈ ವ್ಯೋಮ ಕೋ, ಲಖಿ ಆಭಾಸ ಸುಜಾನ ।
ರೂಪರಹಿತ ಜಿಮಿ ಶಬ್ಧ ತ್ಯೈ, ಹ್ವೈ ಪ್ರತಿ ಧುನಿಕೊ ಭಾನ ॥೭೮॥

ಜಲದಲ್ಲಿ ಆಕಾಶದ ಪ್ರತಿಬಿಂಬವು ಉಂಟಾಗದಿದ್ದರೆ ಅಲ್ಪ ಜಲದಲ್ಲಿ ಮನುಷ್ಯ ಪರಿಮಾಣದ ಗಂಭೀರತೆಯ ಪ್ರತೀತಿಯು ಉಂಟಾಗಬಾರದಿತ್ತು. ಈ ಕಾರಣದಿಂದ ಆಕಾಶದ ಪ್ರತಿಬಿಂಬವು ಉಂಟಾಗುತ್ತದೆ ಎಂದೇ ತಿಳಿಯ ಬೇಕು.

ಪ್ರಶ್ನೆ – ಆಕಾಶವು ರೂಪರಹಿತವಲ್ಲವೆ ! ರೂಪರಹಿತವಾದ ಆಕಾಶಕ್ಕೆ ಪ್ರತಿಬಿಂಬ ಉಂಟಾಗುವುದಿಲ್ಲವಲ್ಲಾ ?

ಉತ್ತರ – ಇದು ಸರಿಯಾದುದಲ್ಲ. ಏಕೆಂದರೆ ಶಬ್ದಕ್ಕೆ ಯಾವ ರೂಪ ವಿದೆ ? ಯಾವ ರೂಪವೂ ಇಲ್ಲ. ಯಾವ ರೂಪವೂ ಇಲ್ಲದ ಶಬ್ದವು ಪ್ರತಿ ಬಿಂಬಿಸುತ್ತದೆಯಲ್ಲಾ ! ಶಬ್ದ ಗುಣಕ್ಕೆ ಆಶ್ರಯವಾದ ಆಕಾಶವು ರೂಪರಹಿತ ವಾದರೂ ಜಲದಲ್ಲಿ ಪ್ರತಿಬಿಂಬಿಸುತ್ತದೆ.

ನ್ಯಾಯವೈಶೇಷಿಕ ಸಿದ್ಧಾಂತದಲ್ಲಿ ಹೀಗೆ ಹೇಳಿದೆ . ಗುಣವು ಗುಣದ ಆಶ್ರಿತವಾಗಿರುವುದಿಲ್ಲ ಅದು ಯಾವಾಗಲೂ ಆಕಾಶಾದಿ ದ್ರವ್ಯಗಳ ಆಶ್ರಯ ದಲ್ಲೇ ಇರುವುದು ಗುಣದ ಆಶ್ರಯದಲ್ಲಿರುವುದಿಲ್ಲ. ಈ ಪ್ರಕಾರವಾಗಿ ರೂಪವೆಂಬ ಗುಣವು ದ್ರವ್ಯದ ಆಶ್ರಯದಲ್ಲಿಯೇ ಬಾಳುವುದು ಗುಣದ ಆಶ್ರಯದಲ್ಲಿರುವುದಿಲ್ಲ ಶಬ್ದವೂ ಒಂದು ಗುಣ ಅದರಲ್ಲಿ ರೂಪವಿಲ್ಲ. ಆದರೂ ಶಬ್ದದ ಪ್ರತಿಬಿಂಬ ಆಕಾಶದಲ್ಲಿ ಪ್ರತಿಧ್ವನಿ ರೂಪದಲ್ಲಿ ಪ್ರತಿಬಿಂಬಿಸು ತ್ತದೆ. ಇದರಿಂದ ರೂಪರಹಿತ ಪದಾರ್ಥಕ್ಕೆ ಪ್ರತಿಬಿಂಬವಿಲ್ಲವೆಂಬ ನಿಯಮವು ಸಮಂಜಸವಲ್ಲ.

ರೂಪರಹಿತವಾದ ನೀಲಪೀತಾದಿ ವರ್ಣಮಿಶ್ರಿತವಾದ ರೂಪಗಳ ಪ್ರತಿ ಬಿಂಬ ಕಾಣುವುದರಿಂದಲೂ ರೂಪರಹಿತ ಪದಾರ್ಥಗಳ ಪ್ರತಿಬಿಂಬ ಪ್ರತಿಫಲಿಸು ವುದಿಲ್ಲವೆಂಬ ನಿಯಮವನ್ನು ಭಂಗಮಾಡಿದಂತಾಗುತ್ತದೆ. ಪುನಃ ನೈಯ್ಯಾ ಯಿಕರು ಒಂದು ಹೊಸ ನಿಯಮವನ್ನು ಹೇಳಿದ್ದಾರೆ . ರೂಪರಹಿತ ದ್ರವ್ಯಗಳ ಪ್ರತಿಬಿಂಬ ಉಂಟಾಗುವುದಿಲ್ಲ. ರೂಪರಹಿತವಾದ ಶಬ್ದದ ಪ್ರತಿಬಿಂಬವನ್ನು ನೋಡಿಯೂ ಈ ನಿಯಮವೂ ಸಹ ಸುಳ್ಳಾಗುತ್ತದೆ. ಏಕೆಂದರೆ ಶಬ್ದವನ್ನು ಮೀಮಾಂಸಕರು ದ್ರವ್ಯವೆಂದು ಪರಿಗಣಿಸುತ್ತಾರೆ ಅಥವಾ ರೂಪರಹಿತವು

ರೂಪರಹಿತದಲ್ಲಿ ಪ್ರತಿಬಿಂಬಿಸುವುದಿಲ್ಲ. ಉದಾ – ಆಕಾಶದಲ್ಲಿ ರೂಪರಹಿತ ಶಬ್ದದ ಪ್ರತಿಬಿಂಬವಾದರೂ ಸಹ ಆ ನಿಯಮದ ಭಂಗವು ಉಂಟಾದಂತಾಗುತ್ತದೆ ವಸ್ತುತಃ ನ್ಯಾಯಶಾಸ್ತ್ರ ಪರಿಭಾಷೆಯು ವೇದಾಂತದಲ್ಲಿ ಕುಂಠಿತವಾಗುತ್ತದೆ ಏಕೆಂದರೆ ಅವರು ಆತ್ಮನನ್ನು ಸಗುಣ ಮತ್ತು ಕ್ರಿಯಾತ್ಮಕನಾದುದರಿಂದ ದ್ರವ್ಯವೆಂದು ಪರಿಗಣಿಸುತ್ತಾರೆ. ವೇದಾಂತದಲ್ಲಿಯಾದರೋ ಆತ್ಮನು ನಿರ್ಗುಣನು ಮತ್ತು ನಿಷ್ಕ್ರಿಯನು. ಮತ್ತು ನ್ಯಾಯಮತದಲ್ಲಿ ಬುದ್ಧಿಯನ್ನು ಗುಣವೆನ್ನುತ್ತಾರೆ. ವೇದಾಂತದಲ್ಲಿ ಸೂಕ್ಷ್ಮಭೂತಗಳ ಸತ್ವಗುಣದ ಕಾರ್ಯ ಈ ರೀತಿ "ಸತ್ವಂಲಘು ಪ್ರಕಾಶಕಮ್, ಸತ್ವಾತ್ಸಂಜಾಯತೇ ಜ್ಞಾನಂ" ಎಂಬ ನಿಯಮಕ್ಕನುಸಾರ ಬುದ್ಧಿಯು ಪ್ರಕಾಶವಾದ ಸ್ವಚ್ಛವಾದ ದ್ರವ್ಯವಾಗಿದೆ ಎಂಬುದು ವೇದಾಂತದ ತೀರ್ಮಾನ.

## ಮೇಘಾಕಾಶ ಸ್ವರೂಪ ವರ್ಣನೆ

ದೋಹಾ – ಜೋ ಮೇಘಹಿ ಅವಕಾಸ ದೈ, ಪುನಿ ತಾ ಮೈ ಆಭಾಸ ।
ತಿನ ದೋನೊ ಕೂ ಕಹತ ಹೈ, ಬುಧಜನ ಮೇಘಾಕಾಸ ॥೭೯॥

ಮೇಘವು ಆಕಾಶದ ಎಷ್ಟು ಭಾಗದಲ್ಲಿದೆಯೋ ಆ ಭಾಗದ ಆಕಾಶ ಮತ್ತು ಮೇಘದಲ್ಲಿ ಬೀಳುವ ಆಕಾಶದ ಪ್ರತಿಬಿಂಬ – ಈ ಎರಡೂ ಸೇರಿ ಮೇಘಾಕಾಶವೆನಿಸುತ್ತದೆ. ಅರ್ಥಾತ್ ಆಕಾಶ+ಮೇಘ+ಆ ಮೇಘದಲ್ಲಿ ಬಿದ್ದ ಆಕಾಶದ ಪ್ರತಿಬಿಂಬ – ಈ ಮೂರೂ ಸೇರಿ ಮೇಘಾಕಾಶವೆನಿಸುತ್ತದೆ.

ಶಂಕಾ – ಮೇಘವಾದರೋ ಆಕಾಶದಲ್ಲಿದೆ. ಅದರಲ್ಲಿ ಜಲ ಮತ್ತು ಆಕಾಶದ ಪ್ರತಿಬಿಂಬ ಇರುವುದೆಂಬುದನ್ನು ಪ್ರತ್ಯಕ್ಷವಾಗಿ ನೋಡದೆ ಹೇಗೆ ತಿಳಿದುಕೊಳ್ಳಬೇಕು ?

ಸಮಾಧಾನ —

ದೋಹಾ – ವರ್ಷತ ಮೇಘ ಅನಂತಜಲ, ಉದಕ ಸಹಿತ ಇಹಿ ಹೇತ ।
ದಕ ನಹಿ ನಭ ಆಭಾಸ ಬಿನ, ಇಮ ಪ್ರತಿಬಿಂಬ ಸಮೇತ ॥೮೦॥

ಮೇಘದಲ್ಲಿಯ ಜಲ ಮತ್ತು ಆಕಾಶದ ಪ್ರತಿಬಿಂಬ ಇವು ಪ್ರತ್ಯಕ್ಷವಾಗಿ ತೋರುವುದಿಲ್ಲ. ಆದರೆ ಅನುಮಾನದಿಂದ ತಿಳಿದುಬರುತ್ತದೆ. ಹೇಗೆಂದರೆ – ಮೇಘದಿಂದಲೇ ಜಲವೃಷ್ಟಿಯಾಗುವುದು ಮೇಘದಲ್ಲಿ ಜಲವು ಇಲ್ಲದಿದ್ದರೆ ಜಲವೃಷ್ಟಿಯು ಮೇಘದಿಂದ ಆಗುತ್ತಿರಲಿಲ್ಲ. ಮೇಘದಿಂದ ಜಲವೃಷ್ಟಿ ಯಾಗುವುದರಿಂದ ಮೇಘವೆಲ್ಲವೂ ಜಲದ ಘನರೂಪವೆಂದೇ ತಿಳಿಯಬೇಕು ಆದ್ದರಿಂದ ಮೇಘದಲ್ಲಿ ಜಲವಿದೆ ಎಂದು ಸಿದ್ಧವಾಯಿತು. ಇನ್ನು ಆ ಮೇಘವು ಆಕಾಶ ಪ್ರತಿಬಿಂಬ ಸಹಿತವಾಗಿಯೇ ಇರುತ್ತದೆ. ಕಾರಣವೇನೆಂದರೆ, ಎಲ್ಲಿ ಜಲವಿರುವುದೋ ಅಲ್ಲಿ ಆಕಾಶವು ಪ್ರತಿಬಿಂಬ ಸಹಿತವಾಗಿಯೇ ಇರುವುದು. ಏಕೆಂದರೆ ಜಲವು ಆಕಾಶದ ಪ್ರತಿಬಿಂಬದ ವಿನಃ ಇರಲಾರದು.

ಹೀಗೆ ಮೇಘದಲ್ಲಿ ಜಲವಿರುವುದೂ, ಆ ಜಲದಲ್ಲಿ ಆಕಾಶ ಪ್ರತಿಬಿಂಬಿಸು ವುದೂ ಅನುಮಾನ ಮತ್ತು ತರ್ಕದಿಂದ ಸಿದ್ಧವಾಯಿತು.

ಆದ್ದರಿಂದ ಆಕಾಶ – ಮೇಘ ಜಲ – ಮೇಘ ಜಲದಲ್ಲಿ ಬಿದ್ದ ಆಕಾಶದ ಪ್ರತಿಬಿಂಬವನ್ನು ಮೇಘಾಕಾಶವೆಂದು ಕರೆಯುತ್ತಾರೆ.

## ಮಹಾಕಾಶ ಸ್ವರೂಪ ವರ್ಣನೆ

ದೋಹಾ – ಬಾಹರ-ಭೀತರ ಏಕರಸ, ವ್ಯಾಪಕ ಜೋ ನಭರೂಪ ।
ಮಹಾಕಾಸ ತಾಕೂ ಕಹೈ, ಕೋವಿದ ಬುದ್ಧಿ ಅನೂಪ ॥ ೮೧ ॥

ಬ್ರಹ್ಮಾಂಡದ ಹೊರಗೆ ಒಳಗೆ ಎಲ್ಲಾ ಕಡೆಯಲ್ಲಿ ಏಕರೂಪದಿಂದ ವ್ಯಾಪಕವಾಗಿರುವ ಆಕಾಶವನ್ನು ಅನೂಪ ಬುದ್ಧಿವಂತರಾದ ಪಂಡಿತರು ಮಹಾಕಾಶವೆಂದು ಕರೆಯುತ್ತಾರೆ.

ದೋಹಾ – ಚತುರ್ಭಾಂತಿ ನಭ ಕೆ ಕಹೆ, ಲಚ್ಛನ ಶ್ರುತಿ ಅನುಸಾರ ।
ಅಬಚೇತನಕೆ ಶಿಷ್ಯ ಸುನ, ಜಾಸೂ ಲಹೈ ವಿಚಾರ ॥೮೨॥

ಹೇ ಶಿಷ್ಯ ! ವೇದಾನುಸಾರ ನಾಲ್ಕು ಪ್ರಕಾರದ ಆಕಾಶದ ಲಕ್ಷಣ ಗಳನ್ನು ಹೇಳಿದೆನು. ಈಗ ನಾಲ್ಕು ಪ್ರಕಾರದ ಚೇತನದ ಲಕ್ಷಣಗಳನ್ನು

ಕೇಳು ಇದನ್ನು ಕೇಳುವುದರಿಂದ ವಿಚಾರದ ಫಲವಾದ ಜ್ಞಾನವು ಪ್ರಾಪ್ತ ವಾಗುತ್ತದೆ

## ಕೂಟಸ್ಥ ಸ್ವರೂಪ ವರ್ಣನೆ

ದೋಹಾ – ಮತಿ ವಾ ವ್ಯಷ್ಟಿ ಅಜ್ಞಾನಕೊ, ಅಧಿಷ್ಠಾನ ಚೈತನ್ಯ ।
ಘಟಾಕಾಸ ಸಮ ಮಾನಿಯೇ, ಸೋ ಕೂಟಸ್ಥ ಅಜನ್ಯ ॥೮೩॥

ತಾತ್ಪರ್ಯ – ಬುದ್ಧಿ ಅಥವಾ ವ್ಯಷ್ಟಿ ಅಜ್ಞಾನಕ್ಕೆ ಯಾವುದು ಅಧಿಷ್ಠಾನ ಚೇತನವಿದೆಯೋ ಅದು ಘಟಾಕಾಶದಂತೆ ಅಜನ್ಯವಾದ ಕೂಟಸ್ಥವೆಂದು ತಿಳಿಯಬೇಕು

ಪ್ರಶ್ನೆ – ಕೂಟವೆಂದರೇನು ? ಕೂಟಸ್ಥನಾರು ?

ಉತ್ತರ – ಕೂಟದಲ್ಲಿರುವವನೇ ಕೂಟಸ್ಥ. ಗೃಹದಲ್ಲಿರುವವನು ಗೃಹಸ್ಥನಾದಂತೆ ಕೂಟದಲ್ಲಿರುವವನು ಕೂಟಸ್ಥನು. ಕೂಟವೆಂಬ ಪದಕ್ಕೆ ಎರಡು ಅರ್ಥಗಳಿವೆ : ನಿರ್ವಿಕಾರಿ – ಇದು ಒಂದನೆಯ ಅರ್ಥ. ಅಂದರೆ ವಿಕಾರವಾಗುವ ಎಲ್ಲಾ ಪದಾರ್ಥಗಳಿಗೂ ವಿಕಾರವಾಗಲು ಅವಕಾಶ ಕೊಟ್ಟು ತಾನು ಯಾವ ವಿಕಾರವನ್ನೂ ಹೊಂದದೆ ಇರುವುದು. ಉದಾ – ಅಡಿಗಲ್ಲು ; ಕಮ್ಮಾರನ ಅಡಿಗಲ್ಲು ತನ್ನ ಮೇಲೆ ವಿಕಾರವಾಗುವ ಕುಡುಗೋಲು, ಕುಡ ಇತ್ಯಾದಿ ಪದಾರ್ಥಗಳಿಗೆ ವಿಕಾರವಾಗಲು ಅವಕಾಶ ಕೊಟ್ಟು ತಾನು ಯಾವ ವಿಕಾರವನ್ನೂ ಹೊಂದದೆ ಇರುವುದು. ಅದರಂತೆ ಆತ್ಮನು ದೇಹಾದಿ ಇಂದ್ರಿಯಗಳಿಗೆ ಮತ್ತು ಅವುಗಳ ಎಲ್ಲಾ ಕ್ರಿಯೆಗಳು ನಡೆಯಲು ಅವಕಾಶ ಕೊಟ್ಟು ತಾನು ಯಾವ ವಿಕಾರವನ್ನೂ ಹೊಂದದೆ ಒಂದೇ ರೀತಿ ಇರುವವನಾದ್ದರಿಂದ ಆತ್ಮನು ಕೂಟಸ್ಥನು.

ಎರಡನೆಯ ಅರ್ಥ – ಕೂಟ ಎಂದರೆ ಸುಳ್ಳು; ಕೂಟದಲ್ಲಿರುವವನು ಅಂದರೆ ಆತ್ಮನು ಸುಳ್ಳಿನಲ್ಲಿರುವವನು. ಸುಳ್ಳು ಯಾವುದು ? ದೃಶ್ಯವಾದ ಸರ್ವ ಜಗತ್ತೂ, ಬುದ್ಧ್ಯಾದಿ ಇಂದ್ರಿಯಗಳೆಲ್ಲವೂ ಸುಳ್ಳೆ ಇಂತಹ ಸುಳ್ಳಾದ ಬುದ್ಧಿಯಲ್ಲಿ ಅಸಂಗನಾಗಿರುವ ಆತ್ಮನೇ ಕೂಟಸ್ಥನು

ಈ ಕೂಟಸ್ಥ ಸ್ವರೂಪ ವರ್ಣನೆಯಲ್ಲಿ ಎರಡು ಪಕ್ಷಗಳಿವೆ : ೧. ಯಾವ ಪಕ್ಷದಲ್ಲಿ ಬುದ್ಧಿಸಹಿತ ಚೇತನವನ್ನು ಜೀವನೆನ್ನುತ್ತಾರೆಯೋ ಆ ಪಕ್ಷದಲ್ಲಿ

ಬುದ್ಧಿಗೆ ಅಧಿಷ್ಠಾನವಾದ ಚೇತನವನ್ನೇ ಕೂಟಸ್ಥನೆನ್ನುತ್ತಾರೆ. ೨. ಯಾವ ಪಕ್ಷದಲ್ಲಿ ವ್ಯಷ್ಟಿ ಅಜ್ಞಾನ ಸಹಿತ ಚೇತನವನ್ನು ಜೀವನೆನ್ನುತ್ತಾರೆಯೋ ಆ ಪಕ್ಷದಲ್ಲಿ ವ್ಯಷ್ಟಿ ಅಜ್ಞಾನಕ್ಕೆ ಅಧಿಷ್ಠಾನವಾದ ಚೇತನವನ್ನೇ ಕೂಟಸ್ಥನೆನ್ನುತ್ತಾರೆ.

ಸಿದ್ಧಾಂತವೇನೆಂದರೆ – ಜೀವತ್ವಕ್ಕೆ ಯಾವುದು ವಿಶೇಷಣವೋ ಆ ವಿಶೇಷಣಕ್ಕೆ ಅಧಿಷ್ಠಾನವಾದ ವಸ್ತುವನ್ನೇ ಕೂಟಸ್ಥನೆನ್ನಬೇಕು.

## ೧ನೆಯ ಪಕ್ಷ

ಬುದ್ಧಿ ಎಂಬ ಜಡಪದಾರ್ಥ ಅಧಿಷ್ಠಾನವಿಲ್ಲದೆ ಬಾಳಲಾರದು. ಈ ಅಧಿಷ್ಠಾನ ಚೇತನವೆ ಕೂಟಸ್ಥ. ಉದಾ – ಗೋಡೆಯ ಮೇಲೆ ಹುಲಿಯ ಚಿತ್ರ ಬರೆದಿದ್ದಾರೆ. ಚಿತ್ರಕ್ಕೆ ಗೋಡೆ ಅವಕಾಶ ಕೊಟ್ಟಿದೆ. ಆದ್ದರಿಂದ ಚಿತ್ರಕ್ಕೆ ಗೋಡೆಯೇ ಅಧಿಷ್ಠಾನ ಅಧಿಷ್ಠಾನವಾದ ಗೋಡೆ ಇಲ್ಲದೆ ಚಿತ್ರರೂಪ ಹುಲಿಯು ಬಾಳಲಾರದು. ವಿಶಾಲವಾದ ಗೋಡೆಯಲ್ಲಿ ಚಿತ್ರವಿರಲು ಎಷ್ಟು ಅವಕಾಶವಿದೆಯೋ ಅದೇ ಹುಲಿಯ ಚಿತ್ರ. ಹುಲಿಯ ಚಿತ್ರದಲ್ಲಿ ಇನ್ನೊಂದು ವಿಶೇಷವಿದೆ. ಸೀಸದ ಕಡ್ಡಿ ಗೀರಿನ ಹೊರ ಭಾಗವೆಲ್ಲಾ ಗೋಡೆ, ಒಳ ಭಾಗ ವೆಲ್ಲಾ ಹುಲಿ. ಅಂದರೆ ಸೀಸದ ಕಡ್ಡಿಯ ಗೀರಿನ ಒಳ ಹೊರ ಭಾಗಗಳಿಗೆ ಯಾವ ವ್ಯತ್ಯಾಸವೂ ಇಲ್ಲದಿದ್ದರೂ ಗೀರಿನ ಉಪಾಧಿಯಿಂದ ಇದು ಹುಲಿ ಯಾಯಿತು.

ಅದರಂತೆ ಪರಿಪೂರ್ಣವಾದ ಚೇತನದಲ್ಲಿ ಬುದ್ಧಿಯು ಇರಲು ಎಷ್ಟು ಚೇತನದ ಅವಶ್ಯಕತೆ ಇದೆಯೋ ಅಷ್ಟು ಭಾಗದ ಚೇತನವನ್ನು ಕೂಟಸ್ಥ ಚೇತನವೆಂದು ಕರೆಯುತ್ತಾರೆ. ಈ ಕೂಟಸ್ಥ ಚೇತನವು ಪರಿಪೂರ್ಣವಾದ ಚೇತನಕ್ಕೆ ಭಿನ್ನವಿಲ್ಲ. ಸೀಸದ ಕಡ್ಡಿಯ ಗೀರಿನ ಉಪಾಧಿಯಿಂದ ಹುಲಿ ಎಂದು ಅಂದುಕೊಂಡರು. ಗೀರಿನ ಒಳ ಹೊರ ಭಾಗಗಳಲ್ಲಿ ಯಾವ ವ್ಯತ್ಯಾಸವೂ ಇಲ್ಲದಂತೆ ಬುದ್ಧಿ ಎಂಬ ಉಪಾಧಿಯಿಂದ ಕೂಟಸ್ಥ ಚೇತನವು ಏರ್ಪಟ್ಟರೂ, ಪರಿಪೂರ್ಣ ಚೇತನಕ್ಕೂ ಇದಕ್ಕೂ ಯಾವ ಭೇದವೂ ಇಲ್ಲ

## ೨ನೆಯ ಪಕ್ಷ

ಈ ಪಕ್ಷದಲ್ಲಿ ವ್ಯಷ್ಟಿ ಅಜ್ಞಾನ ಸಹಿತ ಚೇತನವನ್ನೇ ಜೀವನೆಂದು ಪರಿಗ್ರಹಿಸಿದ್ದಾರೆ. ವ್ಯಷ್ಟಿ ಅಜ್ಞಾನಕ್ಕೆ ಅಧಿಷ್ಠಾನವಾದ ಚೇತನವೇ ಕೂಟಸ್ಥನು ಎಂಬುದು ಈ ಪಕ್ಷದ ಅಭಿಪ್ರಾಯ.

ಜಾಗ್ರದಾವಸ್ಥೆಯ ಅಭಿಮಾನಿ ಜೀವನಿಗೆ ವಿಶ್ವನೆಂದೂ, ಸ್ವಪ್ನಾವಸ್ಥೆ ಅಭಿಮಾನಿ ಜೀವನಿಗೆ ತೈಜಸನೆಂದೂ ಮತ್ತು ಸುಷುಪ್ತಾವಸ್ಥೆ ಅಭಿಮಾನಿ ಜೀವನಿಗೆ ಪ್ರಾಜ್ಞನೆಂದೂ ಕರೆಯುತ್ತಾರೆ. ಈ ಮೂರವಸ್ಥೆಗಳಲ್ಲಿ ಬುದ್ಧಿಯು ಜಾಗ್ರದಾವಸ್ಥೆ ಮತ್ತು ಸ್ವಪ್ನಾವಸ್ಥೆಯಲ್ಲಿದ್ದು, ಸುಷುಪ್ತಾವಸ್ಥೆಯಲ್ಲಿ ಅಜ್ಞಾನದೊಡನೆ ಒಂದಾಗುತ್ತದೆ ಬುದ್ಧಿ ಸಹಿತ ಚೇತನವನ್ನೇ ಜೀವನೆಂದು ಪರಿಗ್ರಹಿಸುವ ಮೊದಲನೆಯ ಪಕ್ಷದಲ್ಲಿ ಬುದ್ಧಿಗೆ ಅಧಿಷ್ಠಾನವಾದ ಚೇತನವನ್ನೇ ಕೂಟಸ್ಥನೆಂದು ಕರೆಯುತ್ತಾರೆ ಆಗ ಒಂದು ದೋಷ ಬರುತ್ತದೆ. ಏನೆಂದರೆ ಬುದ್ಧಿಯು ಸುಷುಪ್ತಾವಸ್ಥೆಯಲ್ಲಿ ಕಾರ್ಯರೂಪದಿಂದ ಇಲ್ಲದಿರುವ ಕಾರಣ ಸುಷುಪ್ತಾವಸ್ಥೆಯ ಅಭಿಮಾನಿ ಜೀವನಾದ ಪ್ರಾಜ್ಞನ ಅಭಾವವೂ ಮತ್ತು ಕೂಟಸ್ಥನ ಅಭಾವವೂ ಉಂಟಾಗುತ್ತದೆ ಪ್ರಾಜ್ಞನ ಅಭಾವವನ್ನು ಶಾಸ್ತ್ರದಲ್ಲಿ ಅಂಗೀಕರಿಸಿರುವುದಿಲ್ಲ. ಆದ್ದರಿಂದ ಎರಡನೇ ಪಕ್ಷದವರು ವ್ಯಷ್ಟಿ ಅಜ್ಞಾನ ಸಹಿತವಾದ ಚೇತನವನ್ನೇ ಜೀವನೆಂದು ಕರೆದಿರುವುದರಿಂದ ಪ್ರಾಜ್ಞನ ಮತ್ತು ಕೂಟಸ್ಥನ ಇರುವಿಕೆಗೆ ಭಂಗ ಬರುವುದಿಲ್ಲ. ಏಕೆಂದರೆ ವ್ಯಷ್ಟಿ ಅಜ್ಞಾನವು ಮೂರವಸ್ಥೆಯಲ್ಲೂ ಇದ್ದು ಮೂರವಸ್ಥೆಯ ಅಭಿಮಾನಿ ಜೀವರಿಗೂ ಉಪಾಧಿಯಾಗಿದೆ ಈ ವ್ಯಷ್ಟಿ ಅಜ್ಞಾನಕ್ಕೆ ಅಧಿಷ್ಠಾನವಾದ ಚೇತನವನ್ನು ಕೂಟಸ್ಥನೆನ್ನುವುದರಿಂದ ಕೂಟಸ್ಥನು ಸರ್ವಕಾಲದಲ್ಲೂ ಇರುವನೆಂದು ಸಿದ್ಧವಾಗುತ್ತದೆಂಬುದು ಎರಡನೆಯ ಪಕ್ಷದ ಸಮ್ಮತ.

ಸಿದ್ಧಾಂತವೇನೆಂದರೆ, ವ್ಯಷ್ಟಿ ಅಜ್ಞಾನದ ಕಾರ್ಯವೇ ಬುದ್ಧಿ. ಜಾಗ್ರದಾವಸ್ಥೆಯಲ್ಲಿ ಬುದ್ಧಿ ರೂಪದಿಂದ ವ್ಯಷ್ಟಿ ಅಜ್ಞಾನವು ಪರಿವರ್ತನೆಯಾಗುತ್ತದೆ ಹೇಗೆಂದರೆ ಹೆತ್ತ ತುಪ್ಪವು ಶಾಖಕ್ಕೆ ಕರಗಿ ಹೋದಂತೆ ವ್ಯಷ್ಟಿ ಅಜ್ಞಾನವೇ ಬುದ್ಧಿ ರೂಪವಾಗಿ ಪರಿಣಮಿಸುವುದು ಅರ್ಥಾತ್ ಎರಡು ಪಕ್ಷದಲ್ಲಿ ಯಾವುದನ್ನು ಗ್ರಹಿಸಿದರೂ ದೋಷವಿಲ್ಲ.

ಒಟ್ಟನಲ್ಲಿ ಸಿದ್ಧಾಂತ ಮತಾನುಸಾರ ಜೀವನಿಗೆ ಯಾವುದು ವಿಶೇಷಣ ವಾಗಿದೆಯೋ ಆ ವಿಶೇಷಣಕ್ಕೆ ಅಧಿಷ್ಠಾನವಾದ ಚೇತನವೇ ಕೂಟಸ್ಥ. ಈ ಕೂಟಸ್ಥನು ಅಜನ್ಯನು , ಅಂದರೆ ಉತ್ಪತ್ತಿ ರಹಿತನು ತಾತ್ಪರ್ಯವೇನೆಂದರ ಬ್ರಹ್ಮಕ್ಕಿಂತ ಭಿನ್ನವಾಗಿ ಚಿದಾಭಾಸನು ಹುಟ್ಟಿದಂತೆ ಕೂಟಸ್ಥನು ಹುಟ್ಟು ವುದಿಲ್ಲ. ಅವನು ಬ್ರಹ್ಮ ಸ್ವರೂಪವಾಗಿಯೇ ಇರುತ್ತಾನೆ ಹೇಗೆಂದರೆ ಘಟಾಕಾಶವು ಮಹಾಕಾಶಕ್ಕಿಂತ ಭಿನ್ನವಲ್ಲ ; ಅದು ಮಹಾಕಾಶವೇ ಆಗಿರು ತ್ತದೆ. ಆದ್ದರಿಂದ ಈ ಕೂಟಸ್ಥನು ಅಜನ್ಯ ; ಮತ್ತು ಆತ್ಮಪದಕ್ಕೆ ಲಕ್ಷ್ಯಾರ್ಥನು. ಇವನನ್ನೇ ಪ್ರತ್ಯಗಾತ್ಮನೆಂದೂ, ನಿಜರೂಪನೆಂದೂ, ಜೀವ ಸಾಕ್ಷಿಯೆಂದೂ ಕರೆಯುತ್ತಾರೆ.

## ಜೀವ ಸ್ವರೂಪ ವರ್ಣನೆ

ದೋಹಾ – ಕಾಮ ಕರ್ಮಯುತ ಬುದ್ಧಿ ಮ್ಯೆ, ಜೋ ಚೇತನ ಪ್ರತಿಬಿಂಬ ।
ಜೀವ ಕಹೈ ವಿದ್ವಾನ ತಿಹಿ, ಜಲ ನಭ ತುಲ್ಯ ಸ ಬಿಂಬ ॥೮೪॥

ನಾನಾ ಪ್ರಕಾರವಾದ ಕಾಮನೆಗಳ ಮತ್ತು ಕರ್ಮಗಳ ಸಹಿತವಾದ ಬುದ್ಧಿಯಲ್ಲಿ ಬೀಳುವ ಚೇತನದ ಪ್ರತಿಬಿಂಬವನ್ನು "ಜೀವ" ನೆಂದು ಕರೆ ಯುತ್ತಾರೆ. ಇದು ಜಲಾಕಾಶಕ್ಕೆ ಸಮಾನವಾದುದು.

ಚೇತನ + ಬುದ್ಧಿ + ಬುದ್ಧಿಯಲ್ಲಿ ಬದ್ದ ಚೇತನದ ಪ್ರತಿಬಿಂಬ = ಜೀವ. ಈ ಮೂರೂ ಸೇರಿ ಜೀವನೆನಿಸುತ್ತದೆ.

**ಮತ್ತೊಂದು ವಿಧ –**

ಸ್ಥೂಲ ದೇಹರೂಪ ಘಟದಲ್ಲಿ ನಖಶಿಖಾಂತದವರೆಗೆ ತುಂಬಿರುವ ಬುದ್ಧಿರೂಪ ಜಲದಲ್ಲಿ ಇರುವ ಚೈತನ್ಯದ ಪ್ರತಿಬಿಂಬವೇ ಜೀವ.

ಸಾರಾಂಶ – ಅಂತಃಕರಣ ಎಂದರೆ ಬುದ್ಧಿ. ಅಧಿಷ್ಠಾನ. ಚೇತನ. ಅಂತಃಕರಣದಲ್ಲಿ ಬಿದ್ದ ಪ್ರತಿಬಿಂಬ ಎಂದರೆ ಚಿದಾಭಾಸ. ಈ ಮೂರೂ ಸೇರಿ ಜೀವನೆನ್ನುತ್ತಾರೆ.

**ಈ ವಿಷಯದಲ್ಲಿ – ಶಂಕೆ ಸಮಾಧಾನ**

ಶಂಕೆ ೧ – ಕೇವಲ ಅಂತಃಕರಣ ಮಾತ್ರಕ್ಕೆ ಜೀವನೆಂದೇಕೆ ಹೇಳಬಾರದು ?

ಸಮಾಧಾನ – ಕೇವಲ ಅಂತಃಕರಣಕ್ಕೆ ಜೀವನೆಂದು ಹೇಳಬೇಕಾದ ಪಕ್ಷದಲ್ಲಿ ಘಟಕ್ಕೂ ಸಹ ಜೀವನೆಂದು ಹೇಳಬೇಕಾಗುತ್ತದೆ. ಏಕೆಂದರೆ ಅಂತಃಕರಣವು ಭೂತಕಾರ್ಯವಾದಂತೆ ಘಟವೂ ಭೂತಕಾರ್ಯ.

ಶಂಕೆ ೨ – ಘಟವು ಸ್ವಚ್ಛವಾಗಿಲ್ಲವಾದುದರಿಂದ ಅದಕ್ಕೆ ಜೀವನೆಂದು ಹೇಳಕೂಡದು

ಸಮಾಧಾನ – ಸ್ವಚ್ಛವಾದ ಪದಾರ್ಥಕ್ಕೆ ಜೀವನೆಂದು ಹೇಳುವುದಾದರೆ ದರ್ಪಣವು ಸ್ವಚ್ಛವಾದುದರಿಂದ ಅದಕ್ಕೂ ಸಹ ಜೀವನೆಂದು ಹೇಳಬೇಕಾದೀತು.

ಶಂಕೆ ೩ – ದರ್ಪಣವು ಬಾಹ್ಯ ಪದಾರ್ಥವಾದುದರಿಂದ ಅದಕ್ಕೆ ಜೀವನೆಂದು ಹೇಳದೆ ಒಳಗಿರುವ ಪದಾರ್ಥಕ್ಕೆ ಜೀವನೆಂದು ಹೇಳಬಹುದು.

ಸಮಾಧಾನ – ಇಂದ್ರಿಯಗಳು ಒಳಗಿರುವುದರಿಂದ ಅವಕ್ಕೂ ಸಹ ಜೀವನೆಂದು ಹೇಳಬೇಕಾಗುತ್ತದೆ

ಶಂಕೆ ೪ – ಹಾಗಲ್ಲ, ಇಂದ್ರಿಯಗಳಿಗಿಂತಲೂ ಅಂತಃಕರಣವು ಒಳಗಿರುವ ಪದಾರ್ಥವಾದುದರಿಂದ ಅಂತಃಕರಣಕ್ಕೆ ಜೀವನೆಂದು ಹೇಳಬಹುದು.

ಸಮಾಧಾನ – ಹಾಗೂ ಹೇಳಬಾರದು ಏಕೆಂದರೆ, ಅಂತಃಕರಣಕ್ಕಿಂತಲೂ ಅಜ್ಞಾನವು ಒಳಗಿರುವ ಪದಾರ್ಥವಾದುದರಿಂದ ಅಜ್ಞಾನಕ್ಕೇ ಜೀವನೆಂದು ಹೇಳಬೇಕಾಗುತ್ತದೆ. ಈ ರೀತಿ ನಿನ್ನ ಅಭಿಪ್ರಾಯದಂತೆ ಜೀವತ್ವ ಯೋಗ್ಯ ಪದಾರ್ಥಗಳು ಅನೇಕವಾಗಿರುವುದರಿಂದ ಕೇವಲ ಅಂತಃಕರಣಕ್ಕೆ ಜೀವನೆಂದು ಹೇಳಕೂಡದು.

## ಮತ್ತೊಂದು ಮುಖ್ಯ ವಿಷಯ

ಜೀವನು ಚೇತನ ಪದಾರ್ಥವೆಂದು ಅನೇಕ ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿರುವುದರಿಂದ ಜೀವನೇ ಬೇರೆ, ಅಂತಃಕರಣವೇ ಬೇರೆ. ಅಂತಃಕರಣವು ಜಡಪದಾರ್ಥವಾದುದರಿಂದ ಜೀವನೆಂದು ಹೇಳಕೂಡದು.

ಶಂಕೆ – ಕೇವಲ ಅಂತಃಕರಣಕ್ಕೆ ಜೀವನೆಂದು ಹೇಳದೆ, ಕೇವಲ ಪ್ರತಿ ಬಿಂಬಕ್ಕೆ ಜೀವತ್ವವನ್ನು ಹೇಳಿದರೆ ಬರುವ ದೋಷವೇನು ?

ಸಮಾಧಾನ – ದರ್ಪಣವಿಲ್ಲದೆ ಪ್ರತಿಬಿಂಬವು ಎಲ್ಲಿಯೂ ಕಂಡುಬಂದಿಲ್ಲ ಇದರಂತೆ ಅಂತಃಕರಣ ಎಂಬ ದರ್ಪಣವಿಲ್ಲದೆ ಪ್ರತಿಬಿಂಬವು ಉಂಟಾಗ ಲಾರದು

ಶಂಕೆ – ಕೇವಲ ಅಂತಃಕರಣಕ್ಕೂ ಪ್ರತಿಬಿಂಬಕ್ಕೂ ಜೀವನೆಂದು ಹೇಳದೆ ಅಧಿಷ್ಠಾನ ಚೇತನಕ್ಕೆ ಜೀವನೆಂದು ಹೇಳಿದರೆ ಬರುವ ದೋಷವೇನು?

ಸಮಾಧಾನ – ಅದೂ ಕೂಡದು. ಏಕೆಂದರೆ ಚೈತನ್ಯವು ನಿರ್ವಿಕಾರಿ ನಿರ್ವಿಕಾರವಾದ ಚೇತನಕ್ಕೆ ವಿಕಾರ ರೂಪವಾದ ಜೀವತ್ವವು ಉಂಟಾಗ ಲಾರದು

ಶಂಕೆ – ಅಂತಃಕರಣ, ಪ್ರತಿಬಿಂಬ ಎರಡೂ ಸೇರಿ ಜೀವನೆಂದರೆ ಬರುವ ದೋಷವೇನು ?

ಸಮಾಧಾನ – ನೀನು ಹೇಳುವ ಅಂತಃಕರಣ, ಪ್ರತಿಬಿಂಬ ಎರಡೂ ಕಲ್ಪಿತವಾಗಿರುವುದರಿಂದ ಆ ಎರಡೂ ಸೇರಿ ಜೀವನೆಂದರೆ ಜೀವನಿಗೆ ನಿತ್ಯತ್ವದ ಅಭಾವವಾಗುವುದರಿಂದ ಮೋಕ್ಷಕ್ಕೆ ಅಧಿಕಾರಿಗಳೇ ಇಲ್ಲದಂತಾಗುತ್ತದೆ ಮತ್ತು ಮಹಾವಾಕ್ಯದಲ್ಲಿ ಭಾಗತ್ಯಾಗ ಲಕ್ಷಣವು ಸಂಭವಿಸದೆ ಕೇವಲ ವಾಚ್ಯಾರ್ಥವನ್ನು ಬಿಡುವ ಜಹಲ್ಲಕ್ಷಣ ಸಂಭವಿಸುವುದರಿಂದ ಅದು ವೇದಾಂತ ಶಾಸ್ತ್ರ ಮರ್ಯಾದೆಗೂ, ಆಚಾರ್ಯರ ಪದ್ಧತಿಗೂ ವಿರುದ್ಧ ಮತ್ತು ಬರುವ ಮಹಾದೋಷವೇನೆಂದರೆ, ಅಧಿಷ್ಠಾನಕ್ಕೆ ಅನ್ಯವಲ್ಲದ ಪದಾರ್ಥವು ಅಧಿಷ್ಠಾನವನ್ನು ಆಚ್ಛಾದಿಸುವ ಆರೋಪ್ಯ ಪದಾರ್ಥವೆಂದು ತಿಳಿಯಬೇಕಾಗು ತ್ತದೆ ಅಧಿಷ್ಠಾನಕ್ಕೆ ಅನ್ಯವಾಗಿ ಆರೋಪ್ಯವು ತೋರದಂತಾಗುತ್ತದೆ. ಈ ಅನುಭವದಿಂದಲೂ ಬಿಂಬವಿಲ್ಲದೆ ಪ್ರತಿಬಿಂಬವು ತೋರಲಾರದು. ಆದುದರಿಂದ ಬಿಂಬವಿಲ್ಲದ ಕೇವಲ ಅಂತಃಕರಣ ಪ್ರತಿಬಿಂಬಗಳು ಜೀವನೆಂಬು ಹೇಳಲಾ ಗುವುದಿಲ್ಲ.

ಶಂಕೆ – ಹಾಗೆನ್ನದೆ ಅಧಿಷ್ಠಾನ ಚೈತನ್ಯವೂ, ಪ್ರತಿಬಿಂಬ ಚೈತನ್ಯವೂ ಕೂಡಿ ಜೀವನೆಂದು ಹೇಳಿದರೆ ಬರುವ ದೋಷವೇನು ?

ಸಮಾಧಾನ – ಉಪಾಧಿ ಗ್ರಹಣವಿಲ್ಲದೆ ಎರಡೂ ಕೇವಲ ಚೈತನ್ಯ ಮಾತ್ರಗಳು ನಿರ್ವಿಕಾರವಾಗಿರುವುದರಿಂದ ಆ ನಿರ್ವಿಕಾರ ಚೇತನಕ್ಕೆ ಕರ್ತೃತ್ವ, ಭೋಕ್ತೃತ್ವಾದಿ ವಿಕಾರ ಲಕ್ಷಣವಾದ ಜೀವತ್ವವು ಹೇಳಕೂಡದು. ಮತ್ತೊಂದು ವಿಷಯ: ಉಪಾಧಿ ಇಲ್ಲದೆ ಪ್ರತಿಬಿಂಬವು ಸಂಭವಿಸುವುದಿಲ್ಲ ವೆಂಬುದು ಸುಪ್ರಸಿದ್ಧ. ಮತ್ತು ಕನ್ನಡಿಯಿಲ್ಲದೆ ಪ್ರತಿಬಿಂಬ ಬೀಳುತ್ತದೆಯೇ?

ಶಂಕೆ – ಅಧಿಷ್ಠಾನ ಚೇತನವೂ, ಅಂತಃಕರಣವೂ ಸೇರಿ ಜೀವನೆಂದು ಹೇಳಿದರೆ ಬರುವ ದೋಷವೇನು ?

ಸಮಾಧಾನ – ಹಾಗೆ ಹೇಳಿದರೆ ದರ್ಪಣ, ದರ್ಪಣಾಧಿಷ್ಠಾನ ಎರಡೂ ಸೇರಿ ಜೀವನೆಂದು ಹೇಳಬೇಕಾಗುತ್ತದೆ. ಇವುಗಳಿಗೆ ಜೀವತ್ವವಿಲ್ಲ ದರ್ಪಣ, ದರ್ಪಣಾಧಿಷ್ಠಾನ ಈ ಎರಡರಲ್ಲಿ ಭೋಗಕ್ಕೆ ಆಶ್ರಯುವೇ ಸಿದ್ಧಿಸು ವುದಿಲ್ಲ. ಈ ರೀತಿ ಪ್ರತಿಬಿಂಬವಿಲ್ಲದೆ ಅಂತಃಕರಣ ಮತ್ತು ಅಂತಃ ಕರಣಾಧಿಷ್ಠಾನಕ್ಕೆ ಭೋಗವೂ, ಭೋಗಕ್ಕೆ ಆಶ್ರಯವೂ ಸಿದ್ಧಿಸಲಾರದು ಆದುದರಿಂದ ಜೀವತ್ವ ಸಿದ್ಧಿಗಾಗಿ ಮೂರನೆಯದಾದ ಅಂತಃಕರಣದಲ್ಲಿ ಉಂಟಾದ ಪ್ರತಿಬಿಂಬವನ್ನು ಅಂಗೀಕರಿಸಲೇ ಬೇಕು.

ಮೇಲ್ಕಂಡ ಈ ಆರೂ ಪ್ರಕಾರದಿಂದ ಜೀವತ್ವವು ಸಂಭವಿಸದೆ ಹೋಗಲು ಅಧಿಷ್ಠಾನ ಚೇತನ, ಅಂತಃಕರಣ, ಪ್ರತಿಬಿಂಬ – ಈ ಮೂರೂ ಸೇರಿ ಜೀವ ನೆನ್ನುವುದರಲ್ಲಿ ಯಾವ ದೋಷವೂ ಇಲ್ಲ

ಮೇಲೆ ಹೇಳಿದ ಈ ಮೂರರಲ್ಲಿಯೂ ಅಧಿಷ್ಠಾನ ಚೇತನನಾದ ಕೂಟ ಸ್ಥನಿಗೆ ಸಂಸಾರವು ಸಂಭವಿಸುವುದಿಲ್ಲವಾದುದರಿಂದ ಪ್ರತಿಬಿಂಬ ಎಂಬ ಉಪಾಧಿ ಸಹಿತನಾದ ಜೀವನೇ "ಸಂಸಾರಿ" ಎಂದು ತಿಳಿಯಬೇಕು ಇದನ್ನೇ ವಿದ್ಯಾರಣ್ಯರು "ಆತ್ಮಾಭಾಸಸ್ಯ ಜೀವಸ್ಯ ಸಂಸಾರೋಽನಾತ್ಮ ವಸ್ತುನಿ" ಎಂದು ಹೇಳಿದ್ದಾರೆ.

ದೋಹಾ – ಅಧಿಷ್ಠಾನ ಕೂಟಸ್ಥ ಸ್ವೈ, ಹ್ವೈ ಆಭಾಸ ಬಹಾಲ ।
ರಕ್ತ ಪುಷ್ಪ ಊಪರ ಧರ್ಯೋ, ಸ್ಫಟಿಕ ಹೋ ಇ ಜಿಮಲಾಲ ॥೮೫॥

ಅರ್ಥ – ಹಿಂದೆ ಬಿಂಬಸಹಿತನಾದ ಚಿದಾಭಾಸನೇ ಜೀವನೆಂದು ಹೇಳಿದೆ

ಪ್ರಶ್ನೆ – ಚಿದಾಭಾಸ ಎಂಬ ಪದಕ್ಕೆ ಅರ್ಥವೇನು ?

ಉತ್ತರ – ಪಟದ ಲಕ್ಷಣವಿಲ್ಲದೆ ಪಟದಂತೆ ತೋರುವುದಕ್ಕೆ ಪಟಾಭಾಸವೆನ್ನುತ್ತಾರೆ. ಅದರಂತೆ ಚೈತನ್ಯ ಲಕ್ಷಣವಿಲ್ಲದೆ ಚೈತನ್ಯದಂತೆ ತೋರುವುದು ಚಿದಾಭಾಸ. ಚಿತ್ ಅಲ್ಲದೆ ಚಿತ್ತಿನಂತೆ ತೋರುವುದು ಚಿದಾಭಾಸ.

ಮೇಲೆ ಹೇಳಿದ ಚಿದಾಭಾಸನ ಲಕ್ಷಣದಲ್ಲಿ ತೋರುವ ಅರ್ಥವೇನೆಂದರೆ ಬುದ್ಧಿಯಲ್ಲಿರುವ ಪ್ರತಿಬಿಂಬವು ಬುದ್ಧಿಗೆ ಅಧಿಷ್ಠಾನವಾದ ಕೂಟಸ್ಥನದು. ಹೊರಗಿರುವ ಬ್ರಹ್ಮಾಂಡದ ಅಧಿಷ್ಠಾನವಾದ ಪರಬ್ರಹ್ಮ ಚೇತನದ್ದಲ್ಲ ಏಕೆಂದರೆ, ಪ್ರತಿಬಿಂಬಕ್ಕೆ ಆಶ್ರಯವಾದದ್ದು ಬಿಂಬ.

ಉದಾಹರಣೆ – ಕೆಂಪು ಬಣ್ಣದ ದಾಸವಾಳದ ಹೂವಿನ ಮೇಲಿಟ್ಟ ಸ್ಫಟಿಕದಲ್ಲಿ ಪುಷ್ಪದ ಕೆಂಪು ಬಣ್ಣವು ಪ್ರತಿಬಿಂಬಿತವಾಗುವುದು. ಹೊರಗೆ ಎಲ್ಲೆಲ್ಲೋ ಇರುವ ಹೂವಿನ ಪ್ರತಿಬಿಂಬವಾಗುವುದಿಲ್ಲ. ಅದರಂತೆ ಕೂಟಸ್ಥನ ಆಶ್ರಯದಲ್ಲಿರುವ ಬುದ್ಧಿಯಲ್ಲಿ ಕೂಟಸ್ಥನ ಛಾಯೆಯು ಪ್ರಸರಿಸುತ್ತದೆ. ಅದೇ ಕೂಟಸ್ಥನ ಪ್ರತಿಬಿಂಬ ಸ್ಫಟಿಕವು ಅತ್ಯಂತ ಸ್ವಚ್ಛವಾಗಿರುವುದರಿಂದ ಪ್ರತಿಬಿಂಬಕ್ಕೆ ಯೋಗ್ಯವಾದಂತೆ ಸತ್ವಗುಣ ಕಾರ್ಯವಾದ ಬುದ್ಧಿಯು ಶುದ್ಧವಾದುದರಿಂದ ಪ್ರತಿಬಿಂಬಕ್ಕೆ ಯೋಗ್ಯವಾಗಿದೆ.

**ಮತ್ತೊಂದು ಪಕ್ಷ –**

ಬುದ್ಧಿಯಲ್ಲಿ ಪ್ರತಿಬಿಂಬಿಸಿರುವುದು ಬ್ರಹ್ಮಚೈತನ್ಯದ ಪ್ರತಿಬಿಂಬವೇ ಎಂದು ಹೇಳುವುದೂ ಸಹ ಸಂಭವಿಸುತ್ತದೆ. ಹೇಗೆಂದರೆ, ಮಹಾಕಾಶವು ಘಟ ಜಲದಲ್ಲಿ ಪ್ರತಿಬಿಂಬವಾದಂತೆ ಘಟದೊಳಗಿರುವ ಆಕಾಶದ ಪ್ರತಿಬಿಂಬವಾಗಲಾರದು. ಹೇಗೆಂದರೆ ಜಲದಲ್ಲಿ ಪ್ರತೀತಿಯಾಗುವ ಗಂಭೀರತೆಯು ಘಟದೊಳಗಿರುವ ಜಲಾಕಾಶದೊಳಗಿಲ್ಲ. ಇದರಿಂದ ಸಿದ್ಧವಾಗುವುದೇನೆಂದರೆ ಅಧಿಕ ಗಂಭೀರವಾಗಿ ತೋರುವುದು ಬಾಹ್ಯದಲ್ಲಿರುವ ಮಹಾಕಾಶದ ಪ್ರತಿಬಿಂಬವು.

ಸಾರಾಂಶವೇನೆಂದರೆ – ಬುದ್ಧಿರೂಪ ಘಟದಲ್ಲಿ ಬುದ್ಧಿ ಎಂಬ ಘಟಕ್ಕಿಂತಲೂ ಹೊರಗಿರುವ ಬ್ರಹ್ಮಚೇತನದ ಪ್ರತಿಬಿಂಬವು ಸಂಭವಿಸುತ್ತದೆ

ಈ ವಿಷಯವಾಗಿ ಕೆಲವರು ವ್ಯಾಪಕ ಚೈತನ್ಯವು ನಿರಾಕಾರವಾದುದರಿಂದ ಅದರ ಪ್ರತಿಬಿಂಬವು ಸಂಭವಿಸುವುದಿಲ್ಲ ಎಂದು ಶಂಕೆ ಮಾಡುತ್ತಾರೆ. ಈ ಶಂಕೆಯು ಹಿಂದೆ ಹೇಳಿದ ಆಕಾಶದ ದೃಷ್ಟಾಂತದಿಂದ ದೂರವಾಗುತ್ತದೆ. ಏಕೆಂದರೆ ಚೈತನ್ಯವು ವ್ಯಾಪಕವಾಗಿರುವಂತೆ ಆಕಾಶವೂ ವ್ಯಾಪಕವಾಗಿದೆ.

**ಮತ್ತೊಂದು ಶಂಕೆ** –

ರೂಪವುಳ್ಳ ಪದಾರ್ಥದ ಪ್ರತಿಬಿಂಬವು ರೂಪವುಳ್ಳ ಪದಾರ್ಥದಲ್ಲಿಯೇ ಸಂಭವಿಸುತ್ತದೆ. ರೂಪವಿಲ್ಲದ ಪದಾರ್ಥವು ರೂಪವಿಲ್ಲದ ಪದಾರ್ಥದಲ್ಲಿ ಪ್ರತಿಬಿಂಬಿಸಲಾರದು.

ಸಮಾಧಾನ – ಇದು ನೇಮವಲ್ಲ. ಏಕೆಂದರೆ ರೂಪವಿಲ್ಲದ ಆಕಾಶದಲ್ಲಿ ರೂಪವಿಲ್ಲದ ಶಬ್ದದ ಪ್ರತಿಬಿಂಬವು ಕಂಡುಬರುತ್ತದೆ.

ಈ ರೀತಿಯಾಗಿ ಬುದ್ಧಿ, ಬುದ್ಧಿಯಲ್ಲಿರುವ ಆಭಾಸ ಮತ್ತು ಬುದ್ಧಿಗೆ ಅಧಿಷ್ಠಾನವಾದ ಚೇತನ ಈ ಮೂರೂ ಸೇರಿದರೆ ಜೀವ ಎಂದಾಗುತ್ತದೆ ಈ ಜೀವನೇ "ತತ್ತ್ವಮಸಿ" ಮಹಾವಾಕ್ಯದಲ್ಲಿರುವ "ತ್ವಂ" ಪದಕ್ಕೆ ವಾಚ್ಯನಾಗಿದ್ದಾನೆ. ಆ ಮೂರರಲ್ಲಿರುವ ಬುದ್ಧಿ, ಬುದ್ಧಿ ಸಹಿತ ಚಿದಾಭಾಸ ಈ ಎರಡೂ ಉಪಾಧಿಗಳು ಮಿಥ್ಯೆ ಎಂದು ತೆಗೆದುಹಾಕಿದರೆ ಉಳಿಯುವ ಕೇವಲ ಕೂಟಸ್ಥನು "ತ್ವಂ" ಪದಕ್ಕೆ "ಲಕ್ಷ್ಯ"ನಾಗಿದ್ದಾನೆ. ಅಂದರೆ "ಅಹಂ" ಪದಕ್ಕೆ ಜೀವನು ವಾಚ್ಯ, ಕೂಟಸ್ಥನು "ಲಕ್ಷ್ಯ" ಎಂದು ತಿಳಿಯಬೇಕು.

ದೋಹಾ – ಬುದ್ಧಿಮಾಹಿ ಆಭಾನ ಜೋ, ಪುನ್ಯಪಾಪ ಫಲಭೋಗ ।
ಗಮನ ಆಗಮನ ಸೋ ಕರೈ, ನಹಿ ಚೇತನ ಮೈ ಜೋಗ ॥೮೭॥

ಮಿಥ್ಯಾನಭ ಘಟ ಸಂಗ ಜು, ಲಹೈ ಕ್ರಿಯಾ ಬಹು ಭ್ರಾಂತಿ ।
ಘಟಾಕಾಸ ಅಕ್ರಿಯ ಸದಾ, ರಹೈ ಏಕ ರಸ ಸಾಂತಿ ॥೮೭॥

ತಾತ್ಪರ್ಯ – ಬುದ್ಧಿ ಸಹಿತ ಚಿದಾಭಾಸನು ಮತ್ತು ಕೂಟಸ್ಥನು ಸೇರಿ ಜೀವನೆಂದು ಹೇಳಿದರೆ ಆ ಚಿದಾಭಾಸನಿಗೂ ಕೂಟಸ್ಥನಿಗೂ ಸ್ವರೂಪದಲ್ಲಿ ವ್ಯತ್ಯಾಸವಿದೆ. ಏನೆಂದರೆ, ಪುಣ್ಯ ಪಾಪ ಮತ್ತು ಪುಣ್ಯ ಪಾಪದ ಫಲ

ಗಳಾದ ಸುಖ ದುಃಖಗಳು ಮತ್ತು ಅವುಗಳನ್ನು ಅನುಭವಿಸುವುದಕ್ಕಾಗಿ ಲೋಕ ಲೋಕಾಂತರ ಗಮನಾಗಮನಾದಿಗಳು – ಇವೇ ಮೊದಲಾಗಿ ಎಲ್ಲಾ ಜೀವತ್ವ ಧರ್ಮಗಳು ಆಭಾಸ ಸಹಿತ ಬುದ್ಧಿಯಲ್ಲಿಯೇ ಇರುತ್ತವೆ. ಕೂಟಸ್ಥ ನಲ್ಲಿ ಇಲ್ಲ.

ಆ ಜೀವತ್ವ ಧರ್ಮಗಳು ಕೂಟಸ್ಥನಲ್ಲಿ ಕೇವಲ ಭ್ರಾಂತಿಯಿಂದ ತೋರುತ್ತವೆ. ಆ ಭ್ರಾಂತಿ ಜನ್ಯ ಪ್ರತೀತಿಯೂ ಸಹ ಬುದ್ಧಿಸಹಿತ ಆಭಾಸ ನಿಗೆ ಆಗುತ್ತದೆ; ಕೂಟಸ್ಥನಿಗಲ್ಲ ಕೂಟಸ್ಥನ ಸ್ವರೂಪ ಲಕ್ಷಣವನ್ನು ವಿಚಾರಿಸಿದರೆ ಇದು ಸ್ಪಷ್ಟವಾಗುತ್ತದೆ. ಕೂಟಸ್ಥನಲ್ಲಿ ಭ್ರಾಂತಿ ಮೊದಲಾದ ಜೀವ ಧರ್ಮಗಳು ಸಂಭವಿಸುವುದಿಲ್ಲ. ಅವು ಬುದ್ಧಿಸಹಿತವಾದ ಚಿದಾಭಾಸ ನಲ್ಲಿಯೇ ಸಂಭವಿಸುತ್ತವೆ. ಅತ್ಯಂತ ಸೂಕ್ಷ್ಮವಾಗಿ ವಿಚಾರ ಮಾಡಿ ನೋಡಿ ದರೆ ಪುಣ್ಯ ಪಾಪಾದಿ ಧರ್ಮಗಳು ಕೇವಲ ಬುದ್ಧಿಯಲ್ಲಿಯೇ ಇರುತ್ತವೆ, ಆಭಾಸನಲ್ಲಿಯೂ ಸಹ ಇರಲಾರವು ಅವು ಬುದ್ಧಿ ಸಂಯೋಗದಿಂದ ಆಭಾಸ ನಲ್ಲಿ ಪ್ರತೀತಿಯಾಗುತ್ತವೆ.

ಉದಾಹರಣೆ – ಜಲಸಹಿತವಾದ ಘಟವು ಹೋದರೆ–ಬಂದರೆ, ಸರಿ ಯಾಗಿದ್ದರೆ–ಇಲ್ಲದಿದ್ದರೆ ಆ ತತ್ಸಂಬಂಧದಿಂದ ಆಕಾಶದ ಆಭಾಸದಲ್ಲಿಯೇ ಸಂಪೂರ್ಣ ಕ್ರಿಯೆಯನ್ನು ತೋರಿದರೂ ಅದು ಸ್ವತಂತ್ರವಾಗಿ ಏನೂ ಮಾಡು ವುದಿಲ್ಲ. ಅದರಂತೆ ಕಾಮ, ಕರ್ಮರೂಪ ಜಲದಿಂದ ತುಂಬಿದ ಬುದ್ಧಿರೂಪ ಘಟವು ಪುಣ್ಯಪಾಪಾದಿ ಸರ್ವ ವಿಕಾರಗಳನ್ನು ಧರಿಸುತ್ತಿರುವಾಗ ಆ ವಿಕಾರ ಗಳು ಬುದ್ಧಿಯ ಸಂಬಂಧದಿಂದ ಚಿದಾಬಾಸನು ಧರಿಸಿದಂತೆ ಕಂಡುಬರುತ್ತದೆ ಕೂಟಸ್ಥನಾದರೋ ಸರ್ವವಿಕಾರ ರಹಿತನಾಗಿದ್ದಾನೆ. ಜಲಪೂರಿತ ಘಟದ ಸಂಬಂಧವಾದ ಸಕಲ ವಿಕಾರಗಳೂ ಘಟಾಕಾಶದಲ್ಲಿರುವುದಿಲ್ಲ ಅದರಂತೆ ಕೂಟಸ್ಥನು ಬುದ್ಧಿರೂಪ ಘಟ ಸಂಬಂಧದಿಂದ ಸಕಲ ವಿಕಾರರಹಿತನಾಗಿದ್ದಾ ನೆಂದು ತಿಳಿಯಬೇಕು.

ಈ ರೀತಿಯಾಗಿ ಜೀವತ್ವದ ಸಕಲ ಧರ್ಮಗಳು ಚಿದಾಭಾಸನಲ್ಲಿ ಸ್ಥೂಲ ದೃಷ್ಟಿಯಿಂದ ಕಂಡು ಬರುತ್ತವೆ. ಕೂಟಸ್ಥನಲ್ಲಿಯಾದರೋ ಕೇವಲ ಭ್ರಾಂತಿಯಿಂದ ಪ್ರತೀತಿಯಾಗುತ್ತವೆ. ಕಬ್ಬಿಣದ ಕಡಾಯಿಯಲ್ಲಿ

ಕಾಯಿಸಿದ ಎಣ್ಣೆಯಲ್ಲಿ ಆಕಾಶದ ಪ್ರತಿಬಿಂಬವಾಗುತ್ತದೆ. ಅಲ್ಲಿ ಆಗುವ ಅಗ್ನಿ ತಾಪವು ಎಣ್ಣೆಯಲ್ಲಿಯೇ ವಿನಃ ಆಕಾಶದ ಪ್ರತಿಬಿಂಬಕ್ಕೆ ಉಂಟಾಗ ಲಾರದು ಪ್ರತಿಬಿಂಬಕ್ಕೇ ಉಂಟಾಗುವುದಿಲ್ಲವೆಂದ ಮೇಲೆ ಪ್ರತಿಬಿಂಬಕ್ಕೆ ಅಧಿಷ್ಠಾನವಾದ, ಬಿಂಬರೂಪವಾದ ಆಕಾಶಕ್ಕೆ ಎಲ್ಲಿ ಬರುತ್ತದೆ! ಅದರಂತೆ ಪುಣ್ಯಪಾಪಾದಿ ರೂಪವಾದ ಸಂಸಾರವು ಕೇವಲ ಬುದ್ಧಿಗೆ ಸಂಬಂಧಿಸಿದ್ದು; ಆಭಾಸನಲ್ಲಿಯೂ ಸಹ ಇಲ್ಲ. ಅಂದ ಮೇಲೆ ಆಭಾಸನ ಅಧಿಷ್ಠಾನನಾದ ಕೂಟಸ್ಥನಿಗೆ ಎಲ್ಲಿಂದ ಬರುತ್ತದೆ! ಒಂದು ವೇಳೆ ಅದು ಕೂಟಸ್ಥನಲ್ಲಿ ಕಂಡು ಬಂದರೆ ಅದು ಕೇವಲ ಭ್ರಾಂತಿ. ಕೂಟಸ್ಥನಲ್ಲಿ ಜೀವತ್ವ ಧರ್ಮವನ್ನು ನೋಡುವುದಕ್ಕಿಂತ ದೊಡ್ಡ ಭ್ರಾಂತಿಯು ಎಲ್ಲಿಯೂ ಇಲ್ಲ ಚಿದಾಭಾಸನಲ್ಲಿ ಜೀವತ್ವವು ಕಂಡುಬಂದರೆ ಅದು ಸಾಮಾನ್ಯವಾದ ಭ್ರಾಂತಿ.

ಸಂಬಂಧ – ಮುಂದಿನ ದೋಹಾದಲ್ಲಿ ಇನ್ನೊಂದು ವಿಧವಾದ ಜೀವ ಸ್ವರೂಪವು ವರ್ಣಿಸಲ್ಪಟ್ಟಿದೆ

ದೋಹಾ – ಅಥವಾ ವ್ಯಷ್ಟಿ ಅಜ್ಞಾನ ಮೈ, ಜೋ ಚೇತನ ಆಭಾಸ ।
ಅಧಿಷ್ಠಾನ ಕೂಟಸ್ಥ-ಯುತ, ಕಹ್ಯೈ ಜೀವ'ಪದ ತಾಸ ॥೮೮॥

ಹಿಂದೆ ಹೇಳಿದ ಜೀವನ ಲಕ್ಷಣದಲ್ಲಿ ಮೇಲೆ ಮೇಲೆ ನೋಡುವ ಕೆಲವು ಜನರಿಗೆ ಒಂದು ದೋಷವು ಕಂಡುಬರುತ್ತದೆ ಆ ದೋಷವನ್ನು ನಿವೃತ್ತಿ ಮಾಡುವುದಕ್ಕೋಸ್ಕರ ಈ ದೋಹವು ಪ್ರವೃತ್ತಿಯಾಗಿದೆ.

ಪ್ರಶ್ನೆ – ಬುದ್ಧಿಯಲ್ಲಿರುವ ಕೂಟಸ್ಥನ ಆಭಾಸಕ್ಕೆ ಜೀವನೆಂದು ಹೇಳಿ ದರೆ ಆ ಬುದ್ಧಿಯು ಸುಷುಪ್ತಿಯಲ್ಲಿ ಇರುವುದಿಲ್ಲ. ಹೀಗಾದ ಮೇಲೆ ಅಲ್ಲಿ ಜೀವನೇ ಇಲ್ಲವೆಂದು ಹೇಳಬೇಕಾಯಿತು ಕೆಲವು ಶಾಸ್ತ್ರಗಳು ಸುಷುಪ್ತಿಯ ಅಭಿಮಾನಿಯಾದ ಜೀವನು ಪ್ರಾಜ್ಞನೆಂದು ಹೇಳಿರುತ್ತವೆ. ನೀವು ಹೇಳುವ ಅಭಿಪ್ರಾಯದಂತೆ ನೋಡಿದರೆ ಆ ಶಾಸ್ತ್ರಕ್ಕೆ ವಿರೋಧವಾಗುವುದಿಲ್ಲವೇ ?

ಉತ್ತರ – ವಿರೋಧವಾಗುವುದಿಲ್ಲ. ಹೇಗೆಂದರೆ, ಜೀವನ ಸ್ವರೂಪ

ವನ್ನು ವರ್ಣನೆ ಮಾಡುವ ಹಿಂದಿನ ದೋಹದಲ್ಲಿ ವ್ಯಷ್ಟಿ ಅಜ್ಞಾನದಲ್ಲಿರುವ ಆಭಾಸನು ಜೀವನೆಂದು ಹೇಳಿದೆ ಅಜ್ಞಾನದ ಅಂಶಕ್ಕೆ ವ್ಯಷ್ಟಿ ಅಜ್ಞಾನ ವೆಂದು ಹೆಸರು ಸಂಪೂರ್ಣವಾದ ಅಜ್ಞಾನಕ್ಕೆ ಸಮಷ್ಟಿ ಅಜ್ಞಾನವೆಂದು ಹೆಸರು. ಈ ಅಜ್ಞಾನದ ಅಂಶವೂ, ಅದರಲ್ಲಿರುವ ಆಭಾಸನೂ, ಅಜ್ಞಾನದ ಅಂಶಕ್ಕೆ ಅಧಿಷ್ಠಾನವಾದ ಕೂಟಸ್ಥನೂ ಸೇರಿ ಜೀವನೆಂದಾಗುತ್ತದೆ. ಈ ಪಕ್ಷದ ಪ್ರಕಾರ ನೋಡಿದರೆ ಪ್ರಾಜ್ಞನಿಗೆ ಅಭಾವ ಉಂಟಾಗಲಾರದು ಏಕೆಂದರೆ ಸುಷುಪ್ತಿಯಲ್ಲಿ ಅಜ್ಞಾನ ಇರುತ್ತದೆ. ಆ ಅಜ್ಞಾನವೇ ಜಾಗ್ರತ್ತಿನಲ್ಲಿ ಬುದ್ಧಿ ರೂಪವನ್ನು ತಾಳುತ್ತದೆ. ಆಗ ಚಿದಾಭಾಸ ಸಹಿತವಾದ ಬುದ್ಧಿಯಲ್ಲಿ ಪುಣ್ಯಪಾಪ ಮೊದಲಾದ ಸಂಸಾರವು ಪ್ರತೀತಿಯಾಗುತ್ತದೆ. ಈ ಅಭಿಪ್ರಾಯ ದಿಂದಲೇ ಶಾಸ್ತ್ರದಲ್ಲಿ ಜೀವನ ಉಪಾಧಿಯು ಬುದ್ಧಿ ಎಂದು ವರ್ಣಿಸಿದೆ ವಿಚಾರ ದೃಷ್ಟಿಯಿಂದ ನೋಡಿದರೆ ಜೀವನ ಉಪಾಧಿಯು ಅಜ್ಞಾನವೆಂದು ಸ್ಪಷ್ಟವಾಗುತ್ತದೆ.

ಸಂಬಂಧ – ಕೂಟಸ್ಥ ಮತ್ತು ಜೀವನ ವರ್ಣನೆಯಾದ ಮೇಲೆ ಕ್ರಮಾಗತವಾಗಿ ಈಶ್ವರ ಚೇತನ ವರ್ಣನೆಯು ಮುಂದಿನ ದೋಹಾದಲ್ಲಿ ಹೇಳಲ್ಪಟ್ಟಿದೆ.

## ಈಶ್ವರ ಸ್ವರೂಪ ವರ್ಣನೆ

ದೋಹಾ – ಚಿತ್ ಛಾಯಾ ಮಾಯಾ ವಿಷೈ, ಅಧಿಷ್ಠಾನ ಸಂಯುಕ್ತ ।
ಮೇಘ–ವ್ಯೋಮ–ಸಮ ಈಸಸೋ, ಅಂತರಯಾಮಿ ಮುಕ್ತ ॥೪೯॥

ಮಾಯೆ, ಮಾಯೆಯಲ್ಲಿರುವ ಚಿದಾಭಾಸ, ಮಾಯಾಧಿಷ್ಠಾನ ಚೇತನ – ಇವು ಸೇರಿ ಈಶ್ವರನೆನಿಸುತ್ತದೆ.

ಪ್ರಶ್ನೆ – ಈಶ್ವರ ಸ್ವರೂಪವು ಇಷ್ಟು ಮಾತ್ರ ಹೇಳಿದರೆ ಸ್ಪಷ್ಟವಾಗಿ ತಿಳಿಯುವುದಿಲ್ಲ. ಆದುದರಿಂದ ಮತ್ತಷ್ಟು ವರ್ಣಿಸಿರಿ.

ಉತ್ತರ – ಶ್ರದ್ಧೆಯಿಂದ ಕೇಳು. ಪಂಚದಶಿ ಕರ್ತರಾದ ಶ್ರೀ ವಿದ್ಯಾರಣ್ಯ ಸ್ವಾಮಿಗಳವರು ಮಾಯೆಯಲ್ಲಿರುವ ಬುದ್ಧಿ ವಾಸನೆಯಲ್ಲಿ ಉಂಟಾಗುವ ಚೈತನ್ಯ ಪ್ರತಿಬಿಂಬವು ಈಶ್ವರನೆಂದು ಹೇಳಿದ್ದಾರೆ. ಆ ಈಶ್ವರನು

ಮೇಘಾಕಾಶಕ್ಕೆ ಸಮಾನ ಮೇಘಕ್ಕೆ ಸಮಾನವಾದುದು ಮಾಯೆ. ಮೇಘ ಜಲಕ್ಕೆ ಸಮಾನವಾದದ್ದು ಬುದ್ಧಿ ವಾಸನೆ. ಈ ಬುದ್ಧಿವಾಸನೆ ರೂಪ ಜಲ ದಲ್ಲಿ ಇರುವ ಆಕಾಶಕ್ಕೆ ಪ್ರತಿಬಿಂಬ ಸಮಾನವಾದ ಚೈತನ್ಯ ಪ್ರತಿಬಿಂಬವು ಈಶ್ವರನೆಂದು ಹೇಳಿದರೆ ಯಾವ ದೋಷವೂ ಇಲ್ಲ ಏಕೆಂದರೆ ಮಾಯಾ ರೂಪವಾದ ಅಜ್ಞಾನವೇ ಈಶ್ವರ ಭಾವಕ್ಕೆ ಉಪಾಧಿಯಾಗಿದ್ದರೂ ಆ ಬುದ್ಧಿ ವಾಸನೆಯು ಅಜ್ಞಾನದಲ್ಲಿ ಅಂತರ್ಗತವಾಗಿದೆ ಸರ್ವಜ್ಞತ್ವಕ್ಕೆ ಅಜ್ಞಾನದ ಸತ್ವಗುಣವೇ ಕಾರಣ.

ಆ ಸ್ವರೂಪವು ಜ್ಞಾನರೂಪ ಬುದ್ಧಿಗೆ ಉಪಾದಾನ ಕಾರಣವಾದುದ ರಿಂದ ಸುಷುಪ್ತಿ ರೂಪವಾದ ಪ್ರಳಯದಲ್ಲಿ ಈಶ್ವರನ ಬುದ್ಧಿಯು ಸತ್ವಗುಣದ ದ್ವಾರಾ ಪರಮ ಉಪಾದಾನವಾದ ಅಜ್ಞಾನದಲ್ಲಿ ಲಯವಾಗಿ ಉಪಾದಾನ ರೂಪವೇ ಆಗುತ್ತದೆ ಉಪಾದಾನ ರೂಪವಾಗಿರುವುದೇ ಸೂಕ್ಷ್ಮ ಸಂಸ್ಕಾರ ವೆಂದು ಹೇಳಿಸಿಕೊಳ್ಳುತ್ತದೆ. ಈ ಸಂಸ್ಕಾರಕ್ಕೆ ವಾಸನೆ ಎಂದು ಹೆಸರು ಈ ವಿಧವಾಗಿ ಅಜ್ಞಾನದಲ್ಲಿರುವ ಸತ್ವಾಂಶಕ್ಕೆ ಅನ್ಯವಾದ ವಾಸನೆ ಇಲ್ಲದಿರುವು ದರಿಂದ ಬುದ್ಧಿವಾಸನಾ ಎಂಬ ಶಬ್ದಕ್ಕೆ ಅಜ್ಞಾನದಲ್ಲಿರುವ ಸತ್ವಾಂಶವೇ ಎಂದು ಗ್ರಹಿಸಬೇಕು.

ಆ ಈಶ್ವರನು ಮೇಘಾಕಾಶಕ್ಕೆ ಸಮಾನ. ಅಲ್ಲದೆ ಆ ಈಶ್ವರನು ಅಂತ ರ್ಯಾಮಿ ಅಂದರೆ ಸರ್ವರ ಅಂತರ್ಯದಲ್ಲಿದ್ದು ಪ್ರೇರೇಪಿಸುತ್ತಿರುತ್ತಾನೆ. ಆ ಈಶ್ವರನು ಸದಾ ಮುಕ್ತನು. ಸದಾ ಮುಕ್ತತ್ವಕ್ಕೆ ಅವನಿಗೆ ತನ್ನ ಸ್ವರೂಪ ದಲ್ಲಿ ಆವರಣ ಇಲ್ಲದುದೇ ಕಾರಣ. ಆವರಣವು ಇಲ್ಲದಿರುವುದರಿಂದ ಜನನ ಮರಣಾದಿ ಬಂಧ ಪ್ರತೀತಿಯು ಅವನಿಗಿಲ್ಲ. ಆ ಈಶ್ವರನ ವಿಶೇಷಣವು ಮಾಯೆಯಲ್ಲಿರುವ ಶುದ್ಧ ಸತ್ವವಾದುದರಿಂದ ಸರ್ವ ಪದಾರ್ಥವನ್ನು ತಿಳಿ ಯುವ ಅವನು ಸರ್ವಜ್ಞ.

ಪ್ರಶ್ನೆ – ಶುದ್ಧ ಸತ್ವಗುಣ ಎಂದರೇನು ?

ಉತ್ತರ – ತಮೋಗುಣ, ರಜೋಗುಣಗಳನ್ನು ದಬಾಯಿಸಿ ತನ್ನ ಅಧೀನ ದಲ್ಲಿ ಇಟ್ಟುಕೊಂಡಿರುವುದೇ ಶುದ್ಧ ಸತ್ವಗುಣ. ಇದಕ್ಕೆ ಶಾಸ್ತ್ರದಲ್ಲಿ "ಶುದ್ಧ ಸತ್ವ" ಎನ್ನುತ್ತಾರೆ.

ಉದಾ – ಬ್ರಾಹ್ಮಣನಾದ ಒಬ್ಬ ರಾಜನು ಕ್ಷತ್ರಿಯ, ಶೂದ್ರ ಜಾತಿ

ಯವರಾದ ಇಬ್ಬರು ಮಂತ್ರಿಗಳಿಗೆ ಅಧೀನನಾಗದೆ ಅವರಿಬ್ಬರನ್ನೂ ತನ್ನ ಅಧೀನದಲ್ಲಿ ಇಟ್ಟುಕೊಂಡು ಆಳುವಂತೆ, ರಜೋಗುಣ ತಮೋಗುಣಗಳಿಗೆ ಅಧೀನವಾಗದೆ ಆ ಎರಡನ್ನೂ ತನ್ನ ಅಧೀನದಲ್ಲಿ ಇಟ್ಟುಕೊಂಡಿರುವುದೇ ಶುದ್ಧ ಸತ್ವಗುಣ.

ಸತ್ವಗುಣದಿಂದ ಜ್ಞಾನೋತ್ಪತ್ತಿಯಾಗುತ್ತದೆ. ಈ ಕಾರಣದಿಂದ ಅದು ಪ್ರಕಾಶ ಸ್ವಭಾವವುಳ್ಳದ್ದಾಗಿದೆ. ಈ ರೀತಿ ಸತ್ವಗುಣವುಳ್ಳ ಮಾಯೆ ಯಲ್ಲಿ ಇರುವ ಚಿದಾಭಾಸನಿಗೆ ತನ್ನ ಸ್ವರೂಪದ ಸಂಬಂಧವಾಗಿಯೂ, ಅನ್ಯ ಪದಾರ್ಥಗಳ ಸಂಬಂಧವಾಗಿಯೂ ಆವರಣವು ಸಂಭವಿಸಲಾರದು. ಈ ಕಾರಣದಿಂದಲೇ ಅವನು ನಿತ್ಯ ಮುಕ್ತನು ಮತ್ತು ಸರ್ವಜ್ಞನು.

ಸಾರಾಂಶವೇನೆಂದರೆ – ಸ್ವರೂಪಾವರಣ ಇಲ್ಲದುದರಿಂದ ನಿತ್ಯ ಮುಕ್ತನು ಇತರ ಪದಾರ್ಥಗಳ ಆವರಣ ಇಲ್ಲದುದರಿಂದ ಸರ್ವಜ್ಞನು.

ಜೀವನಲ್ಲಿಯೂ, ಈಶ್ವರನಲ್ಲಿಯೂ ಇರುವ ಅಧಿಷ್ಠಾನ ಚೇತನವು ಬಂಧ ಮೋಕ್ಷ ಭೇದವಿಲ್ಲದ್ದು. ಮತ್ತು ಆಕಾಶದಂತೆ ಏಕ ರಸವಾಗಿರುವುದು. ಆದರೂ ಆಭಾಸಾಂಶದಲ್ಲಿ ಅಂದರೆ ಉಪಾಧಿಯಲ್ಲಿ ಬಂಧ, ಮೋಕ್ಷಗಳು ಸಂಭವಿಸುತ್ತವೆ.

ಪ್ರಶ್ನೆ – ಆ ಬಂಧ ಮೋಕ್ಷ ಪ್ರತೀತಿಯು ಯಾರಿಗೆ ಮತ್ತು ಎಲ್ಲಿ ಆಗುತ್ತದೆ ?

ಉತ್ತರ – ಅದು ಆಭಾಸನಿಗೆ ಆಗುತ್ತದೆ ಆಭಾಸನಿಗೆ ಭ್ರಾಂತಿ ಯಿಂದ ಅಧಿಷ್ಠಾನದಲ್ಲಿ ಪ್ರತೀತಿಯಾಗುತ್ತದೆ.

ಪ್ರಶ್ನೆ – ಆಭಾಸನಿಗೆ ಬಂಧ, ಮೋಕ್ಷಗಳಾಗುವುದಾದರೆ ಈಶ್ವರನೂ ಆಭಾಸನಲ್ಲವೇ ? ಅವನಲ್ಲಿಯೂ ಬಂಧ ಮೋಕ್ಷಗಳು ಇರುತ್ತವೆಂದು ಹೇಳ ಬೇಕಾಗಿತ್ತಲ್ಲವೇ ? ಅವನನ್ನು ಕುರಿತು ಹಿಂದೆ ನಿತ್ಯಮುಕ್ತನೆಂದು ಹೇಳಿದ್ದಕ್ಕೆ ವಿರೋಧವಲ್ಲವೇ ?

ಉತ್ತರ – ಯಾವ ಚಿದಾಭಾಸನಿಗೆ ಆವರಣ ಇರುವುದೋ ಅವನಿಗೇ ಬಂಧ ಯಾವ ಚಿದಾಭಾಸನಲ್ಲಿ ಆವರಣವಿಲ್ಲವೋ ಅವನು ಮುಕ್ತ. ಈಶ್ವರನಲ್ಲಿ ಆವರಣವು ಇಲ್ಲದುದರಿಂದ ಈಶ್ವರ ಸಂಬಂಧಿಯಾದ ಚಿದಾಭಾಸನು ನಿತ್ಯಮುಕ್ತ. ಜೀವನಲ್ಲಿ ಆವರಣವಿರುವುದರಿಂದ ಜೀವ ಸಂಬಂಧಿ ಚಿದಾ

ಭಾಸನು ಬದ್ಧ ಅವಿದ್ಯಾಂಶದಲ್ಲಿರುವ ಚೈತನ್ಯಾಭಾಸನಾದ ಜೀವನಿಗೆ ಆವರಣವು ಸ್ವಭಾವ ಸಿದ್ಧವಾಗಿದೆ. ಮಾಯೆ, ಅಜ್ಞಾನ, ಅವಿದ್ಯೆ ಇವು ಮೂರು ಒಂದೇ ವಸ್ತುವಿಗೆ ಹೆಸರಾಗಿದ್ದರೂ ಶುದ್ಧ ಸತ್ವಗುಣದ ಪ್ರಧಾನ ದಿಂದ ಮಾಯೆ ಎನಿಸಿಕೊಳ್ಳುತ್ತದೆ. ಮಲಿನ ಸತ್ವಗುಣ ಪ್ರಧಾನತೆಯಿಂದ ಅಜ್ಞಾನ ಅಥವಾ ಅವಿದ್ಯೆ ಎನಿಸಿಕೊಳ್ಳುತ್ತದೆ

ಪ್ರಶ್ನೆ – ಮಲಿನ ಸತ್ವಗುಣ ಎಂದರೇನು ?

ಉತ್ತರ – ರಜೋಗುಣ, ತಮೋಗುಣಗಳಿಗೆ ಅಧೀನವಾದ ಸತ್ವ ಗುಣವು ಮಲಿನ ಸತ್ವಗುಣವೆಂದು ಹೇಳಿಸಿಕೊಳ್ಳುತ್ತದೆ.

ಉದಾಹರಣೆ – ಹೇಗೆಂದರೆ ಶೂದ್ರ ಜಾತಿಯವರಾದ ಇಬ್ಬರು ರಾಜ ಪುತ್ರರಿಗೆ ಬ್ರಾಹ್ಮಣ ಜಾತಿಯ ಮಂತ್ರಿಯು ಅಧೀನನಾಗಿರುವಂತೆ, ರಜೋ ಗುಣ, ತಮೋಗುಣಗಳಿಗೆ ಅಧೀನವಾಗಿರುವ ಸತ್ವಗುಣವು ಮಲಿನ ಸತ್ವಗುಣ ವೆನಿಸಿಕೊಳ್ಳುತ್ತದೆ.

ತಮೋಗುಣ, ರಜೋಗುಣ ಅಧಿಕವಾದ ಅವಿದ್ಯೆಯಲ್ಲಿ ಇರುವ ಜೀವ ರೂಪನಾದ ಆಭಾಸನಿಗೆ ಆ ಅವಿದ್ಯೆಯು ಸ್ವರೂಪ ಆವರಣವನ್ನು ಉಂಟು ಮಾಡುತ್ತದೆ ಈ ಕಾರಣದಿಂದ ಜೀವನಿಗೇ ಬಂಧವಿದೆ, ಈಶ್ವರನಲ್ಲಿ ಬಂಧ ವಿಲ್ಲವೆಂದು ಹೇಳಿದ್ದಾಯಿತು.

ಅಧಿಷ್ಠಾನ ಚೈತನ್ಯ ಸಹಿತವಾದ ಮಾಯೆಯಲ್ಲಿ ಇರುವ ಆಭಾಸರೂಪ ನಾದ ಈಶ್ವರನು ''ತತ್ತ್ವಮಸಿ'' ಮಹಾವಾಕ್ಯದಲ್ಲಿರುವ ''ತತ್'' ಪದಕ್ಕೆ ವಾಚ್ಯನು ಮತ್ತು ಯಾವ ಉಪಾಧಿಯೂ ಇಲ್ಲದ ಕೇವಲ ಅಧಿಷ್ಠಾನವಾದ ಚೈತನ್ಯವು ''ತತ್'' ಪದಕ್ಕೆ ಲಕ್ಷ್ಯವು.

ಆ "ತತ್" ಪದ ವಾಚ್ಯನಾದ ಈಶ್ವರನೇ ಜಗದುತ್ಪತ್ತಿ, ಪಾಲನ, ಸಂಹಾರವೆಂಬ ಕ್ರಿಯೆಗಳಿಗೆ ಕರ್ತನು. ಇದೇ ಸರ್ವ ಶಾಸ್ತ್ರಗಳ ಸಿದ್ಧಾಂತ

ಈಶ್ವರ ಸಂಬಂಧವಾದ ನಿರುಪಾಧಿಕವಾದ ಚೈತನ್ಯಾಂಶವು ಆಕಾಶದಂತೆ ಅಸಂಗವಾಗಿದೆ ಉಪಾಧಿಗತನಾದ ಆಭಾಸನು ಜಗದುತ್ಪತ್ತ್ಯಾದಿ ಕರ್ಮಗಳಿಗೆ ಕರ್ತನಾಗಿದ್ದಾನೆ. ಅವನೇ ಸರ್ವಜ್ಞ. ಅವನೇ ಭಕ್ತ ಜನರ ಮೇಲೆ ಅನುಗ್ರಹ ಮಾಡತಕ್ಕವನು. ಐಶ್ವರ್ಯವು ಆಭಾಸನಲ್ಲಿಯೇ ಸಂಭವಿಸುತ್ತದೆ

ಚೈತನ್ಯವು ಸದಾ ಏಕ ರಸವಾದುದರಿಂದ, ಅಸಂಗವಾದುದರಿಂದ ಅದರಲ್ಲಿ ಸತ್ತಾ ಸ್ಫೂರ್ತಿಯನ್ನು ಬಿಟ್ಟರೆ ಮತ್ತಾವ ಐಶ್ವರ್ಯವೂ ಇರುವುದಿಲ್ಲ.

ಸಂಬಂಧ – ಈಶ್ವರ ಸ್ವರೂಪ ವರ್ಣನೆಯು ಮುಗಿದ ಮೇಲೆ ಮುಂದಿನ ದೋಹಾದಲ್ಲಿ ನಿರ್ವಿಕಾರ ಚೇತನವಾದ ಪರಬ್ರಹ್ಮದ ಸ್ವರೂಪ ವರ್ಣನೆಯು ಪ್ರತಿಪಾದಿಸಲ್ಪಟ್ಟಿದೆ.

## ಬ್ರಹ್ಮ ಸ್ವರೂಪ ವರ್ಣನೆ

ದೋಹಾ – ಅಂತರ ಬಾಹರ ಏಕರಸ, ಜೋ ಚೇತನ ಭರಪೂರ ।
ವಿಭುನಭ–ಸಮಸೊ ಬ್ರಹ್ಮ ಹೈ, ನಹಿನೆರೆ ನಹಿ ದೂರ ॥೯೦॥

ಬ್ರಹ್ಮಾಂಡದ ಒಳಗೆ ಹೊರಗೆ ಮಹಾಕಾಶದಂತೆ ಯಾವುದು ತುಂಬಿರುವುದೋ ಅದಕ್ಕೆ ಬ್ರಹ್ಮವೆನ್ನುತ್ತಾರೆ ಅದು ದೂರವೂ ಅಲ್ಲ, ಹತ್ತಿರವೂ ಅಲ್ಲ. ಇದು ಈ ದೋಹದ ಅರ್ಥ

ವಿವರಣೆ – ಈ ದೋಹಾದಲ್ಲಿ ಬ್ರಹ್ಮಕ್ಕೆ ಎರಡು ಲಕ್ಷಣಗಳನ್ನು ಹೇಳಿದೆ. ೧. ಯಾವುದು ಬ್ರಹ್ಮಾಂಡದ ಒಳಗೂ ಹೊರಗೂ ತುಂಬಿರುವುದೋ ಇದು ಒಂದನೇ ಲಕ್ಷಣ. ೨. ಅದು ದೂರವೂ ಅಲ್ಲ, ಹತ್ತಿರವೂ ಅಲ್ಲ. ಇದು ಎರಡನೆ ಲಕ್ಷಣ.

ಪ್ರಶ್ನೆ – ಆ ಬ್ರಹ್ಮವು ದೂರವೂ ಅಲ್ಲ, ಹತ್ತಿರವೂ ಅಲ್ಲ ಎಂದರೇನು ?

ಉತ್ತರ – ವಸ್ತುವು ತನಗಿಂತ ಭಿನ್ನವಾಗಿದ್ದು ದೇಶರೂಪ ಉಪಾಧಿಯುಳ್ಳದ್ದಾದರೆ ಅದು ಸಮೀಪ ಅಥವಾ ದೂರವೆಂದು ಹೇಳಬಹುದು. ಬ್ರಹ್ಮವು ತನಗಿಂತ ಭಿನ್ನ ಪದಾರ್ಥವಲ್ಲ. ಅದು ಸರ್ವ ಪದಾರ್ಥಗಳಿಗೂ ಆತ್ಮವಾದುದರಿಂದ ದೇಶವೇ ಮೊದಲಾದ ಸಕಲ ಉಪಾಧಿಗಳಿಲ್ಲದ್ದು. ಆದುದರಿಂದ ಅದು ಸಮೀಪ ಅಲ್ಲ, ದೂರವೂ ಅಲ್ಲ.

ಪ್ರಶ್ನೆ – ಬ್ರಹ್ಮ ಎಂಬ ಪದಕ್ಕೆ ಅರ್ಥವೇನು ?

ಉತ್ತರ – ಬ್ರ ಹ್ಮ ಎಂದರೆ ದೊಡ್ಡದು. ದೊಡ್ಡದೆಂದರೆ ಎಷ್ಟು ದೊಡ್ಡದು ? ನೀನು ಎಷ್ಟು ದೊಡ್ಡದೆಂದು ಯೋಚಿಸುತ್ತೀಯೋ ಅದಕ್ಕಿಂತಲೂ ದೊಡ್ಡದು. ಅಂದರೆ ಅದು ವ್ಯಾಪಕ ಪದಾರ್ಥವೆಂದರ್ಥ

ಪ್ರಶ್ನೆ – ವ್ಯಾಪಕವೆಂದರೆ ಅದರಲ್ಲಿ ತಿಳಿದುಕೊಳ್ಳಬೇಕಾದ ವಿಷಯಗಳೆಷ್ಟು?

ಉತ್ತರ – ೧. ಸಾಪೇಕ್ಷಕ ವ್ಯಾಪಕ; ೨ ನಿರಪೇಕ್ಷಕ ವ್ಯಾಪಕ ಎಂದು ಎರಡು ವಿಧ

ಪ್ರಶ್ನೆ – ಸಾಪೇಕ್ಷಕ ವ್ಯಾಪಕವೆಂದರೇನು ?

ಉತ್ತರ – ಯಾವುದು ಕೆಲವು ಪದಾರ್ಥಗಳ ಅಪೇಕ್ಷೆಯಿಂದ ವ್ಯಾಪಕವಾಗಿದ್ದು ಮತ್ತೆ ಕೆಲವು ಪದಾರ್ಥಗಳ ಅಪೇಕ್ಷೆಯಿಂದ ಪರಿಚ್ಛಿನ್ನವಾಗಿರುವುದೋ ಅದು ಸಾಪೇಕ್ಷಕ ವ್ಯಾಪಕವೆಂದು ಹೇಳಿಸಿಕೊಳ್ಳುತ್ತದೆ.

ಉದಾ – ಪೃಥ್ವಿ ಮೊದಲಾದ ಪದಾರ್ಥಗಳ ಅಪೇಕ್ಷೆಯಿಂದ ಮಾಯೆ ವ್ಯಾಪಕ ಮತ್ತು ಚೈತನ್ಯದ ಅಪೇಕ್ಷೆಯಿಂದ ಪರಿಚ್ಛಿನ್ನ

ಪ್ರಶ್ನೆ – ನಿರಪೇಕ್ಷಕ ವ್ಯಾಪಕವೆಂದರೇನು ?

ಉತ್ತರ – ಯಾವ ಪದಾರ್ಥವು ಸರ್ವ (ವಸ್ತುಗಳ) ಪದಾರ್ಥಗಳ ಅಪೇಕ್ಷೆಯಿಂದ ವ್ಯಾಪಕವಾಗಿರುವುದೋ ಅದಕ್ಕೆ ನಿರಪೇಕ್ಷಕ ವ್ಯಾಪಕ ಎನ್ನುವರು. ಅಂತಹದು ಪರಬ್ರಹ್ಮ ಒಂದೇ ಏಕೆಂದರೆ ಚೈತನ್ಯಕ್ಕೆ ಸಮಾನವಾದ, ಇಲ್ಲವೇ ಚೈತನ್ಯಕ್ಕೆ ಅಧಿಕವಾದ ಯಾವ ಪದಾರ್ಥವೂ ಇಲ್ಲದ್ದರಿಂದ ಆ ಚೈತನ್ಯವು ಸರ್ವಕ್ಕಿಂತಲೂ ವ್ಯಾಪಕವಾಗಿದೆ.

ಪ್ರಶ್ನೆ – ಇದರಿಂದ ತಿಳಿದುಕೊಳ್ಳಬೇಕಾದ ಅಂಶವೇನು ?

ಉತ್ತರ – ಮೇಲೆ ಹೇಳಿದ ಎರಡು ಪ್ರಕಾರದ ವ್ಯಾಪಕತೆಯಿಂದ ಕೂಡಿದ ವಸ್ತು ಬ್ರಹ್ಮ ಪದಕ್ಕೆ ವಾಚ್ಯಾರ್ಥ. ಈ ವಿಶಿಷ್ಟ ತತ್ತ್ವದಲ್ಲಿರುವ ಮಾಯಾಂಶವು ಸಾಪೇಕ್ಷಕ ವ್ಯಾಪಕ. ಮತ್ತು ಚೈತನ್ಯಾಂಶವು ನಿರಪೇಕ್ಷಕ ವ್ಯಾಪಕ

ಮಾಯೆಯು ಚೈತನ್ಯದ ಏಕ ದೇಶದಲ್ಲಿರುತ್ತದೆ.

ಪ್ರಶ್ನೆ – ಹಾಗೆಂದರೇನು ?

ಉತ್ತರ – ಘಟವನ್ನು ಹುಟ್ಟಿಸುವ ಶಕ್ತಿಯು ಎಲ್ಲಾ ಮಣ್ಣಿನಲ್ಲಿಯೂ ಇಲ್ಲ ಏಕ ದೇಶದಲ್ಲಿ ಅಂದರೆ ಜಿಗಟು ಮಣ್ಣಿನಲ್ಲಿ ಮಾತ್ರ ಕಂಡುಬರುತ್ತದೆ. ಇದರಂತೆ ಮಾಯೆಯು ಬ್ರಹ್ಮದಲ್ಲಿ ಸರ್ವತ್ರ ವ್ಯಾಪಕವಾಗದೆ ಏಕ ದೇಶದಲ್ಲಿ ಮಾತ್ರ ಇರುತ್ತದೆ.

ಪ್ರಶ್ನೆ – ಆ ಏಕ ದೇಶದಲ್ಲಿರುವ ಮಾಯೆಯಲ್ಲಿ ಎಷ್ಟು ಪದಾರ್ಥಗಳಿವೆ ?

ಉತ್ತರ – ಎಲ್ಲಾ ಪದಾರ್ಥಗಳೂ ಅದರಲ್ಲಿಯೇ ಇವೆ ಅಂದರೆ ಈಶ್ವರ-ಜೀವರುಗಳು, ಘಟಪಟಾದಿ ಸಕಲ ಪ್ರಪಂಚವೂ ಇವೆ

ಮಾಯಾ ವಿಶಿಷ್ಟ ಚೈತನ್ಯಕ್ಕಿಂತ ಶುದ್ಧ ಚೈತನ್ಯದ ವ್ಯಾಪಕತೆಯು ಅಧಿಕ. ಆದುದರಿಂದ ಶುದ್ಧ ಚೈತನ್ಯದಲ್ಲಿಯೇ ನಿರಪೇಕ್ಷಕ ವ್ಯಾಪಕತೆ ಸಿದ್ಧಿಸುತ್ತದೆ. ಇದು ಮಾಯಾ ವಿಶಿಷ್ಟ ಚೈತನ್ಯದಲ್ಲಿ ಸಿದ್ಧಿಸುವುದಿಲ್ಲ ಆದರೂ ಆ ಮಾಯಾ ವಿಶಿಷ್ಟ ಚೈತನ್ಯವು ಪಾರಮಾರ್ಥಿಕ ದೃಷ್ಟಿಯಿಂದ ಶುದ್ಧ ಚೈತನ್ಯಕ್ಕೆ ಭಿನ್ನವಲ್ಲ. ಅದೂ ಸಹ ಶುದ್ಧ ಚೈತನ್ಯವೇ. ಆದುದರಿಂದಲೇ ಕೆಲವು ಗ್ರಂಥಗಳಲ್ಲಿ ಮಾಯಾ ವಿಶಿಷ್ಟ ಚೈತನ್ಯದಲ್ಲಿಯೂ ಸಹ ನಿರಪೇಕ್ಷಕ ವ್ಯಾಪಕತೆ ಇರುವುದೆಂದು ಹೇಳಿದೆ.

ಈ ಪ್ರಕಾರ ಮಾಯಾ ವಿಶಿಷ್ಟ ಚೈತನ್ಯವು ಬ್ರಹ್ಮಪದಕ್ಕೆ "ವಾಚ್ಯ" ಮಾಯಾರಹಿತ ಶುದ್ಧ ಚೈತನ್ಯವು ಬ್ರಹ್ಮಪದಕ್ಕೆ "ಲಕ್ಷ್ಯ".

ಈ ಪ್ರಕಾರ ನೋಡಿದರೆ, ಈಶ್ವರ ಶಬ್ದ ಮತ್ತು ಬ್ರಹ್ಮ ಶಬ್ದ – ಈ ಎರಡಕ್ಕೂ ಸಮಾನ ಅರ್ಥವು ಪ್ರತೀತಿಯಾಗುತ್ತದೆ. ಸ್ಥೂಲ ದೃಷ್ಟಿಗೆ ಭಿನ್ನ ಪದಾರ್ಥದಂತೆ ಪ್ರತೀತಿಯಾದರೆ ಅದು (ಸರಿಯಾದುದಲ್ಲ) ನಿಜವಾದುದಲ್ಲ. ಇದೇ ವಿಷಯವಾಗಿ ಪುರಾಣಗಳಲ್ಲಿ ಅನೇಕ ಸಾರಿ "ಈಶ್ವರ" ಎಂಬ ಪದಕ್ಕೆ ಬದಲಾಗಿ "ಬ್ರಹ್ಮ" ಎಂಬ ಪದದ ವ್ಯವಹಾರವು ಕಂಡುಬರುತ್ತದೆ ಆದರೂ ಬ್ರಹ್ಮ ಶಬ್ದಕ್ಕೆ ಅಧಿಕ ಸ್ಥಾನದಲ್ಲಿ ಲಕ್ಷ್ಯಾರ್ಥವೇ ಹೇಳಲ್ಪಟ್ಟಿದೆ. ಈಶ್ವರ ಶಬ್ದಕ್ಕೆ ಅನೇಕ ಸ್ಥಳಗಳಲ್ಲಿ ವಾಚ್ಯಾರ್ಥವೇ ಹೇಳಲ್ಪಟ್ಟಿದೆ ಎಲ್ಲೋ ಕೆಲವು ಸ್ಥಳಗಳಲ್ಲಿ ಲಕ್ಷ್ಯಾರ್ಥವು ಹೇಳಲ್ಪಟ್ಟಿದೆ. ಆದರೂ ಬಹಳ ಜನ ಪಂಡಿತರು ಬ್ರಹ್ಮಪದ ಶಬ್ದಾರ್ಥವನ್ನು ಈಶ್ವರ ಪದ ಶಬ್ದಾರ್ಥಕ್ಕಿಂತ ಭಿನ್ನವಾಗಿ ತಿಳಿದಿದ್ದಾರೆ. ಇದು ಕೇವಲ ಶಬ್ದ ಮಹಾತ್ಮೆ. ಈ ಶಬ್ದ ಮಹಾತ್ಮೆಯನ್ನು ಕುರಿತು ಒಂದು ಉದಾಹರಣೆಯನ್ನು ಕೇಳಿರಿ.

ಉದಾಹರಣೆ – ಸಂಗ್ರಾಮದಲ್ಲಿ ಗೆದ್ದು ಲಂಕಾ ಪಟ್ಟಣದಲ್ಲಿ ವಾಸಿಸುತ್ತಿದ್ದಾಗ ಒಂದು ದಿವಸ ಶ್ರೀರಾಮಚಂದ್ರನು ಸಮುದ್ರವನ್ನು ದಾಟಿ ಶ್ರೀ

ರಾಮೇಶ್ವರಕ್ಕೆ ಬಂದ ಮೇಲೆ ಒಬ್ಬನೇ ಸಾಯಂಕಾಲ ತಿರುಗುತ್ತಾ, ತಿರುಗುತ್ತಾ ಸಮುದ್ರದಲ್ಲಿ ಕಟ್ಟಿದ ಸೇತು ಬಂಧನವನ್ನು ನೋಡಿ ವಿಸ್ಮಯಾವಿಶಿಷ್ಟನಾಗಿ ಮನಸ್ಸಿನಲ್ಲಿ ಅಹಹಾ ! ನನ್ನ ನಾಮ ಮಹಾತ್ಮೆಯು ಅನಂತವಾದುದು ಸ್ವಾಭಾವಿಕವಾಗಿ ನೀರಿನಲ್ಲಿ ಮುಳುಗುವ ಕಲ್ಲುಗಳೂ ಸಹ ನೀರಿನ ಮೇಲೆ ತೇಲುತ್ತವೆ ನನ್ನ ನಾಮ ಮಹಾತ್ಮೆಯೇ ಇಷ್ಟಿದ್ದರೆ ನನ್ನ ಹಸ್ತ ಮಹಾತ್ಮೆಯು ಎಷ್ಟಿರಬೇಕು ? ಸಹಜವಾಗಿ ನಾಮ ಮಹಾತ್ಮೆಗಿಂತಲೂ ಅದು ಹೆಚ್ಚಾಗಿರಬೇಕು ನಾಮ ಮಹಾತ್ಮೆಯಿಂದ ಕಲ್ಲು ನೀರಿನಲ್ಲಿ ತೇಲಿದರೆ, ಹಸ್ತ ಮಹಾತ್ಮೆಯಿಂದ ಆ ಕಲ್ಲು ನೀರಿನ ಮೇಲೆ ಬಹು ದೂರ ನಿಂತುಕೊಳ್ಳಬಹುದೇನೋ ! ಇದನ್ನು ಪ್ರತ್ಯಕ್ಷವಾಗಿ ನಿಶ್ಚಯಿಸಲು ಒಂದು ಸಣ್ಣ ಕಲ್ಲನ್ನು ಕೈಯಿಂದ ತೆಗೆದುಕೊಂಡು ನೀರಿನಲ್ಲಿ ಹಾಕಿದರೆ ಅದು ತಕ್ಷಣ ಮುಳುಗಿ ಹೋಯಿತು ! ಆಗ ಲಜ್ಜೆಯಿಂದ ಈ ಚರಿತ್ರೆಯನ್ನು ಯಾ ರಾ ದ ರೂ ನೋಡಿದರೇ ? ಎಂದು ನಾಲ್ಕೂ ದಿಕ್ಕಿಗೂ ನೋಡಲು ಆಂಜನೇಯನು ಹಿಂದೆಯೇ ನಿಂತಿದ್ದನು. ಆಗ ಶ್ರೀರಾಮನು ಖಿನ್ನ ಮುಖದಿಂದ "ಅಯ್ಯಾ, ಆಂಜನೇಯ, ಈಗ ನೀನು ನೋಡಿದ ಚರಿತ್ರೆಯನ್ನು ಯಾರಿಗಾದರೂ ಹೇಳುತ್ತೀಯಾ ?'' ಎಂದು ಕೇಳಲು ಆಂಜನೇಯನು "ಅಹುದು ಹೇಳುವೆನು'' ಎಂದನು. "ಏನೆಂದು ಹೇಳುವೆ ?'' ಎಂದು ಕೇಳಿದನು. ''ಶ್ರೀರಾಮನು ಹಾಕಿದ ಕಲ್ಲು ನೀರಿನಲ್ಲಿ ಮುಳುಗುತ್ತದೆ" ಎಂದು ಹೇಳುವೆನೆಂದನು. ಆಗ ಶ್ರೀರಾಮನು ದೀನ ಮುಖದಿಂದ ಆಂಜನೇಯನನ್ನು ಪ್ರಾರ್ಥಿಸಹತ್ತಿದನು "ಅಯ್ಯಾ, ನೀನು ಹಾಗೆ ಹೇಳಿದರೆ ನನಗೆ ದೊಡ್ಡ ಅಪಕೀರ್ತಿ ಬರುತ್ತದೆ.'' ಆಗ ಸೂಕ್ಷ್ಮ ಬುದ್ಧಿಯುಳ್ಳ ಆಂಜನೇಯನು ಪರಮ ಭಕ್ತಿಯಿಂದ "ರಾಮಭದ್ರ, ನಿನಗೆ ಅಪಕೀರ್ತಿಯು ಬಾರದಂತೆ ನೀನು ಕೈ ಬಿಟ್ಟವನಿಗೆ ಅಪಕೀರ್ತಿ ಬರುತ್ತದೆಂದು ಹೇಳುತ್ತೇನೆ" ಎಂದನು. ಅದು ಹೇಗೆ ಎಂದು ಕೇಳಲು ''ಶ್ರೀರಾಮಚಂದ್ರನು ತನ್ನ ಕೈಯಿಂದ ಯಾರನ್ನು ಬಿಡುವನೋ ಅವನು ಸಂಸಾರ ಸಮುದ್ರದಲ್ಲಿ ಮುಳುಗುತ್ತಾನೆ ಎಂದು ಹೇಳುತ್ತೇನೆ'' ಎಂದನು. ಸಾರಾಂಶವೇನೆಂದರೆ – ತನ್ನ ಭಕ್ತರನ್ನೂ, ಶತ್ರುಗಳನ್ನೂ ಪರಮಾತ್ಮನು ಉದ್ಧಾರ ಮಾಡುತ್ತಾನೆಂಬ ಸಂಗತಿಯು ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಆದರೆ ಭಕ್ತನೂ ಅಲ್ಲದ, ಶತ್ರುವೂ ಅಲ್ಲದ ಉದಾಸೀನನನ್ನು ಉದ್ಧಾರ

ಮಾಡುತ್ತಾನೆಂಬ ವಿಷಯವು ಎಲ್ಲಿಯೂ ಕಂಡುಬರುವುದಿಲ್ಲ. ಅಂದರೆ, ಉದಾಸೀನನನ್ನು ಪರಮಾತ್ಮನು ತನ್ನ ಕೈಯಿಂದ ಬಿಟ್ಟುಬಿಡುತ್ತಾನೆ ಅವನು ಭವ ಸಮುದ್ರದಲ್ಲಿ ಮುಳುಗುತ್ತಾನೆ

ಆಶೀರ್ವಾದ ನಿಮಿತ್ತದಿಂದ ಭಕ್ತರಿಗೆ ಹಸ್ತ ಸಂಬಂಧವೂ, ತಾಡನ ನಿಮಿತ್ತದಿಂದ ಶತ್ರುವಿಗೆ ಹಸ್ತ ಸಂಬಂಧವೂ ಉಂಟಾಗುತ್ತದೆಯೇ ವಿನಃ ಉದಾಸೀನನಿಗೆ ಯಾವ ಪ್ರಕಾರದ ಹಸ್ತ ಸಂಬಂಧವೂ ಉಂಟಾಗುವುದಿಲ್ಲ. ಶ್ರೀರಾಮಚಂದ್ರನು ಕೈಯಿಂದ ಕಲ್ಲನ್ನು ಬಿಟ್ಟನು ಎಂದರೆ ಉದಾಸೀನನನ್ನು ಕೈಬಿಟ್ಟನೆಂದರ್ಥ. ಅವನು ಕ್ಷಾರ ಸಮುದ್ರದಲ್ಲಿ ಬಿದ್ದ ಕಲ್ಲು ಮುಳುಗಿದಂತೆ ಭವ ಸಮುದ್ರದಲ್ಲಿ ಮುಳುಗುತ್ತಿರುತ್ತಾನೆ. ಇಲ್ಲಿ ಆಂಜನೇಯನ ಬುದ್ಧಿ ಚಾತುರ್ಯವು ಸ್ತೋತ್ರಾರ್ಹವಾಗಿದೆ.

ಅರ್ಥವು ಒಂದೇ ಆಗಿದ್ದರೂ ಶಬ್ದ ಮಹಾತ್ಮೆಯಿಂದ ಅಭಿಪ್ರಾಯವು ಬೇರೆ ಬೇರೆಯಾಗಿ ಕಂಡುಬರುತ್ತದೆ. ಮಾಯಾ ವಿಶಿಷ್ಟ ಚೈತನ್ಯಕ್ಕೆ ಅರ್ಥ ಒಂದೇ ಆದರೂ ಬ್ರಹ್ಮ ಶಬ್ದದ ಮಹಾತ್ಮೆಯಿಂದ ಅಭಿಪ್ರಾಯವು ಬೇರೆ ಬೇರೆ ಎಂದು ಕಂಡುಬರುತ್ತದೆ

ಸಂಬಂಧ – ಮುಂದಿನ ದೋಹಾದಲ್ಲಿ ಕೂಟಸ್ಥನು ಸ್ವಯಂಪ್ರಕಾಶ ನೆಂತಲೂ, ಆಭಾಸನು ಭೋಗಿ ಎಂತಲೂ ಪ್ರತಿಪಾದಿಸಲ್ಪಡುತ್ತದೆ.

ದೋಹಾ – ಚತುರ್ಭಾಂತಿ ಚೇತನ ಕಹ್ಯೋ, ತಾಮೈ ಮಿಥ್ಯಾ ಜೀವ ।
ಪುನ್ಯಪಾಪ ಫಲ ಭೋಗಮೈ, ಚಿತ ಕೂಟಸ್ಥ ಸುಸೀವ ॥೯೧॥

ತಾತ್ಪರ್ಯ – ಹೇ ಶಿಷ್ಯನೇ, ನಾನು ಹೇಳಿದ ನಾಲ್ಕು ವಿಧಗಳಾದ ಚೇತನದಲ್ಲಿ ಜೀವನು ಮಿಥ್ಯೆ. ಅವನೇ ಪುಣ್ಯ ಪಾಪಗಳ ಫಲಗಳನ್ನು ಭೋಗಿಸುತ್ತಾನೆ. ಕೂಟಸ್ಥ ಚೇತನವು ಶಿವರೂಪವಾಗಿದೆ.

ವಿವರಣೆ – ಮೇಲೆ ಹೇಳಿದ ನಾಲ್ಕು ವಿಧವಾದ ಚೇತನಗಳಲ್ಲಿ ಜೀವನ ಸ್ವರೂಪದಲ್ಲಿ ಅಂತರ್ಗತವಾದ ಮಿಧ್ಯ ಆಭಾಸಾಂಶವು ಪುಣ್ಯ ಪಾಪಗಳನ್ನು ಮಾಡುತ್ತದೆ ಮತ್ತು ಆ ಪುಣ್ಯಪಾಪ ಕರ್ಮಗಳ ಫಲಗಳಾದ ಸುಖ

ದುಃಖಗಳನ್ನು ಭೋಗಿಸುತ್ತದೆ. ಮತ್ತು ಜೀವ ಸ್ವರೂಪದಲ್ಲಿ ಅಂತರ್ಗತವಾದ ಕೂಟಸ್ಥ ಚೈತನ್ಯವು ಕೇವಲ ಶಿವರೂಪವಾಗಿದೆ. ಅಂದರೆ ಮಂಗಳ ಸ್ವರೂಪವಾಗಿದೆ

ಪ್ರಶ್ನೆ – ಈ ರೀತಿ ಜೀವ ಮತ್ತು ಕೂಟಸ್ಥನ ಸ್ವರೂಪವನ್ನು ತಿಳಿಯುವುದರಿಂದ ಆಗುವ ಪ್ರಯೋಜನವೇನು?

ಉತ್ತರ – ಶಿಷ್ಯನೇ, ಕೊನೆಯ ತೀರ್ಮಾನವನ್ನು ಕೇಳು ನೀನು ಹಿಂದೆ "ಬುದ್ಧಿ ರೂಪ ವೃಕ್ಷದಲ್ಲಿ ಎರಡು ಪಕ್ಷಿಗಳಿರುತ್ತವೆ. ಒಂದು ಪರಮಾತ್ಮ, ಎರಡನೆಯದು ಜೀವ" ಎಂದು ಆಕ್ಷೇಪಣೆಯನ್ನು ಮಾಡಿದ್ದಿಯಷ್ಟೆ. ಆ ಆಕ್ಷೇಪಣೆಗೆ ಸಮಾಧಾನವೇನೆಂದರೆ, ಬುದ್ಧಿ ರೂಪ ವೃಕ್ಷದಲ್ಲಿರುವ ಎರಡು ಪಕ್ಷಿಗಳಲ್ಲಿ ಒಂದು ಪರಮಾತ್ಮ, ಒಂದು ಜೀವನೆಂದು ಅರ್ಥ ಮಾಡಕೂಡದು. ಒಂದು ಕೂಟಸ್ಥ, ಒಂದು ಆಭಾಸ ಎಂದು ಅರ್ಥ ಮಾಡಬೇಕು. ಆ ಎರಡರಲ್ಲಿ ಕೂಟಸ್ಥನು ಸ್ವಯಂ ಪ್ರಕಾಶ ಅಂದರೆ ತನ್ನ ಬೆಳಕಿನಲ್ಲಿ ತಾನು ಬೆಳಗಿ ತನ್ನಲ್ಲಿ ಕಲ್ಪಿತವಾದವುಗಳನ್ನೆಲ್ಲಾ ಬೆಳಗುವನು.

ಉದಾ – ಸೂರ್ಯನು ತನ್ನ ಬೆಳಕಿನಲ್ಲಿ ತಾನು ಬೆಳಗಿ, ತನ್ನ ಬೆಳಕಿಗೆ ಸಂಬಂಧಪಟ್ಟವುಗಳನ್ನೆಲ್ಲಾ ಬೆಳಗುತ್ತಾನೆ.

ಸಂಬಂಧ – ಮುಂದಿನ ದೋಹಾದಲ್ಲಿ ಕೂಟಸ್ಥನು ಅಸಂಗನೆಂತಲೂ, ಅವನನ್ನು ತಿಳಿಯದೆ ಇದ್ದವರು ಮೂರ್ಖರೆಂತಲೂ ಪ್ರತಿಪಾದಿಸಲ್ಪಟ್ಟಿದೆ.

ದೋಹಾ – ಕರ್ಮಿ ಛಾಯಾ ದೇತ ಫಲ, ನಹಿ ಚೇತನ ಮೈ ಜೋಗ್ ।
ಸೋ ಅಸಂಗ ಇಕರೂಪ ಹೈ, ಜಾನ್ಯೈ ಭಿನ್ನ ಕುಲೋಗ ॥೯೨॥

ತಾತ್ಪರ್ಯ – ಜೀವನ ಸ್ವರೂಪದಲ್ಲಿರುವ ಚೇತನದ ಆಭಾಸಾಂಶವೇ ಕರ್ಮ ಮಾಡುತ್ತದೆ ಕರ್ಮ ಮಾಡುವ ಆಭಾಸನಿಗೆ ಈಶ್ವರ ಸ್ವರೂಪದಲ್ಲಿರುವ ಆಭಾಸಾಂಶವು ಫಲವನ್ನು ಕೊಡುತ್ತದೆ. ಚೇತನಕ್ಕೆ ಯಾವುದೂ ಸಂಬಂಧವಿಲ್ಲ. ಚೇತನವು ಅಸಂಗ ಮತ್ತು ಏಕ ರೂಪವಾಗಿದೆ. ಈ ರೀತಿ ಚೇತನವನ್ನು ತಿಳಿಯದೆ ಇದ್ದವರು ಮೂರ್ಖರು.

ವಿವರಣೆ – ಜೀವನ ಸ್ವರೂಪದಲ್ಲಿರುವ · ಆಭಾಸಾಂಶವು ಕರ್ಮಕ್ಕೆ ಕರ್ತ; ಅವೇ ಕರ್ಮ ಫಲದ ಭೋಕ್ತ. ಮತ್ತು ಈಶ್ವರನ ಸ್ವರೂಪಾಂಶದಲ್ಲಿರುವ ಆಭಾಸಾಂಶವು ಕರ್ಮಕ್ಕೆ ಅನುಸಾರವಾಗಿ ಫಲವನ್ನು ಕೊಡುವ ದಾತ

ಮೂಲದಲ್ಲಿ "ಕರ್ಮಿ, ಛಾಯದೇತ ಫಲ" ಎಂಬ ವಾಕ್ಯವನ್ನು ''ದೆಹಳಿ'' ದೀಪ ನ್ಯಾಯದಿಂದ ಅರ್ಥ ಮಾಡಿಕೊಳ್ಳಬೇಕು ಹಾಗೆ ಅರ್ಥ ಮಾಡಿದರೆ ''ಛಾಯ ಕರ್ಮಿ, ಛಾಯ ದೇತ ಫಲ" ಎಂದು ಅರ್ಥವಾಗುತ್ತದೆ. ಅಂದರೆ ಆಭಾಸನೇ ಕರ್ತ, ಆಭಾಸನೇ ದಾತ ಎಂದು ತಿಳಿಯಬೇಕು.

ಈಶ್ವರ ಮತ್ತು ಜೀವ – ಈ ಇಬ್ಬರಲ್ಲಿ ಇರುವ ಚೈತನ್ಯದ ಅಂಶದಲ್ಲಿ ಕರ್ತೃತ್ವ, ಭೋಕ್ತೃತ್ವ, ದಾತೃತ್ವ ಲಕ್ಷಣಗಳಿಲ್ಲ ಅಂದರೆ ಜೀವಸ್ಥ ಚೈತನ್ಯದಲ್ಲಿ ಕರ್ತೃತ್ವ ಮತ್ತು ಭೋಕ್ತೃತ್ವಗಳಿಲ್ಲ. ಈಶ್ವರಸ್ಥ ಚೈತನ್ಯದಲ್ಲಿ ದಾತೃತ್ವಗಳಿಲ್ಲ

ಉದಾ – ಹನ್ನೆರಡು ವರ್ಷ ವೇದಾಂತ ಶ್ರವಣ ಮಾಡಿ ದೃಢವಾದ ಅಪರೋಕ್ಷ ಜ್ಞಾನವನ್ನು ಪಡೆದ ಒಬ್ಬ ಯೋಗ್ಯ ಶಿಷ್ಯನನ್ನು ಕುರಿತು ಗುರುಗಳು ''ಅಯ್ಯಾ, ನಿನ್ನ ಸದ್ಗುಣಕ್ಕೆ ನಾನು ಮೆಚ್ಚಿದೆನು. ನಿನಗೆ ಏನು ಬೇಕಾದರೂ ಕೇಳು, ನಾನು ಕೊಡುತ್ತೇನೆ" ಎಂದರು. ಜೀವ ಭಾವವನ್ನು ಕಳೆದುಕೊಂಡ ಆ ಶಿಷ್ಯನು ''ಸ್ವಾಮಿ, ನೀವು ಕೊಡುವವರಲ್ಲ, ನಾನು ತೆಗೆದುಕೊಳ್ಳುವವನಲ್ಲ ನೀವು ಈಶ್ವರರಾಗಿದ್ದರೆ ಕೊಡಬಹುದಾಗಿತ್ತು ನಾನು ಜೀವನಾಗಿದ್ದರೆ ತೆಗೆದುಕೊಳ್ಳಬಹುದಾಗಿತ್ತು. ನೀವು ಈಶ್ವರರಲ್ಲ ನಾನು ಜೀವನಲ್ಲ. ನಾವಿಬ್ಬರೂ ಪರಬ್ರಹ್ಮ ಸ್ವರೂಪರೇ. ಪರಬ್ರಹ್ಮ ಸ್ವರೂಪರಿಗೆ ಕೊಡುವ ತೆಗೆದುಕೊಳ್ಳುವ ಕೆಲಸವೆಲ್ಲಿ?" ಎಂದನು

ಚೈತನ್ಯದ ಅಂಶದಲ್ಲಿ ಕರ್ತೃತ್ವ, ದಾತೃತ್ವಗಳನ್ನು ಅಂಗೀಕರಿಸುವವನು ಮೂರ್ಖನು ಏಕೆಂದರೆ, ಚೈತನ್ಯವು ಭಿನ್ನ ಭಿನ್ನವಾಗಿರುವ ಪಕ್ಷದಲ್ಲಿ ಭೇದವು ಸಿದ್ಧಿಸಬಹುದು. ಚೈತನ್ಯವಾದರೋ ಎರಡರಲ್ಲಿ ಅಸಂಗ ಮತ್ತು ಏಕರೂಪ ಚೈತನ್ಯದಲ್ಲಿ ಭೇದವು ಇಲ್ಲವೇ ಇಲ್ಲ ಹೀಗಿರುವಾಗ

ಜೀವ ಚೈತನ್ಯಕ್ಕಿಂತಲೂ ಈಶ್ವರ ಚೈತನ್ಯವು ಇಲ್ಲವೇ ಈಶ್ವರ ಚೈತನ್ಯ ಕ್ಕಿಂತಲೂ ಜೀವ ಚೈತನ್ಯವು ಬೇರೆ ಎಂದು ಯಾವನು ಅಂಗೀಕರಿಸುವನೋ ಅವನು ಮೂರ್ಖನು ಅವನೇ ನಿಂದೆಗೆ ಯೋಗ್ಯನು.

ಪ್ರಶ್ನೆ – ಜೀವ ಈಶ್ವರ ಇಬ್ಬರಿಗೆ ಏಕತ್ವವನ್ನು ಅಂಗೀಕರಿಸುವುದರಿಂದ ಕರ್ಮೋಪಾಸನೆಯನ್ನು ಪ್ರತಿಪಾದಿಸುವ ವೇದಗಳು ನಿಷ್ಫಲವಾದುವಲ್ಲಾ?

ಉತ್ತರ – ಮೇಲೆ ಹೇಳಿದ ಪ್ರಕಾರ ಜೀವ-ಈಶ್ವರರ ಚೈತನ್ಯ ಭಾಗ ದಲ್ಲಿ ಅಭೇದವಿದ್ದರೂ ಆಭಾಸ ಭಾಗದಲ್ಲಿ ಭೇದವಿರುವುದರಿಂದ ಕರ್ಮೋ ಪಾಸನ ಪ್ರತಿಪಾದನ ಮಾಡುವ ವೇದಗಳು ನಿಷ್ಫಲವಲ್ಲ

ಸಂಬಂಧ – ಮುಂದೆ ಹೇಳುವ ನಾಲ್ಕು ದೋಹಾಗಳಲ್ಲಿ ಇಲ್ಲಿಯವರೆಗೆ ಪ್ರತಿಪಾದಿಸಿದ ವಿಷಯವು ಉಪಸಂಹಾರ ಮಾಡಲ್ಪಡುತ್ತದೆ.

ದೋಹಾ – ಅಹೋ ಶಿಷ್ಯ ತೈಪ್ರಶ್ನೆ ಜು ಕೀನ್ಹೆ,
ತಿನಕೆ ಯೆ ಉತ್ತರ ಮೈ ದೀನೆ ।
ಕಹೆ ಜು ತೈ ತರುಮೈ ದ್ವೈ ಪಚ್ಛೀ,
ಇಕ ಭೋಗ್ಯೆ ಇಕ ಆಹಿ ಅನಿಚ್ಛೀ ॥೯೩॥

ತೇ ಚೇತನ ಆಭಾಸ ಲಖಾಯೆ,
ನಭ ಛಾಯಾಜ್ಯು ಭಿನ್ನ ಬತಾಯೆ ।
ಕಹ್ಯೋ ಭಿನ್ನ ಕರ್ಮ ಫಲದಾತಾ,
ಮತಿ ಮಾಯಾ ಛಾಯಾ ಸೋತಾತಾ ॥೯೪॥

ಜೀವ ಈಸಮೈ ಚೇತನ ರೂಪ,
ಭೇದ–ಗಂಧತೈ ರಹಿತ ಅನೂಪ ।
ಯಾತೈ "ಅಹಂಬ್ರಹ್ಮ" ಯಹ ಜಾನೌ,
"ಅಹಂ" ಶಬ್ದ ಕೂಟಸ್ಥ ಪಿಛಾನೌ ॥೯೫॥

"ಬ್ರಹ್ಮ" ಶಬ್ದಕೋ ಅರ್ಥ ಸು ಭಾಖ್ಯೋ,
ಮಹಾಕಾಸ ಸಮ ಲಚ್ಛ್ಯ ಜು ರಾಖ್ಯೋ ।
"ಅಹಂಬ್ರಹ್ಮ" ನಹೀ ಜೌಲೌ ಜಾನ್ಯೈ,
ತೌಲೌ ದೀನ ದುಃಖಿತ ಭಯ ಮಾನ್ಯೈ ॥೯೬॥

ವಿವರಣೆ – ಹೇ ವಿಚಾರಶೀಲನಾದ ಶಿಷ್ಯನೇ, ನೀನು ಹಿಂದೆ ಮಾಡಿದ ಪ್ರಶ್ನೆಯನ್ನು ನೆನಪಿಸಿಕೊ. ಆ ಪ್ರಶ್ನೆಯ ಸ್ವರೂಪವೇನೆಂದರೆ "ಒಂದು ವೃಕ್ಷದಲ್ಲಿ ಎರಡು ಪಕ್ಷಿಗಳಿರುತ್ತವೆ. ಒಂದನೆಯದು ಭೋಗಿ, ಎರಡನೆಯದು ಅಸಂಗ. ಹೀಗಿರುವಾಗ ಜೀವ-ಬ್ರಹ್ಮರಿಗೆ ಏಕತ್ವವು ಸಂಭವಿಸಲಾರದು." ಈ ನಿನ್ನ ಪ್ರಶ್ನೆಗೆ ಸಮಾಧಾನವೇನೆಂದರೆ. ವೃಕ್ಷದಲ್ಲಿರುವ ಎರಡು ಪಕ್ಷಿಗಳಿಂದರೆ ಜೀವ-ಬ್ರಹ್ಮರನ್ನು ಗ್ರಹಿಸಕೂಡದು. ಜೀವ-ಬ್ರಹ್ಮರನ್ನು ಗ್ರಹಿಸದೆ ಕೂಟಸ್ಥ ಆಭಾಸರನ್ನು ಗ್ರಹಿಸಬೇಕು. ಈ ಕೂಟಸ್ಥ ಆಭಾಸರು ತಮ್ಮಲ್ಲಿ ತಾವು ಘಟಾಕಾಶ ಜಲಾಕಾಶದಂತೆ ಪರಸ್ಪರ ಭಿನ್ನರಾಗಿರುವರು.

ಈ ವಿಷಯದಲ್ಲಿ ನಿನ್ನ ಮತ್ತೊಂದು ಪ್ರಶ್ನೆ "ಜೀವನು ಕರ್ಮೋಪಾಸನೆ ಗಳನ್ನು ಮಾಡುವವನು. ಪರಮಾತ್ಮನು ಜೀವನು ಮಾಡಿದ ಕರ್ಮ ಉಪಾಸನೆಗಳಿಗೆ ಅನುಸಾರವಾಗಿ ಫಲವನ್ನು ಕೊಡತಕ್ಕವನು. ಈ ವಿರುದ್ಧ ಲಕ್ಷಣವಿರುವ ಈ ಇಬ್ಬರಿಗೆ ಏಕತ್ವವು ಘಟಿಸಲಾರದು." ಈ ನಿನ್ನ ಪ್ರಶ್ನೆಗೆ ಸಮಾಧಾನವೇನೆಂದರೆ, ಜೀವನ ವಾಸ್ತವಿಕ ಸ್ವರೂಪವು ಕರ್ಮ ಮಾಡುವುದಲ್ಲ. ಈಶ್ವರನ ಪಾರಮಾರ್ಥಿಕ ಸ್ವರೂಪವು ಫಲವನ್ನು ಕೊಡುವುದಲ್ಲ. ಕರ್ತ, ದಾತ ಎಂಬ ಲಕ್ಷಣಗಳು ಜೀವ, ಈಶ್ವರರ ಸ್ವರೂಪದಲ್ಲಿರುವ ಆಭಾಸಾಂಶಕ್ಕೆ ಸೇರಿದವು. ಜೀವ ಈಶ್ವರ ಚೈತನ್ಯ ಅಂಶದಲ್ಲಿ ಘಟಾಕಾಶ, ಮಹಾಕಾಶ ನ್ಯಾಯದಂತೆ ಕರ್ತೃತ್ವ, ಭೋಕ್ತೃತ್ವ, ದಾತೃತ್ವ ಲಕ್ಷಣಗಳಿರುವುದಿಲ್ಲ ಮತ್ತು ಆ ಜೀವ ಈಶ್ವರ ಪಾರಮಾರ್ಥಿಕ ಸ್ವರೂಪಕ್ಕೆ ಭೇದವೂ ಇಲ್ಲ.

ಹೇ ವಿವೇಕಿಗಳಲ್ಲಿ ಶ್ರೇಷ್ಠನಾದ ಶಿಷ್ಯನೇ, ಜೀವ-ಬ್ರಹ್ಮರ ಏಕತ್ವವು

ವಿಚಾರದಿಂದ ಸಂಭವಿಸುತ್ತದೆ ಆದುದರಿಂದ ನೀನು "ಅಹಂ ಬ್ರಹ್ಮಾಸ್ಮಿ" ಎಂಬ ಮಂತ್ರವನ್ನು ಸದಾ ಜಪಿಸುತ್ತಿರು.

ಪ್ರಶ್ನೆ – ಸ್ವಾಮಿ, "ಅಹಂ ಬ್ರಹ್ಮಾಸ್ಮಿ" ಎಂಬ ಮಹಾ ವಾಕ್ಯಕ್ಕೆ ಅರ್ಥವೇನು ?

ಉತ್ತರ – ಆ ಮಹಾ ವಾಕ್ಯದಲ್ಲಿರುವ "ಅಹಂ" ಎಂಬ ಪದಕ್ಕೆ ಘಟಾಕಾಶಕ್ಕೆ ಸಮಾನನಾದ ಕೂಟಸ್ಥನೆಂದು ಲಕ್ಷ್ಯಾರ್ಥ. ಮತ್ತು ಆ ಮಹಾ ವಾಕ್ಯದಲ್ಲಿರುವ "ಬ್ರಹ್ಮ" ಶಬ್ದಕ್ಕೆ ಮಹಾಕಾಶಕ್ಕೆ ಸಮಾನನಾದ ವ್ಯಾಪಕ ಚೈತನ್ಯವೆಂದು ಲಕ್ಷ್ಯಾರ್ಥ. "ಅಹಂ" ಶಬ್ದದ ಮತ್ತು "ಬ್ರಹ್ಮ" ಶಬ್ದದ ವಾಚ್ಯಾರ್ಥದಲ್ಲಿ ಉಪಾಧಿಗತವಾದ ಭೇದವಿದ್ದರೂ ಲಕ್ಷ್ಯಾರ್ಥದಲ್ಲಿ ಯಾವ ಭೇದವೂ ಇಲ್ಲ

ಸಾರಾಂಶವೇನೆಂದರೆ – ಹೇ ಶಿಷ್ಯನೇ, ನೀನು "ಅಹಂ ಬ್ರಹ್ಮಾಸ್ಮಿ" ಎಂದು ಎಲ್ಲಿಯವರೆಗೆ ತಿಳಿಯುವುದಿಲ್ಲವೋ ಅಲ್ಲಿಯವರೆಗೆ ನೀನು ನಿನ್ನನ್ನು ದೀನನೆಂದು ಭಾವಿಸಿಕೊಳ್ಳಬೇಕಾಗುವುದು ಮತ್ತು ದುಃಖಿ ಎಂದೂ ತಿಳಿದು ಕೊಳ್ಳಬೇಕಾಗುವುದು. ಪರಮಾತ್ಮನನ್ನು ನಿನಗಿಂತ ಭಿನ್ನವೆಂದು ತಿಳಿದರೆ ಅವನು ನಿನಗೆ ಭಯಕ್ಕೆ ಕಾರಣನಾಗುವನು. ಆದುದರಿಂದ ನಾನು ಬ್ರಹ್ಮಕ್ಕೆ ಭಿನ್ನನಲ್ಲ, ಬ್ರಹ್ಮಸ್ವರೂಪನೇ ಎಂದು ತಿಳಿದುಕೊ.

ಸಂಬಂಧ – ಅಧಿಕಾರಿಯು ಸದಾ "ಅಹಂ ಬ್ರಹ್ಮಾಸ್ಮಿ" ಎಂದು ಅಂದು ಕೊಳ್ಳಬೇಕೆಂದು ನಿರ್ಣಯವಾಯಿತು. ಮುಂದಿನ ದೋಹಾದಲ್ಲಿ "ಅಹಂ ಬ್ರಹ್ಮಾಸ್ಮಿ" ಎಂದು ಅಂದುಕೊಳ್ಳುವವರು ಯಾರು ಎಂಬ ವಿಷಯವು ಪ್ರತಿ ಪಾದಿಸಲ್ಪಡುತ್ತದೆ.

## ತತ್ತ್ವದೃಷ್ಟಿ ಉವಾಚ

ದೋಹಾ – ಕಹೋ ಗುರೂ ಹ್ವೈ ಕೌನಕೂ, "ಅಹಂಬ್ರಹ್ಮ" ಯಹ ಜ್ಞಾನ।
ನಹೀ ಜಾನೂ ವ್ಯೈ ಆವಕೆ, ಭಾಖ್ಯೈ ಬಿನಾ ಸುಜಾನ ॥೯೭॥

ತಾತ್ಪರ್ಯ – ಹೇ ಜ್ಞಾನಿಗಳಲ್ಲಿ ಶ್ರೇಷ್ಠನಾದ ಗುರುವೇ, "ನಾನು

ಬ್ರಹ್ಮ ಅಥವಾ ನಾನು ಬ್ರಹ್ಮವಾಗಿದ್ದೇನೆ" ಎಂಬ ಈ ಜ್ಞಾನವು ಯಾರಿಗೆ ಆಗುತ್ತದೆ? ತಾವು ಬೋಧಿಸದಿದ್ದರೆ ನಾನು ಇದನ್ನು ತಿಳಿದುಕೊಳ್ಳಲಾರೆನು.

ವ್ಯಾಖ್ಯಾನ – ಈ ಶಿಷ್ಯನ ಪ್ರಶ್ನೆಯಲ್ಲಿರುವ ಗೂಢವಾದ ಅಭಿಪ್ರಾಯವೇನೆಂದರೆ, "ಅಹಂ ಬ್ರಹ್ಮಾಸ್ಮಿ" ಎಂಬ ಜ್ಞಾನವು ಕೂಟಸ್ಥನಿಗೆ ಆಗುವುದೇ ಅಥವಾ ಬುದ್ಧಿ ಸಹಿತ ಆಭಾಸನಿಗೆ ಆಗುವುದೇ? ಈ ಜ್ಞಾನವು ಕೂಟಸ್ಥನಿಗೆ ಎಂದು ಹೇಳಿದರೆ ಕೂಟಸ್ಥನು ವಿಕಾರಿಯಾಗಬೇಕಾಗುತ್ತದೆ. ಕೂಟಸ್ಥನು ನಿರ್ವಿಕಾರಿಯಾದುದರಿಂದ ಇದು ಸಂಭವಿಸುವುದಿಲ್ಲ. ಒಂದು ವೇಳೆ ಬುದ್ಧಿ ಸಹಿತ ಆಭಾಸನಿಗೆ ಆಗುವುದು ಎಂದರೆ ಅದೂ ಸರಿಯಲ್ಲ. ಆಭಾಸನಿಗೆ ಆಗುವ ಈ ಜ್ಞಾನವು ಭ್ರಾಂತಿರೂಪವಾಗುತ್ತದೆ ಏಕೆಂದರೆ, ಈ ಹಿಂದೆ ತಾವೇ ಕೂಟಸ್ಥನಿಗೂ ಬ್ರಹ್ಮಕ್ಕೂ ಏಕತ್ವವಿದೆ, ಆಭಾಸನು ಭಿನ್ನನೆಂದು ಹೇಳಿದ್ದಿರಿ. ಬ್ರಹ್ಮಕ್ಕಿಂತ ಭಿನ್ನನಾದ ಆ ಆಭಾಸನಿಗೆ ಉಂಟಾಗುವ "ಅಹಂ ಬ್ರಹ್ಮಾಸ್ಮಿ" ಎಂಬ ಜ್ಞಾನವು ಭ್ರಾಂತಿ ರೂಪವಾಗುತ್ತದೆ ಹೇಗೆಂದರೆ, ಹಗ್ಗಕ್ಕಿಂತ ಭಿನ್ನವಾದ ಸರ್ಪಕ್ಕೆ ತಾನು ಹಗ್ಗಸ್ವರೂಪವೆಂದು ತಿಳಿಯುವ ಜ್ಞಾನವು ಭ್ರಾಂತಿ ರೂಪವೇ. ಒಂದು ವೇಳೆ "ಅಹಂ ಬ್ರಹ್ಮಾಸ್ಮಿ" ಎಂಬ ಜ್ಞಾನವು ಭ್ರಾಂತಿ ರೂಪವಾದರೂ ಆಗಲಿ ಎಂದು ಅಂಗೀಕರಿಸಿದರೆ, ಈ ಭ್ರಾಂತಿ ರೂಪ ಜ್ಞಾನದಿಂದ ಅನರ್ಥ ನಿವೃತ್ತಿಯು ಆಗಲಾರದು. ಅನರ್ಥ ನಿವೃತ್ತಿಗೆ ಯಥಾರ್ಥ ಜ್ಞಾನವೇ ನಿಜವಾದ ಸಾಧನ ರಜ್ಜುವಿನ ಯಥಾರ್ಥ ಜ್ಞಾನದಿಂದ ಮಿಥ್ಯಾ ಕಲ್ಪಿತವಾದ ಸರ್ಪವೂ, ಅದರಿಂದ ಉಂಟಾದ ದುಃಖವೂ ನಿವೃತ್ತಿಯಾಗಬಲ್ಲವು.

ಗುರುಗಳೇ, ಈ ಸಂದೇಹವನ್ನು ನಿವೃತ್ತಿ ಮಾಡಿರಿ.

"ಕಣ್ಣೊಳಗಿನ ಹರಳು, ಕಾಲೊಳಗಿನ ಮುಳ್ಳು, ದೇಹದಲ್ಲಿಯ ರೋಗ, ಮನೆಯಲ್ಲಿಯ ಕದನ, ಮಾಡಿದ ಸಾಲ, ಮನಸ್ಸಿನೊಳಗಿನ ಸಂದೇಹ – ಇವುಗಳನ್ನು ಮುಚ್ಚಿಡಬಾರದು." ಆದುದರಿಂದ ತಕ್ಷಣ ದಯಮಾಡಿ ಈ ಸಂದೇಹವನ್ನು ನಿವೃತ್ತಿ ಮಾಡಿರಿ.

**ಉತ್ತರ —**

## ಶ್ರೀ ಗುರು ಉವಾಚ

ದೋಹಾ – ಕಹೂ ಅವಸ್ಥಾ ಸಾತ, ಸುನಹು ಶಿಷ್ಯ ಆಭಾಸಕೀ ।
ನಹಿ ಚೇತನಕೀ ತಾತ, ತೀನಹೀವ್ಯೈ ಯಹ ಜ್ಞಾನ ಹೈ ॥೯೮॥

ಇಕ ಅಜ್ಞಾನ ಆವರನ ಜಾನೌ,
ಭ್ರಾಂತಿ ದ್ವಿವಿಧ ಪುನಿ ಜ್ಞಾನ ಪಿಛಾನೌ ।
ಸೋಕನಾಸ ಅತಿ ಹರ್ಷ ಅಪಾರಾ,
ಸಪ್ತ ಅವಸ್ಥಾ ಇಮುನಿರ್ಧಾರಾ ॥೯೯॥

ತಾತ್ಪರ್ಯ – ಶಿಷ್ಯನೇ, ಆಭಾಸನಿಗೆ ಏಳು ಅವಸ್ಥೆಗಳುಂಟು. ಆ ಅವಸ್ಥೆಗಳನ್ನು ನೀನು ಶ್ರದ್ಧೆಯಿಂದ ಕೇಳು. ಈ ಏಳು ಅವಸ್ಥೆಗಳಲ್ಲಿ ಯಾವ ಅವಸ್ಥೆಯೂ ಕೂಟಸ್ಥನಿಗೆ ಸಂಬಂಧವಿಲ್ಲ. "ಅಹಂ ಬ್ರಹ್ಮಾಸ್ಮಿ" ಎಂಬ ಜ್ಞಾನವೂ ಸಹ ಏಳು ಅವಸ್ಥೆಗಳೊಳಗಿರುವುದರಿಂದ ಇದೂ ಸಹ ಆಭಾಸನಿಗೇ

ಪ್ರಶ್ನೆ – ಏಳು ಅವಸ್ಥೆಗಳು ಯಾವುವು ? ಅವುಗಳ ಹೆಸರೇನು ?

ಉತ್ತರ – ೧. ಅಜ್ಞಾನ, ೨ ಆವರಣ, ೩. ಭ್ರಾಂತಿ ಅಥವಾ ವಿಕ್ಷೇಪ, ೪. ಪರೋಕ್ಷ ಜ್ಞಾನ, ೫. ಅಪರೋಕ್ಷ ಜ್ಞಾನ, ೬. ಶೋಕ ನಾಶ, ೭. ಹರ್ಷ ಇವು ಆಭಾಸನ ಸಪ್ತಾವಸ್ಥೆಗಳು

ಪ್ರಶ್ನೆ – ಈ ಸಪ್ತಾವಸ್ಥೆಗಳನ್ನು ಉದಾಹರಣೆ ಪೂರ್ವಕ ತಿಳಿಸಿರಿ

ಉತ್ತರ – ವೇದಾಂತ ಶಾಸ್ತ್ರದಲ್ಲಿ ಅನೇಕ ಸಾರಿ ಉಪಯೋಗವಾಗುವ ದಶಮನ ಕಥೆಯಿಂದ ಈ ಉದಾಹರಣೆಯನ್ನು ತಿಳಿದುಕೊಳ್ಳಬಹುದು ಹೇಗೆಂದರೆ –

### ೧. ಅಜ್ಞಾನ

ದಶಮನು ತನ್ನನ್ನು ಬಿಟ್ಟು ಎದುರಿಗೆ ಕಾಣುವ ೯ ಜನರನ್ನು ಎಣಿಸಿ ತನ್ನನ್ನು ದಶಮನೆಂದು ತಿಳಿಯದೆ ಇರುವುದೇ ಅಜ್ಞಾನ.

**೨. ಆವರಣ**

ದಶಮನು ಇಲ್ಲ, ಇದ್ದರೆ ತೋರುತ್ತಿದ್ದ; ತೋರುವುದಿಲ್ಲ ಎಂಬ ಈ ಎರಡೂ ಆವರಣ ಎನಿಸುತ್ತವೆ.

**೩. ಭ್ರಾಂತಿ**

ದಶಮನು ಸತ್ತನೆಂದು ತಿಳಿದು ರೋಧಿಸುವುದೇ ಶೋಕ ಇದಕ್ಕೆ ಭ್ರಾಂತಿ ಅಥವಾ ವಿಕ್ಷೇಪ ಎನ್ನುತ್ತಾರೆ.

**೪. ಪರೋಕ್ಷ ಜ್ಞಾನ**

ದಶಮನು ಸತ್ತಿಲ್ಲ, ಇದ್ದಾನೆ ಎಂಬ ಆಪ್ತನ ವಚನದಿಂದ ದಶಮನು ಇರುವನೆಂದು ತಿಳಿಯುವುದೇ ಪರೋಕ್ಷ ಜ್ಞಾನ.

**೫. ಅಪರೋಕ್ಷ ಜ್ಞಾನ**

ನೀನೇ ದಶಮನೆಂದು ಆಪ್ತನು ಹೇಳಿದ ಮೇಲೆ ತನ್ನನ್ನು ದಶಮನೆಂದು ತಿಳಿಯುವುದು ಅಪರೋಕ್ಷ ಜ್ಞಾನ.

**೬. ಶೋಕ ನಾಶ**

ನಾನು ದಶಮನೆಂದು ತಿಳಿದ ಮೇಲೆ ಅಳುವಿಕೆಯು ನಿಂತುಹೋಗುವುದೇ ಶೋಕನಾಶ (ಭ್ರಾಂತಿನಾಶ)

**೭ ಹರ್ಷ**

ತನ್ನನ್ನು ತಾನು ದಶಮನೆಂದು ತಿಳಿಯುವುದರಿಂದ ಉಂಟಾಗುವ ಸಂತೋಷವೇ ಅತಿ ಹರ್ಷ.

ಈ ರೀತಿಯಾಗಿ ದೃಷ್ಟಾಂತದಲ್ಲಿ ಹೇಳಲ್ಪಟ್ಟ ದಶಮನ ಸಪ್ತಾವಸ್ಥೆಗಳು ಚಿದಾಭಾಸನಲ್ಲಿ ಸಂಭವಿಸುತ್ತವೆ ಕೂಟಸ್ಥನು ಅಸಂಗನೂ ನಿರ್ವಿಕಾರನೂ ಆದುದರಿಂದ ಅವನಿಗೆ ಯಾವ ಅವಸ್ಥೆಗಳೂ ಇಲ್ಲ. ಈ ಏಳು ಅವಸ್ಥೆಗಳಲ್ಲಿ

ಅಜ್ಞಾನ, ಆವರಣ, ವಿಕ್ಷೇಪ ಎಂಬ ಮೂರು ಬಂಧಕ್ಕೆ ಕಾರಣವಾಗಿವೆ. ಉಳಿದ ನಾಲ್ಕು ಮೋಕ್ಷಕ್ಕೆ ಕಾರಣವಾಗಿವೆ ಎಂದು ತಿಳಿಯಬೇಕು.

ಸಂಬಂಧ – ಮುಂದಿನ ದೋಹಾದಲ್ಲಿ ಅಜ್ಞಾನ ಹಾಗೂ ಆವರಣ ಗಳೆಂಬ ಎರಡು ಅವಸ್ಥೆಗಳು ಪ್ರತಿಪಾದಿಸಲ್ಪಡುತ್ತವೆ.

ದೋಹಾ – ನಹಿ ಜಾನು ಮೈ ಬ್ರಹ್ಮಕೂ, ಯಾಕೂ ಕಹತ ಅಜ್ಞಾನ ।
''ಬ್ರಹ್ಮ ಹೈನ" ನಹಿ ಭಾನ ಹ್ವೈ, ಯಹ ಆವರನ ಸುಜಾನ ॥೧೦೦॥

ತಾತ್ಪರ್ಯ – ಎಲೈ ಶಿಷ್ಯನೇ, ನಾನು ಬ್ರಹ್ಮವನ್ನು ತಿಳಿಯುವುದಿಲ್ಲ ಇದೇ ಅಜ್ಞಾನ ಬ್ರಹ್ಮವಿಲ್ಲ ಮತ್ತು ತೋರುವುದಿಲ್ಲ. ಇದೇ ಆವರಣ.

ವಿವರಣೆ – ''ನಾನು ಬ್ರಹ್ಮವನ್ನು ತಿಳಿಯುವುದಿಲ್ಲ" ಎಂಬ ವ್ಯವಹಾರಕ್ಕೆ ಹೇತುವಾದದ್ದು ಅಜ್ಞಾನ. ''ಬ್ರಹ್ಮವಿಲ್ಲ", "ತೋರುವುದಿಲ್ಲ'' ಎಂಬ ಅಜ್ಞಾನಕ್ಕೆ ಹೇತುವಾದದ್ದು ಆವರಣ. ಅಜ್ಞಾನಕ್ಕೆ ಎರಡು ಶಕ್ತಿಗಳು : ೧. ಅಸತ್ವಾಪಾದಕ, ೨ ಅಭಾನಾಪಾದಕ. ಈ ಎರಡೂ ಸೇರಿ ಆವರಣವೆನಿಸುತ್ತವೆ. ವಸ್ತುವು ಇಲ್ಲ ಎಂಬ ಪ್ರತೀತಿಯನ್ನು ಉಂಟು ಮಾಡುವ ಶಕ್ತಿಗೆ ಅಸತ್ವಾಪಾದಕ ಎನ್ನುತ್ತಾರೆ ಮತ್ತು "ವಸ್ತುವು ತೋರುವುದಿಲ್ಲ'' ಎಂಬ ಪ್ರತೀತಿಯನ್ನು ಉಂಟುಮಾಡುವ ಶಕ್ತಿಗೆ ಅಭಾನಾಪಾದಕ ವೆನ್ನುತ್ತಾರೆ.

ಸಂಬಂಧ – ಮುಂದಿನ ದೋಹಾದಲ್ಲಿ ಭ್ರಾಂತಿಯು ವರ್ಣಿಸಲ್ಪಟ್ಟಿದೆ

ದೋಹಾ – ಜನ್ಮಮರನ ಗಮನಾಗಮನ, ಪುನ್ಯಪಾಪ ಸುಖ–ಖೇದ ।
ನಿಜಸ್ವರೂಪ.ಸ್ವರೂಪಮ್ಯೆ ಭಾನಹೈ ಭ್ರಾಂತಿಬಖಾನಿವೇದ ॥೧೦೧॥

ತಾತ್ಪರ್ಯ – ಜನ್ಮವೇ ಮೊದಲಾದ ಸಂಸಾರವು ತನ್ನ ನಿಜ ಸ್ವರೂಪ ವಾದ ಕೂಟಸ್ಥನಲ್ಲಿ ಪ್ರತೀತಿಯಾದರೆ ಅದಕ್ಕೆ ವೇದದಲ್ಲಿ ಭ್ರಾಂತಿ ಎನ್ನುತ್ತಾರೆ. ಈ ಭ್ರಾಂತಿಯನ್ನೇ ಇಲ್ಲಿ ಶೋಕವೆಂದು ಕರೆದಿದ್ದಾರೆ.

ಪ್ರಶ್ನೆ – ಈ ಭ್ರಾಂತಿ ಸ್ವರೂಪವನ್ನು ತಿಳಿಯುವಂತೆ ವರ್ಣಿಸಿರಿ

ಉತ್ತರ – ಶ್ರದ್ಧೆಯಿಂದ ಕೇಳು ದೇಹ, ಪ್ರಾಣ, ಇಂದ್ರಿಯಗಳು, ಅಂತಃಕರಣ ಸಹಿತ ಚಿದಾಭಾಸ ಮತ್ತು ಇವುಗಳ ಜನ್ಮವೇ ಮೊದಲಾದ ಕೇವಲ ಧರ್ಮಗಳ ಅಥವಾ ಧರ್ಮ ಸಹಿತ ಧರ್ಮಿಯು ಇಲ್ಲವೇ ಸಂಬಂಧ ಸಹಿತ ಸಂಬಂಧಿಯು ಆತ್ಮನಲ್ಲಿ ಸ್ವವಿಷಯ ಸಹಿತವಾಗಿ ಪ್ರತೀತಿಯಾಗುವುವೇ ಅಧ್ಯಾಸ. ಇದನ್ನೇ ಭ್ರಾಂತಿ, ವಿಕ್ಷೇಪ, ಶೋಕವೆಂದು ಕರೆದಿರುತ್ತಾರೆ.

ಸಂಬಂಧ – ಮುಂದಿನ ಎರಡು ದೋಹಾಗಳಲ್ಲಿ ಪರೋಕ್ಷ, ಅಪರೋಕ್ಷ ಜ್ಞಾನಗಳು ವರ್ಣಿಸಲ್ಪಡುತ್ತವೆ

ದೋಹಾ – ದ್ವೈವಿಧ ಜ್ಞಾನ ಬಖಾನಿಯೆ, ಇಕ ಅಪರೋಕ್ಷ ।
ಅಸ್ತಿಬ್ರಹ್ಮ ಪರೋಛ ಹೈ, ಅಹಂ ಬ್ರಹ್ಮ ಅಪರೋಕ್ಷ ॥೧೦೨॥

"ನಹೀಬ್ರಹ್ಮ" ಯಾ ಅಂಶಕೋ, ಕರೈ ಪರೋಛ ವಿನಾಶ ।
ಸಕಲ ಅವಿದ್ಯಾಜಾಲಕೂ, ದೂಜೊ ನಸೈ ಪ್ರಕಾಸ ॥೧೦೩॥

ತಾತ್ಪರ್ಯ – ಜ್ಞಾನವು ಪರೋಕ್ಷ, ಅಪರೋಕ್ಷ ಎಂದು ಎರಡು ವಿಧ "ಬ್ರಹ್ಮವು ಇದೆ" ಎಂಬುದು ಪರೋಕ್ಷ ಜ್ಞಾನ. "ನಾನು ಬ್ರಹ್ಮ" ಎಂಬುದು ಅಪರೋಕ್ಷ ಜ್ಞಾನ. "ಬ್ರಹ್ಮವು ಇಲ್ಲ" ಎಂಬ ಆವರಣದ ಅಂಶವನ್ನು "ಬ್ರಹ್ಮವು ಇದೆ" ಎಂಬ ಪರೋಕ್ಷ ಜ್ಞಾನವು ನಾಶಮಾಡುತ್ತದೆ. ಎರಡನೆಯ ಅಪರೋಕ್ಷ ಜ್ಞಾನವು ಸಕಲ ಅವಿದ್ಯಾ ಸಮೂಹವನ್ನೂ ನಾಶ ಮಾಡುತ್ತದೆ. "ಬ್ರಹ್ಮವು ಇಲ್ಲ" ಎಂಬ ಆವರಣಾಂಶವನ್ನು "ಬ್ರಹ್ಮವು ಇದೆ" ಎಂಬ ಪರೋಕ್ಷ ಜ್ಞಾನವು ನಾಶಮಾಡುತ್ತದೆ

ಪ್ರಶ್ನೆ – ಪರೋಕ್ಷ ಜ್ಞಾನದ ಸ್ವರೂಪವೇನು ?

ಉತ್ತರ – "ಸತ್ಯ ಜ್ಞಾನಾನಂದ ಸ್ವರೂಪವಾದ ಬ್ರಹ್ಮವು ಇದೆ" ಎಂಬ ಜ್ಞಾನಕ್ಕೆ ಪರೋಕ್ಷ ಜ್ಞಾನ ಎಂದು ಹೆಸರು ಆ ಪರೋಕ್ಷ ಜ್ಞಾನವು "ಬ್ರಹ್ಮವು ಇಲ್ಲ"ವೆಂಬ ಪ್ರತೀತಿಗೆ ವಿರೋಧವಾಗಿದೆ

ಪ್ರಶ್ನೆ – ಅಪರೋಕ್ಷ ಜ್ಞಾನದ ಸ್ವರೂಪವೇನು ?

ಉತ್ತರ – ''ನಾನು ಬ್ರಹ್ಮ" ಎಂಬ ಅನುಭವವು ಅಪರೋಕ್ಷ ಜ್ಞಾನ. ಇದು ಸಕಲ ಅವಿದ್ಯಾ ಜಾಲಕ್ಕೆ ವಿರೋಧಿಯಾಗಿದೆ ಆದುದರಿಂದ ೧. ''ನಾನು ಬ್ರಹ್ಮವನ್ನು ತಿಳಿಯುವುದಿಲ್ಲ" ಇದು ಅಜ್ಞಾನ, ೨ ''ಬ್ರಹ್ಮವು ಇಲ್ಲ" ''ತೋರುವುದಿಲ್ಲ'' ಎಂಬುದು ಆವರಣ, ೩ "ನಾನು ಬ್ರಹ್ಮವಲ್ಲ, ಪುಣ್ಯ ಪಾಪಗಳ ಕರ್ತನೂ, ಸುಖ ದುಃಖಗಳ ಭೋಕ್ತನೂ ಆದ ಜೀವನು'' ಇದು ಭ್ರಾಂತಿ ಇವೆಲ್ಲವುಗಳಿಗೂ ಅವಿದ್ಯಾ ಜಾಲವೆನ್ನುತ್ತಾರೆ. ಈ ಸಕಲ ಅವಿದ್ಯಾ ಜಾಲವನ್ನು ಅಪರೋಕ್ಷ ಜ್ಞಾನವು ನಾಶಮಾಡುತ್ತದೆ

ಪ್ರಶ್ನೆ – ನೀವು ಸತ್ಯಜ್ಞಾನಾನಂದ ರೂಪವಾದ ಬ್ರಹ್ಮ ಎಂದು ಹೇಳಿದಿರಲ್ಲಾ, ಹಾಗೆಂದರೇನು ?

ಉತ್ತರ – ಛಾಂದೋಗ್ಯ ಉಪನಿಷತ್ತಿನ ಭೂಮಾ ವಿದ್ಯೆಯ ಪ್ರಸಂಗದಲ್ಲಿ ನಾರದರನ್ನು ಕುರಿತು ಶ್ರೀ ಸನತ್ಕುಮಾರರು –

''ಯೋ ವೈ ಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ"

ಅಂದರೆ ಪೂರ್ಣವಾದ ವಸ್ತುವೇ ಸುಖ ವಸ್ತುವು, ಪರಿಚ್ಛಿನ್ನವಾದ ವಸ್ತುವಿನಲ್ಲಿ ಸುಖವಿಲ್ಲ ಎಂದು ಬೋಧಿಸಿರುತ್ತಾರೆ. ಈ ಪ್ರಮಾಣದಿಂದ ಅನಂತವಾದುದೇ ಭೂಮಾ ಎನಿಸಿಕೊಳ್ಳುತ್ತದೆ. ಮತ್ತು ಯಾವುದು ಭೂಮವೋ ಅದೇ ಆನಂದರೂಪವು. ಇದೇ ಸತ್ಯಜ್ಞಾನಾನಂದ ರೂಪ ಎಂಬ ಪದಕ್ಕೆ ಅರ್ಥ.

ಸಂಬಂಧ – ಮುಂದಿನ ದೋಹಾದಲ್ಲಿ ಭ್ರಾಂತಿ ನಾಶವು ವರ್ಣಿಸಲ್ಪಟ್ಟಿದೆ

ದೋಹಾ – ಜನ್ಮಮರನ ಮೋಮ್ಮೈ ನಹೀ, ನಹಿ ಸುಖ ದುಃಖ ಕೋ ಲೇಸ।
ಕಿಂತು ಅಜನ್ಯ ಕೂಟಸ್ಥ ಮೈ, ಭ್ರಾಂತಿ ನಾಸ ಯಹ ವೇಸ ॥
॥೧೦೪॥

ತಾತ್ಪರ್ಯ – ನನ್ನಲ್ಲಿ ಜನ್ಮ ಮರಣಗಳಿಲ್ಲ ಮತ್ತು ಸುಖ ದುಃಖದ ಲೇಶವೂ ಇಲ್ಲ ಮಿಕ್ಕ ಯಾವ ಸಂಸಾರದ ಧರ್ಮವೂ ನನ್ನಲ್ಲಿಲ್ಲ ನಾನು

ಜನ್ಮರಹಿತನಾದ ಕೂಟಸ್ಥನು. ಹೀಗೆಂದು ತನ್ನ ಸ್ವರೂಪದ ತಿಳುವಳಿಕೆಗೆ ಭ್ರಾಂತಿನಾಶವೆನ್ನುತ್ತಾರೆ.

ವಿವರಣೆ :

ಪ್ರಶ್ನೆ ೧ ನನ್ನಲ್ಲಿ ಜನ್ಮ-ಮರಣಗಳಿಲ್ಲವೆಂದರೇನು ?

ಜನ್ಮ-ಮರಣಗಳು ಶರೀರ ಧರ್ಮಗಳು ನಾನು ಶರೀರಕ್ಕೆ ವಿಲಕ್ಷಣ ಆದುದರಿಂದ ನನ್ನಲ್ಲಿ ಜನ್ಮ ಮರಣಗಳು ಸಂಭವಿಸುವುದಿಲ್ಲ.

೨. ನನ್ನಲ್ಲಿ ಸುಖ ದುಃಖಗಳ ಲೇಶವೂ ಇಲ್ಲ ಅಂದರೆ ಹೇಗೆ?

ಸುಖದುಃಖಗಳು ಅಂತಃಕರಣ ಧರ್ಮಗಳು. ನಾನು ಆ ಅಂತಃಕರಣಕ್ಕೆ ಸಾಕ್ಷಿಯಾದ ಕೂಟಸ್ಥ. ಆದುದರಿಂದ ಸುಖ ದುಃಖಗಳು ನನ್ನಲ್ಲಿಲ್ಲ.

೩. ನನ್ನಲ್ಲಿ ಸಂಸಾರದ ಯಾವ ಧರ್ಮವೂ ಇಲ್ಲ ಅಂದರೆ ಹೇಗೆ ?

ಹೇಗೆಂದರೆ, ಸಂಸಾರವು ಚಿದಾಭಾಸನಿಗೆ ಸೇರಿದ್ದು. ನಾನು ಚಿದಾಭಾಸನಿಗೂ ವಿಲಕ್ಷಣನು ಆದುದರಿಂದ ಸಂಸಾರದ ಧರ್ಮಗಳು ನನ್ನಲ್ಲಿಲ್ಲ

ಪ್ರಶ್ನೆ – ಹಾಗಾದರೆ ನಾನು ಯಾರು ?

ಉತ್ತರ – ನಾನು ಅಜನ್ಯನು ಅಂದರೆ ಜನ್ಮರಹಿತನಾದ ಕೂಟಸ್ಥನು ಷಡ್ಭಾವ ವಿಕಾರಗಳಲ್ಲಿ ಜನ್ಮವು ಮೊದಲನೆ ವಿಕಾರ. ಆ ಮೊದಲನೆ ವಿಕಾರವೇ ಇಲ್ಲವೆಂದ ಮೇಲೆ ಉಳಿದ ಐದು ವಿಕಾರಗಳೂ ಇಲ್ಲವೆಂದು ಹೇಳಬೇಕಾಗಿಲ್ಲ. ಆದ್ದರಿಂದ ನಾನು ನಿರ್ವಿಕಾರವಾದ ಕೂಟಸ್ಥ. ಈ ರೀತಿ ವಿಚಾರದಿಂದ ನಿರ್ಣಯವಾದ ಸರ್ವಾನರ್ಥ ನಿಷೇಧವನ್ನು ಮಾಡುವುದೇ ಭ್ರಾಂತಿ ನಾಶದ ಲಕ್ಷಣ. ಇದಕ್ಕೆ ಶೋಕನಾಶವೆಂದು ಮತ್ತೊಂದು ಹೆಸರು.

ಸಂಬಂಧ – ಮುಂದಿನ ದೋಹಾದಲ್ಲಿ ಅತಿಹರ್ಷದ ಸ್ವರೂಪವು ವರ್ಣಿಸಲ್ಪಡುತ್ತದೆ.

**ದೋಹಾ** – ಸಂಶಯ ರಹಿತ ಸ್ವರೂಪಕೊ, ಹೊ ಇಜು ಅದ್ವಯ ಜ್ಞಾನ ।
ತಬ ಉಪಜೈಹಿಯು ಮೋದತವ, ಸೊತೂ ಹರ್ಷ ಪಿಛಾನ ॥೧೦೫॥

ತಾತ್ಪರ್ಯ – ಹೇ ಶಿಷ್ಯನೇ, ನಾನು ಅದ್ವಯ ಬ್ರಹ್ಮ ಸ್ವರೂಪನು ಎಂದು ತನ್ನ ಸ್ವರೂಪ ಸಂಬಂಧವಾದ ಸಂಶಯರಹಿತ ಜ್ಞಾನವಾದ ಕೂಡಲೇ ಆಗುವ ಆನಂದಕ್ಕೆ ಅತಿ ಹರ್ಷವೆನ್ನುತ್ತಾರೆ.

ವಿವರಣೆ : ಈ ಅತಿ ಹರ್ಷಕ್ಕೆ ವೇದಾಂತ ಪಂಚದಶಿ ಕರ್ತರಾದ ಶ್ರೀ ವಿದ್ಯಾರಣ್ಯ ಸ್ವಾಮಿಗಳು ನಿರಂಕುಶ ತೃಪ್ತಿ ಎಂದು ಕರೆದಿರುತ್ತಾರೆ.

ಪ್ರಶ್ನೆ – ನಿರಂಕುಶ ತೃಪ್ತಿ ಎಂದರೇನು ?

ಉತ್ತರ – ಯಾವ ತೃಪ್ತಿಯು ಉಂಟಾದ ಮೇಲೆ ಇಚ್ಛೆಯು ಜನಿಸುವುದಿಲ್ಲವೋ ಅದಕ್ಕೆ ನಿರಂಕುಶ ತೃಪ್ತಿ ಎನ್ನುತ್ತಾರೆ.

ಪ್ರಶ್ನೆ – ಸಾಂಕುಶ ತೃಪ್ತಿ ಎಂದರೇನು ?

ಉತ್ತರ – ವಿಷಯಾನಂದವು ಪ್ರಾಪ್ತಿಯಾದ ಮೇಲೂ ಅದರಲ್ಲಿ ಕೊರತೆ ಇರುವುದರಿಂದಲೂ, ಅದು ಅನಿತ್ಯವಾದುದರಿಂದಲೂ, ಅದರನಂತರ ಅನೇಕ ಇಚ್ಛೆಗಳು ಉಂಟಾಗುವ ಸಂಭವ ಇರುವುದರಿಂದಲೂ ಆ ತೃಪ್ತಿಗೆ ಸಾಂಕುಶ ತೃಪ್ತಿ ಎನ್ನುತ್ತಾರೆ

ಪ್ರಶ್ನೆ – ಬ್ರಹ್ಮಾನಂದಕ್ಕೆ ನಿರಂಕುಶ ತೃಪ್ತಿ ಎನ್ನಲು ಕಾರಣವೇನು ?

ಉತ್ತರ – ಬ್ರಹ್ಮಾನಂದಕ್ಕೆ ಶ್ರೇಷ್ಠವಾದ ಮತ್ತೊಂದು ಆನಂದವು ಇಲ್ಲನೇ ಇಲ್ಲ. ಅದು ನಿತ್ಯವಾದುದರಿಂದ ಅದರಿಂದ ಉಂಟಾಗುವ ತೃಪ್ತಿಯು ನಿರಂಕುಶ ತೃಪ್ತಿ.

ಧನ್ಯೋಽಹಂ, ಧನ್ಯೋಽಹಂ ನಿತ್ಯಂ ಸ್ವಾತ್ಮಾನ ಮಂಜಸಾ ವೇದ್ಮಿ ।
ಧನ್ಯೋಽಹಂ, ಧನ್ಯೋಽಹಂ ಬ್ರಹ್ಮಾನಂದೊ ವಿಭಾತಿಮೇ ಸ್ಪಷ್ಟಂ ॥
(ಪಂಚದಶಿಯಲ್ಲಿ ಶ್ರೀ ವಿದ್ಯಾರಣ್ಯರು)

ಈ ಶ್ಲೋಕದಲ್ಲಿ ಜಾನಿಯು ತನ್ನ ಮನಸ್ಸಿನಲ್ಲಿ ಯಾವ ಚಿಂತನೆಯನ್ನು ಮಾಡುತ್ತಾನೋ ಅದರ ವಿವರಣೆ ಇದೆ.

ಅರ್ಥ – ನಾನು ನನ್ನ ನಿಜರೂಪವಾದ ದೇಶಕಾಲಾದ್ಯನವಚ್ಛಿನ್ನವಾದ ಪ್ರತ್ಯಗಾತ್ಮನನ್ನು ಸಾಕ್ಷಾತ್ತಾಗಿ ತಿಳಿದುಕೊಂಡೆನು. ಆದುದರಿಂದಲೇ

ನಾನು ಧನ್ಯನಾದೆನು, ಕೃತಕೃತ್ಯನಾದೆನು. I have done my duty ಅಂದರೆ ನಾನು ಕೃತಕೃತ್ಯನು ಎಂದು ಆತ್ಮಲಾಭ ನಿಮಿತ್ತಕವಾದ ತೃಪ್ತಿಯನ್ನು ಅನುಭವಿಸುತ್ತಾನೆ. ಮತ್ತು ನನ್ನಲ್ಲಿ ಬ್ರಹ್ಮಸ್ವರೂಪವಾದ ಆನಂದವು ಸ್ಪಷ್ಟವಾಗಿ ಸ್ಫುರಿಸುತ್ತದೆ. ಆದುದರಿಂದ ನಾನು ಕೃತಕೃತ್ಯನು ಎಂದು ಆತ್ಮಜ್ಞಾನ ಫಲದ ಲಾಭ ನಿಮಿತ್ತಕವಾದ ತೃಪ್ತಿಯನ್ನು ಅನುಭವಿಸುತ್ತಾನೆ

ಅಹೋ ಶಾಸ್ತ್ರ ಮಹೋ ಶಾಸ್ತ್ರ ಮಹೋ ಗುರು ಮಹೋ ಗುರುಃ ।
ಅಹೋ ಜ್ಞಾನ ಮಹೋ ಜ್ಞಾನ ಮಹೋ ಸುಖ ಮಹೋ ಸುಖಂ ॥

ಅರ್ಥ – ಓಹೋ, ವೇದಾಂತ ಶಾಸ್ತ್ರ ಎಷ್ಟು ಮನೋಹರ! ಓಹೋ, ವೇದಾಂತ ಶಾಸ್ತ್ರವು ಎಷ್ಟು ಮನೋಹರ! ಓಹೋ, ನನ್ನ ಗುರುವು ಎಂಥವನು! ಓಹೋ, ನನ್ನ ಗುರುವು ಎಂಥವನು! ಓಹೋ, ಅದ್ವೈತಾತ್ಮ ತತ್ತ್ವಜ್ಞಾನವು ಎಂತಹ ಪವಿತ್ರವಾದದ್ದು! ಎಂದು ತನ್ನಲ್ಲಿ ತಾನು ಸಂತೋಷಿಸುತ್ತಾನೆ.

ಇನ್ನು ಇಂತಹ ಕೆಲವು ಶ್ಲೋಕಗಳಿಂದ ಶ್ರೀ ವಿದ್ಯಾರಣ್ಯ ಸ್ವಾಮಿಗಳು ಜ್ಞಾನದಿಂದಾಗುವ ತೃಪ್ತಿಯನ್ನು ವರ್ಣಿಸಿದ್ದಾರೆ.

ಪ್ರಶ್ನೆ – ಒಂದೊಂದು ಪದವನ್ನು ಎರಡೆರಡು ಸಾರಿ ಏಕೆ ಉಚ್ಚಾರ ಮಾಡಬೇಕಾಗಿತ್ತು? ಒಂದೇ ಸಾರಿ ಉಚ್ಚಾರ ಮಾಡಿದ್ದರೆ ಸಾಕಾಗುತ್ತಿರಲಿಲ್ಲವೇ?

ಉತ್ತರ – "ಆದರಾದ್ವಿರುಕ್ತಿಃ" "ವಿಸ್ಮಯಾದ್ವಿರುಕ್ತಿಃ" ಎಂದು ಶಾಸ್ತ್ರದಲ್ಲಿ ಎರಡು ಸ್ಥಳದಲ್ಲಿ ದ್ವಿರುಕ್ತಿಯನ್ನು ಹೇಳಿದೆ. ಆದರ ಪ್ರಸಂಗದಲ್ಲಿಯೂ, ವಿಸ್ಮಯ ಪ್ರಸಂಗದಲ್ಲಿಯೂ ಒಂದೇ ಪದವನ್ನು ಎರಡು ಸಾರಿ ಹೇಳುವ ಪರಿಪಾಠ ಉಂಟು. ಈ ರೀತಿಯಾಗಿ ಅತಿಹರ್ಷವು ಅನೇಕ ವಿಧವಾಗಿ ಶಾಸ್ತ್ರದಲ್ಲಿ ವರ್ಣಿಸಲ್ಪಟ್ಟಿದೆ. ಅದರ ನಿಜವಾದ ಅನುಭವವಾಗಬೇಕಾದರೆ ತನ್ನಲ್ಲಿ ತಾನು ಬ್ರಹ್ಮಾನಂದವನ್ನು ಅನುಭವಿಸಬೇಕು.

ಸಂಬಂಧ – ಸಪ್ತಾವಸ್ಥೆಗಳ ವಿಚಾರವು ಮುಗಿದ ಮೇಲೆ "ಅಹಂ

ಬ್ರಹ್ಮಾsಸ್ಮಿ" ಎಂಬ ಜ್ಞಾನವು ಯಾರಿಗೆ ಆಗುವುದೆಂಬುದನ್ನು ಮುಂದಿನ ಎರಡು ದೋಹಾಗಳಲ್ಲಿ ವರ್ಣಿಸಿದೆ

ದೋಹಾ – ಕಹೀ ಅವಸ್ಥಾ ಸಾತ ಮೈ, ತೊಕೂ ಸಿಷ್ಯ ಸುಜಾನ ।
ಸೋ ಸಗರಿ ಆಭಾಸಕೀ, ಹೈ ತಿನಹಿಮೈ ಜ್ಞಾನ ॥೧೦೬॥

ಜ್ಞಾನ ಹೋತ ಹೈ ಕೌನಕೂ, ಯಹ ಪೂಛೀ ತೈ ಬಾತ ।
ಮೈ ತಾಕೊ ಉತ್ತರ ಕಹ್ಯೋ, ಚಹೈಸು ಪೂಛವ ತಾತ ॥
॥೧೦೭॥

ತಾತ್ಪರ್ಯ – ಹೇ ಉತ್ತಮನಾದ ಶಿಷ್ಯನೇ, ನಾನು ನಿನಗೆ ಏಳು ಅವಸ್ಥೆಗಳ ಸ್ವರೂಪವನ್ನು ಹೇಳಿದೆನು. ಅವೆಲ್ಲವೂ ಚಿದಾಭಾಸನಿಗೆ ಸೇರಿದವುಗಳು "ಅಹಂ ಬ್ರಹ್ಮಾsಸ್ಮಿ'' ಎಂಬ ಜ್ಞಾನವೂ ಸಹ ಈ ಸಪ್ತಾವಸ್ಥೆಯೊಳಗೆ ಸೇರಿದ್ದು ಅಂದರೆ ಈ ಅವಸ್ಥೆಗಳಿರುವ ಚಿದಾಭಾಸನಿಗೆ ''ಅಹಂ ಬ್ರಹ್ಮಾsಸ್ಮಿ" ಎಂಬ ಜ್ಞಾನವಾಗುತ್ತದೆ ಎಂದರ್ಥ

ನೀನು ''ಅಹಂ ಬ್ರಹ್ಮಾsಸ್ಮಿ'' ಎಂಬ ಜ್ಞಾನವು ಯಾರಿಗೆ ಆಗುತ್ತದೆಂದು ಕೇಳಿದ್ದೀಯಲ್ಲವೇ ? ಅದಕ್ಕೂ ನಿನಗೆ ಸಮಾಧಾನವನ್ನು ಹೇಳಿದೆನು. ನೀನು ಇನ್ನು ಏನಾದರೂ ಕೇಳಬೇಕೆಂದಿದ್ದರೆ ಕೇಳು.

ಸಂಬಂಧ – ಮುಂದಿನ ಮೂರು ದೋಹಾಗಳಲ್ಲಿ ಶಿಷ್ಯನ ಪ್ರಶ್ನೆಯ ಗೂಢಾಭಿಪ್ರಾಯವು ಪ್ರತಿಪಾದಿಸಲ್ಪಡುತ್ತದೆ.

ದೋಹಾ – ಭಗವನ ಹೈ ಆಭಾಸಕೂ, "ಅಹಂಬ್ರಹ್ಮ" ಯಹ ಜ್ಞಾನ ।
ತುಮ ಭಾಖ್ಯೋ ಸೋ ಮೈ ಲಖ್ಯೋ, ಪುನಿ ಸಂಕಾ ಇಕ ಆನ ॥ ೧೦೮ ॥

ಹೈ ಆಭಾಸ ಬ್ರಹ್ಮ ತೈ ನ್ಯಾರಾ,
ಅಸ ತುಮ ಪೂರ್ವ ಕಿಯೊ ನಿರ್ಧಾರ ।
ಅಹಂಬ್ರಹ್ಮ ಸೊ ಕೈಸೈ ಜಾನೈ,
ಆಪಹಿ ಭಿನ್ನ ಬ್ರಹ್ಮ ತೈ ಮಾನೈ ॥೧೦೯॥

ಜೊ ಜಾನ್ಯೈ ತೌ ಮಿಥ್ಯಾ ಜ್ಞಾನಾ,
ಹೋ ಇ ಜೇವರಿ–ಭುಜಗ–ಸಮಾನಾ ।
ಶ್ರೀ ಗುರು ಯಹ ಸಂದೇಹ ಮಿಟಾ ವೊ,
ಯುಕ್ತಿ–ಸಹಿತ ನಿಜ–ಉಕ್ತಿ ಸುನಾಉ ॥೧೧೦॥

ತಾತ್ಪರ್ಯ – ಹೇ ಸದ್ಗುರು, ಕೂಟಸ್ಥ–ಬ್ರಹ್ಮ ಈ ಎರಡೂ ಒಂದೇ ಪದಾರ್ಥ. ಚಿದಾಭಾಸನು ಬ್ರಹ್ಮಕ್ಕಿಂತ ಭಿನ್ನನು ಎಂದು ತಾವು ಹಿಂದೆ ಹೇಳಿದ್ದು ಸರಿಯಷ್ಟೆ. ಆ ಬ್ರಹ್ಮಕ್ಕಿಂತ ಭಿನ್ನವಾದ ಚಿದಾಭಾಸನಿಗೆ "ನಾನು ಬ್ರಹ್ಮ"ವೆಂಬ ಜ್ಞಾನವು ಸಂಭವಿಸಲಾರದು. ನನ್ನ ಅಧಿಷ್ಠಾನನಾದ ಕೂಟಸ್ಥನು ಬ್ರಹ್ಮ ರೂಪನು ಎಂಬ ಜ್ಞಾನವು ಚಿದಾಭಾಸನಿಗಾಗಿದ್ದರೆ ಯಥಾರ್ಥವಾಗುತ್ತಿತ್ತು. ಏಕೆಂದರೆ "ಅಹಂ" ಎಂಬ ಪದಕ್ಕೆ ತನ್ನ ಸ್ವರೂಪವೆಂದರ್ಥ ಚಿದಾಭಾಸನ ಸ್ವರೂಪವು ಮಿಥ್ಯಾ ಎಂಬುದು ಸ್ಪಷ್ಟವೇ. ಆದುದರಿಂದಲೇ ಅವನು ಬ್ರಹ್ಮಕ್ಕಿಂತ ಭಿನ್ನನು. ಈ ರೀತಿ ಬ್ರಹ್ಮಕ್ಕಿಂತ ಭಿನ್ನನಾದ ಚಿದಾಭಾಸನಿಗೆ ನಾನು ಬ್ರಹ್ಮವೆಂಬ ಜ್ಞಾನವು ಉಂಟಾದರೆ ಅದು ಮಿಥ್ಯಾ ಜ್ಞಾನವೆಂದು ಹೇಳಬೇಕು.

ಉದಾಹರಣೆ – ರಜ್ಜುವಿಗಿಂತ ಭಿನ್ನವಾದ ಸರ್ಪಕ್ಕೆ "ನಾನು ರಜ್ಜು" ಎಂಬ ಜ್ಞಾನವು ಮಿಥ್ಯೆ ಅಂದರೆ ಭ್ರಾಂತಿ ರೂಪವಾಗಿದೆ. ಇದರಂತೆ ಚಿದಾಭಾಸನಿಗೆ "ಅಹಂ ಬ್ರಹ್ಮಾऽಸ್ಮಿ" ಎಂಬ ಜ್ಞಾನವಾದರೆ ಆ ಜ್ಞಾನವು ಭ್ರಾಂತಿ ರೂಪವಾಗಿಯೇ ಇರುವುದು

ವಿವರಣೆ – ಇಲ್ಲಿ ಪ್ರಶ್ನೆಕರ್ತನಾದ ಶಿಷ್ಯನನ್ನು ಕುರಿತು ಪ್ರತಿ ಪ್ರಶ್ನೆಯನ್ನು ಮಾಡಬೇಕು ಏನೆಂದರೆ –

ಪ್ರಶ್ನೆ ೧ – ಬ್ರಹ್ಮಜ್ಞಾನ ಸ್ವರೂಪವು ಮಿಥ್ಯಾ ಸಂಸಾರಾಂತರ್ಗತವಾದುದರಿಂದಲೂ, ಮಿಥ್ಯಾ ಚಿದಾಭಾಸನ ಆಶ್ರಯದಲ್ಲಿರುವುದರಿಂದಲೂ ಮಿಥ್ಯೆಯಾಗಿರುತ್ತದೆ. ಆದುದರಿಂದ ಈ ಮಿಥ್ಯಾ ಜ್ಞಾನದಿಂದ, ಮಿಥ್ಯಾ ಮೃಗಜಲದಿಂದ ತೃಷ್ಣೆಯು ನಾಶವಾಗದಂತೆ ಸಂಸಾರ ನಿವೃತ್ತಿಯು ಹೇಗಾಗುತ್ತದೆ ?

ಪ್ರಶ್ನೆ ೨ – ಇಲ್ಲವೇ, ತತ್ತ್ವಜ್ಞಾನಕ್ಕೆ ವಿಷಯವಾದ ಜೀವ

ಬ್ರಹ್ಮೈಕ್ಯವು ಸರ್ಪ ರಜ್ವೈಕ್ಯದಂತೆ ಮಿಥ್ಯೆಯಾಗಿರುವುದು. ಈ ಮಿಥ್ಯಾ ಜ್ಞಾನದಿಂದ ಸಂಸಾರ ನಿವೃತ್ತಿಯು ಹೇಗಾಗುವುದೆಂದು ಕೇಳುವಿಯಾ ?

ಇವುಗಳಲ್ಲಿ ಜ್ಞಾನ ಸ್ವರೂಪವು ಮಿಥ್ಯೆ ಎಂಬುದು ನಮಗೂ ಸಮ್ಮತವೇ ಆದರೂ ಆ ಮಿಥ್ಯೆಯಾದ ಜ್ಞಾನದಿಂದ ಸಂಸಾರ ನಿವೃತ್ತಿಯು ಸಂಭವಿಸುತ್ತದೆ ಏಕೆಂದರೆ "ಯಕ್ಷಾನುರೂಪೋಹಿ ಬಲಿ" "ಯಕ್ಷದಂತೆ ಬಲಿ" ಎಂಬುದು ಲೋಕ ಪ್ರಸಿದ್ಧವಾಗಿದೆ ಎಂಬಂತೆ ಮಿಥ್ಯಾ ಸಂಸಾರದ ನಿವೃತ್ತಿಗೆ ಮಿಥ್ಯಾಜ್ಞಾನವೇ ಬೇಕು.

ಉದಾಹರಣೆ – ಒಬ್ಬನಿಗೆ ಸ್ವಪ್ನದಲ್ಲಿ ರೋಗ ಬಂದಿದೆ. ಈ ರೋಗ ನಿವಾರಣೆಗೆ ಅಂಗಡಿಯಲ್ಲಿ ಸಿಗುವ ಔಷಧಿಗಳು ಪ್ರಯೋಜನಕಾರಿಯಾಗಲಾರವು. ಆ ರೋಗಕ್ಕ ಸ್ವಪ್ನದ ಔಷಧಿಯು ಬೇಕೇ ವಿನಃ ಜಾಗ್ರತ್ತಿನ ಔಷಧಿಯಿಂದ ಗುಣವಾಗಲಾರದು. ಸಾರಾಂಶವೇನೆಂದರೆ, ಸ್ವಪ್ನದಲ್ಲಿ ಹತ್ತಿರವಿರುವ ಹುಲಿಯನ್ನು ಕೊಲ್ಲಲು ಮನೆಯಲ್ಲಿರುವ ತುಪಾಕಿಗಳು ಪ್ರಯೋಜನಕ್ಕೆ ಬಾರದೆ ಸ್ವಪ್ನ ಸಾಧನೆಯಿಂದಲೇ ಹುಲಿಯನ್ನು ಓಡಿಸುವಂತೆ ಮಿಥ್ಯಾ ಸಂಸಾರವು ಮಿಥ್ಯಾ ಜ್ಞಾನದಿಂದಲೇ ನಿವೃತ್ತಿಯಾಗಬೇಕು.

ನಿಯಮವೇನೆಂದರೆ, ಸಮಾನ ಸತ್ತೆಯುಳ್ಳ ಪದಾರ್ಥಗಳು ಪರಸ್ಪರ ಸಾಧಕ ಬಾಧಕಗಳಾಗುತ್ತವೆ ಈ ನಿಯಮದಿಂದ ಮಿಥ್ಯಾಜ್ಞಾನದಿಂದಲೇ ಮಿಥ್ಯಾ ಸಂಸಾರ ನಿವೃತ್ತಿಯು ಸಂಭವಿಸುತ್ತದೆ ಮೃಗಜಲ ಮತ್ತು ತೃಷ್ಣೆ– ಇವು ಸಮಸತ್ತೆಯಲ್ಲ ಆದುದರಿಂದ ಪ್ರಾತಿಭಾಸಿಕವಾದ ಮೃಗಜಲದಿಂದ ವ್ಯಾವಹಾರಿಕವಾದ ತೃಷ್ಣೆಯು ನಿವೃತ್ತಿಯಾಗಲಾರದು. ಆದುದರಿಂದ ನೀನು ಮಾಡಿದ ಪ್ರಶ್ನೆಗೆ ನಾವು ಸರಿಯಾದ ಉತ್ತರವನ್ನು ಕೊಟ್ಟಿರುತ್ತೇವೆ. "ಅಹಂ ಬ್ರಹ್ಮಾಽಸ್ಮಿ" ಎಂಬ ಜ್ಞಾನವು ಮಿಥ್ಯಾ ಚಿದಾಭಾಸನಿಗೆ ಆಗುತ್ತದೆ. ಕೂಟಸ್ಥ ಚೈತನ್ಯಕ್ಕೆ ಅಲ್ಲ.

ಸಂಬಂಧ – ಇನ್ನು ಮುಂದಿನ ಮೂರು ದೋಹಾಗಳಲ್ಲಿ "ಅಹಂ" ಎಂಬ ಶಬ್ದದಲ್ಲಿ ಅಡಗಿರುವ ಅರ್ಥವನ್ನು ತೋರಿಸಿ, ಜೀವಬ್ರಹ್ಮರ ಏಕತ್ವವನ್ನು ಬೋಧಿಸುತ್ತಾರೆ.

ದೋಹಾ – ಅಹಂ ಶಬ್ದಕೆ ಅರ್ಥಕೊ, ಸುನ ಅಬ ಸಿಷ್ಯ ವಿವೇಕ ।
ತವ ಹಿಯಕೆ ಜಾಸೊಂ ನಸ್ಯೆ, ಸಂಕ ಕಲಂಕ-ಅನೇಕ ॥೧೧೧॥

ಹ್ವೈ ಯದ್ಯಪಿ ಆಭಾಸ ಮ್ಯೆ, "ಅಹಂಬ್ರಹ್ಮ" ಯಹ ಜ್ಞಾನ ।
ತಥಾಪಿ ಸೊ ಕೂಟಸ್ಥಕೊ, ಲಹೈ ಆಪ ಅಭಿಮಾನ ॥೧೧೨॥

ತಾಕೋ ಸದಾ ಅಭೇದ ಹ್ವೈ, ವಿಭುಚೇತನತೈ ತಾತ ।
ಬಾಧ ಸಮ್ಯೆ ನಿಜರೂಪ ಹೂ, ಬ್ರಹ್ಮರೂಪ ದರಸಾತ ॥೧೧೩॥

ತಾತ್ಪರ್ಯ – ಹೇ ಶಿಷ್ಯ, "ನಾನು" ಎಂಬ ಶಬ್ದದ ಅರ್ಥವನ್ನು ವಿವೇಕಪೂರ್ವಕವಾಗಿ ಹೇಳುತ್ತೇನೆ, ಕೇಳು. "ನಾನು" ಎಂಬ ವಸ್ತುವನ್ನು ಸರಿಯಾಗಿ ತಿಳಿದುಕೊಂಡರೆ ಹೃದಯದ ಶಂಕಾ ರೂಪಗಳೆಲ್ಲವೂ ದೂರವಾಗುತ್ತವೆ "ಅಹಂ ಬ್ರಹ್ಮಾಸ್ಮಿ" ಎಂಬ ಜ್ಞಾನವು ಚಿದಾಭಾಸನಿಗೆ ಆಗುವುದಾದರೂ ಆ ಚಿದಾಭಾಸನು ಕೂಟಸ್ಥನ ವಿಷಯದಲ್ಲಿಯೂ ಸಹ "ನಾನು" ಎಂಬ ಅಭಿಮಾನವನ್ನು ತಾಳುತ್ತಾನೆ. ಅಂದರೆ ಸ್ವಯಂ ಕೂಟಸ್ಥನೊಂದಿಗೆ ತಾದಾತ್ಮ್ಯ ಅಭಿಮಾನವುಳ್ಳವನಾಗಿದ್ದಾನೆ. ಆ ಕೂಟಸ್ಥನಿಗೂ ವ್ಯಾಪಕ ಚೈತನ್ಯವಾದ ಬ್ರಹ್ಮಕ್ಕೂ ಸಹ ಅಭೇದವಿದೆ. ಆದುದರಿಂದ ಚಿದಾಭಾಸನೂ ಸಹ ತನ್ನ ಮಿಥ್ಯಾ ಸ್ವರೂಪವನ್ನು ಬಾಧೆ ಮಾಡಿ ತನ್ನನ್ನು ಬ್ರಹ್ಮವೆಂದು ತಿಳಿಯಬಹುದು

ಪ್ರಶ್ನೆ – "ಅಹಂ ಬ್ರಹ್ಮಾಸ್ಮಿ" ವಾಕ್ಯದಲ್ಲಿರುವ "ಅಹಂ" ಪದಕ್ಕೆ ಅರ್ಥವೇನು ?

ಉತ್ತರ – "ಅಹಂ ಬ್ರಹ್ಮಾಸ್ಮಿ" ಎಂಬ ಜ್ಞಾನವು ಬುದ್ಧಿಸಹಿತ ಆಭಾಸನಿಗಾದರೂ, ಕೂಟಸ್ಥನಿಗೆ ಆಗದೆ ಹೋದರೂ ಆ ಆಭಾಸನು ನಿಜವಾದ ಕೂಟಸ್ಥನನ್ನು ಸುಳ್ಳಾದ ತನ್ನ ಸ್ವರೂಪವನ್ನು ಸೇರಿ "ನಾನು" ಎಂದು ಅನುಭವಿಸುತ್ತಾನೆ. ಕೇವಲ ಆಭಾಸ ಪದಾರ್ಥವು "ನಾನು" ಎಂದು ಅನುಭವಿಸುವುದಿಲ್ಲ. ಇದೇ "ಅಹಂ" ಪದಕ್ಕೆ ಅರ್ಥ. "ಅಹಂ" ಶಬ್ದದಿಂದ ಅನುಭವಕ್ಕೆ ಬರುವ ಕೂಟಸ್ಥನಿಗೂ ಬ್ರಹ್ಮಕ್ಕೂ ಸದಾ ಅಭೇದವಿದೆ.

ಉದಾಹರಣೆ – ಮಹಾಕಾಶಕ್ಕೂ, ಘಟಾಕಾಶಕ್ಕೂ ಸದಾ ಅಭೇದ ವಿದೆ. ಮಹಾಕಾಶವೆಂದರೆ ಪರಬ್ರಹ್ಮ ಸ್ವರೂಪ. ಘಟಾಕಾಶವೆಂದರೆ ಕೂಟಸ್ಥ ಸ್ವರೂಪ ಅಂದರೆ ಮುಖ್ಯ ಸಾಮಾನಾಧಿಕರಣ್ಯ ದೃಷ್ಟಿಯಿಂದ ಕೂಟಸ್ಥನು ಬ್ರಹ್ಮಸ್ವರೂಪನೇ ಬಾಧ ಸಾಮಾನಾಧಿಕರಣ್ಯ ದೃಷ್ಟಿಯಿಂದ ಚಿದಾಭಾಸನು ಬ್ರಹ್ಮವೇ

ಇದೇ ವಿಷಯವನ್ನು ಭಗವದ್ಗೀತೆಯ ೧೩ನೇ ಅಧ್ಯಾಯದಲ್ಲಿ ಶ್ರೀಕೃಷ್ಣ ಭಗವಂತನು "ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ" – ಕ್ಷೇತ್ರಜ್ಞನೂ ನಾನೇ, ಕ್ಷೇತ್ರವೂ ನಾನೇ ಎಂದಿದ್ದಾನೆ ಮುಖ್ಯ ಸಾಮಾನಾಧಿಕರಣ್ಯ ದೃಷ್ಟಿಯಿಂದ ಕ್ಷೇತ್ರಜ್ಞನೂ ಪರಮಾತ್ಮನೇ ಬಾಧ ಸಾಮಾನಾಧಿಕರಣ್ಯ ದೃಷ್ಟಿಯಿಂದ ಕ್ಷೇತ್ರವೂ ಪರಮಾತ್ಮನೇ

ಪ್ರಶ್ನೆ – ಮುಖ್ಯ ಸಾಮಾನಾಧಿಕರಣ್ಯ ಎಂದರೇನು ?

ಉತ್ತರ – ಸಾಮಾನಾಧಿಕರಣ್ಯ ಶಬ್ದದ ಅರ್ಥ ತಿಳಿದರೆ ಮುಖ್ಯ ಸಾಮಾನಾಧಿಕರಣ್ಯ ಎಂಬ ಪದದ ಅರ್ಥವು ತಿಳಿಯುತ್ತದೆ. ಯಾವ ಪದಾರ್ಥಗಳ ಅಧಿಕರಣ ಅಂದರೆ ಆಶ್ರಯವು ಒಂದೇ ಆಗಿರುತ್ತದೋ ಅವುಗಳ ಪರಸ್ಪರ ಸಂಬಂಧವನ್ನೇ ಸಾಮಾನಾಧಿಕರಣ್ಯ ಎನ್ನುತ್ತಾರೆ.

ಉದಾಹರಣೆ – ಒಂದು ಮೇಜಿನ ಮೇಲೆ ಇರುವ ಅನೇಕ ಪದಾರ್ಥಗಳಿಗೆ ಮೇಜು ಆಧಾರವಾಗಿರುವುದರಿಂದ ಆ ಮೇಜಿನ ಮೇಲಿರುವ ಪದಾರ್ಥಗಳು ಪರಸ್ಪರ ಸಾಮಾನಾಧಿಕರಣ್ಯವುಳ್ಳವು ಎಂದು ಹೇಳಬಹುದು. ಇದನ್ನೇ ಇನ್ನೊಂದು ಉದಾಹರಣೆಯಿಂದ ಸ್ಪಷ್ಟವಾಗಿ ತಿಳಿದುಕೊಳ್ಳಬಹುದು.

ಒಂದು ಗಡಿಗೆಯ ವಿಷಯದಲ್ಲಿ ವಾಚ್ಯತ ಸಂಬಂಧವಿರುವ ಘಟ ಮತ್ತು ಕಲಶಗಳಿಗೆ ಪರಸ್ಪರವಾಗಿ ಸಾಮಾನಾಧಿಕರಣ್ಯ ಸಂಬಂಧವಿದೆ ಏಕೆಂದರೆ ಆ ಎರಡೂ ಪದಗಳು ವಾಚ್ಯತಾ ಸಂಬಂಧದಿಂದ ತಮ್ಮ ವಾಚ್ಯವಾದ ಘಟರೂಪ ಒಂದೇ ಅಧಿಕರಣದಲ್ಲಿ ಇರುತ್ತವೆ. ಇದರಂತೆ "ಅಹಂ ಬ್ರಹ್ಮಾಽಸ್ಮಿ'' ಎಂಬ ಈ ಮಹಾವಾಕ್ಯದಲ್ಲಿ "ಅಹಂ'' ಶಬ್ದಕ್ಕೂ, "ಬ್ರಹ್ಮ" ಶಬ್ದಕ್ಕೂ ಸಾಮಾನಾಧಿಕರಣ್ಯ ಸಂಬಂಧವಿದೆ

ಯಾವ ಎರಡು ಪದಾರ್ಥಗಳ ಅರ್ಥವು ಒಂದೇ ಆಗಿರುವುದೋ ಅವುಗಳ ಸಂಬಂಧವು "ಮುಖ್ಯ ಸಾಮಾನಾಧಿಕರಣ್ಯ" ಎನಿಸುವುವು. "ಸೋಯಂ ದೇವದತ್ತಃ"– ಈ ವಾಕ್ಯದಲ್ಲಿರುವ "ಸಃ" ಮತ್ತು ''ಅಯಂ" ಎಂಬ ಎರಡು ಪದಗಳು ಒಬ್ಬನೇ ದೇವದತ್ತನನ್ನು ತೋರಿಸುತ್ತವೆ. ಇದು ಮುಖ್ಯ ಸಾಮಾನಾಧಿಕರಣ್ಯದ ಲಕ್ಷಣ.

ಪ್ರಶ್ನೆ – ಬಾಧ ಸಾಮಾನಾಧಿಕರಣ್ಯ ಎಂದರೇನು ?

ಉತ್ತರ – ಎರಡು ಪದಗಳಲ್ಲಿ ಒಂದು ಪದದ ಅರ್ಥವು ಬಾಧಿತವಾಗಿ ಮತ್ತೊಂದು ಪದದ ಅರ್ಥವು ವಿವಕ್ಷಿತವಾಗಿದ್ದರೆ ಆ ಎರಡೂ ಪದಗಳಲ್ಲಿರುವ ಪರಸ್ಪರ ಸಂಬಂಧಕ್ಕೆ "ಬಾಧ ಸಾಮಾನಾಧಿಕರಣ್ಯ"ವೆನ್ನುತ್ತಾರೆ.

ಉದಾಹರಣೆ – "ಸ್ಥಾಣುಃ ಪುರುಷಃ". ದೂರದಿಂದ ನೋಡಿದಾಗ ಒಬ್ಬ ಮನುಷ್ಯನಿಗೆ ಎದುರಿಗಿರುವ ವಸ್ತುವು "ಸ್ಥಾಣು"ವೆಂದು ಭ್ರಮೆಯಾಯಿತು. ಅದೇ ಮನುಷ್ಯನು ಸಮೀಪಕ್ಕೆ ಹೋಗಿ ನೋಡಲಾಗಿ "ಪುರುಷ" ಎಂದು ತಿಳಿದುಕೊಂಡನು ಆಗ ಆ ವ್ಯಕ್ತಿಯು "ಸ್ಥಾಣುಃ ಪುರುಷಃ" ಎನ್ನುತ್ತಾನೆ ಅಂದರೆ ನಾನು ಯಾವುದನ್ನು ಸ್ಥಾಣು ಎಂದು ತಿಳಿದಿದ್ದೆನೋ ಅದು ಸ್ಥಾಣುವಲ್ಲ, ಪುರುಷ ಎಂದು ತಿಳಿಯುತ್ತಾನೆ ಸ್ಥಾಣು ಎಂಬುದು ಮಿಥ್ಯಾ ಕಲ್ಪನೆ. ಈ ಸ್ಥಾಣು, ಪುರುಷ ಎಂಬ ಎರಡು ಪದಗಳಲ್ಲಿ ಸ್ಥಾಣು ಎಂಬ ಪದದ ಅರ್ಥವು ಬಾಧಿತವಾಗಿ ಪುರುಷ ಎಂಬ ಪದದ ಅರ್ಥವೇ ಮಾನ್ಯವಾಗಿದೆ. ಆದುದರಿಂದ ಇದಕ್ಕೆ "ಬಾಧ ಸಾಮಾನಾಧಿಕರಣ್ಯ" ಎಂದು ಹೇಳುತ್ತಾರೆ.

ದೃಷ್ಟಾಂತ – "ಅಹಂ" ಮತ್ತು "ಬ್ರಹ್ಮ" ಎಂಬ ಎರಡು ಪದಗಳಿಗೆ ಪ್ರಸಂಗಾನುಸಾರವಾಗಿ ಎರಡೂ ಸಂಬಂಧಗಳಿರುತ್ತವೆ. "ಅಹಂ" ಶಬ್ದಕ್ಕೆ ಮೂರು ಅರ್ಥ: ೧. ಕೂಟಸ್ಥ, ೨ ಬುದ್ಧಿ, ೩. ಚಿದಾಭಾಸ.

ಈ ಮೂರರಲ್ಲಿ ''ಅಹಂ" ಪದಕ್ಕೆ ಕೂಟಸ್ಥ ಎಂದು ತಿಳಿದುಕೊಂಡರೆ ಆ ಕೂಟಸ್ಥ ಮತ್ತು ಬ್ರಹ್ಮ ಎಂಬ ಎರಡು ಪದಗಳಿಗೆ ಮುಖ್ಯ ಸಾಮಾನಾಧಿಕರಣ್ಯ ಸಂಬಂಧವಿರುತ್ತದೆ. ಏಕೆಂದರೆ ಎರಡೂ ಪದಗಳಿಗೂ ಅರ್ಥವಾದ ಕೂಟಸ್ಥ ಮತ್ತು ಬ್ರಹ್ಮ ಸದಾ ಅಭಿನ್ನವಾಗಿರುತ್ತವೆ. "ಅಹಂ" ಎಂಬ

ಶಬ್ದಕ್ಕೆ ಬುದ್ಧಿ ಅಥವಾ ಆಭಾಸನೆಂದು ತಿಳಿದುಕೊಂಡರೆ ಆ ಎರಡೂ ಪದಗಳಿಗೆ ಬಾದ ಸಾಮಾನಾಧಿಕರಣ್ಯ ಸಂಬಂಧವಿರುತ್ತದೆ. ಇಲ್ಲಿ 'ಅಹಂ' ಪದದ ಅರ್ಥವು ಬಾಧಿತವಾಗಿ ಬ್ರಹ್ಮ ಪದದ ಅರ್ಥವೇ ಶೇಷವಾಗುತ್ತದೆ (ಉಳಿಯುತ್ತದೆ). ಬ್ರಹ್ಮವು ಮಾತ್ರ ಒಂದು ವಸ್ತು 'ಅಹಂ' ಶಬ್ದಕ್ಕೆ ಅರ್ಥವಾದ ಬುದ್ಧಿ ಮತ್ತು ಆಭಾಸಗಳು ಅವಸ್ತುಗಳು, ಅಂದರೆ ಕಲ್ಪನಾ ಮಾತ್ರ

ಸಂಬಂಧ – ಮುಂದಿನ ದೋಹಾದಲ್ಲಿ ಕೂಟಸ್ಥ ಮತ್ತು ಆಭಾಸ – ಈ ಎರಡರ ಭಾನವು (ಪ್ರತೀತಿ) ಒಂದೇ ಕಾಲದಲ್ಲಿ ಆಗುವುದೇ ಅಥವಾ ಭಿನ್ನ ಭಿನ್ನ ಕಾಲದಲ್ಲಿ ಆಗುವುದೇ ಎಂದು ತತ್ತ್ವದೃಷ್ಟಿಯು ಪ್ರಶ್ನೆ ಮಾಡುತ್ತಾನೆ.

## ತತ್ತ್ವದೃಷ್ಟಿರುವಾಚ

**ದೋಹಾ** – ಅಹಂ-ವೃತ್ತಿ ಮೈ ಭಾನ ಹ್ವೈ, ಸಾಚ್ಛೀ ಅರು ಆಭಾಸ ।
ಸೋ ಕ್ರಮತೈವಾ ಕ್ರಮ–ಬಿನಾ, ಯಾಕೋ ಕರಹು ಪ್ರಕಾಸ॥
॥ ೧೧೪ ॥

ತಾತ್ಪರ್ಯ – ಹೇ ಸದ್ಗುರು ರೂಪದಲ್ಲಿರುವ ಭಗವಂತನೇ, ನೀವು "ಅಹಂ" ವೃತ್ತಿಯಲ್ಲಿ ಕೂಟಸ್ಥ ಮತ್ತು ಆಭಾಸ ಈ ಎರಡೂ ಪ್ರತೀತಿಯಾಗುತ್ತವೆಂದು ಹೇಳಿದಿರಿ, ಆದರಲ್ಲಿ ನನಗೊಂದು ಸಂದೇಹ. ಅದೇನೆಂದರೆ, "ಅಹಂ" ವೃತ್ತಿಯಲ್ಲಿ ತೋರುವ ಆ ಎರಡರ ಪ್ರತೀತಿಯು ಕ್ರಮವಾಗಿ ಆಗುವುದೇ ಅಥವಾ ಕ್ರಮವಿಲ್ಲದೆ ಆಗುವುದೇ ? ಅಂದರೆ ಬೇರೆ ಬೇರೆ ಕಾಲದಲ್ಲಿ ಆಗುವುದೇ ಅಥವಾ ಒಂದೇ ಕಾಲದಲ್ಲಿ ಆಗುವುದೇ ?

**ಸಂಬಂಧ** – ಮುಂದಿನ ಎರಡು ದೋಹಾಗಳಲ್ಲಿ ತತ್ತ್ವದೃಷ್ಟಿಯ ಪ್ರಶ್ನೆಗೆ ಸಮಾಧಾನವು ಹೇಳಲ್ಪಟ್ಟಿದೆ.

## ಶ್ರೀ ಗುರುವಾಚ

**ದೋಹಾ** – ಸಾವಧಾನ ಹ್ವೈ ಸಿಷ್ಯ ಸುನ, ಭಾಖೂ ಉತ್ತರ ಸಾರ ।
ಸುನತ ನಸೈ ಅಜ್ಞಾನ ತಮ, ಬೋಧಭಾನು ಉಜಿಯಾರ ॥
॥ ೧೧೫ ॥

ಏಕ ಸಮಯ ಹೀ ಭಾನ ಹ್ವೈ, ಸಾಖೀ ಅರು ಆಭಾಸ ।
ದೂಜೋ ಚೇತನಕೊ ವಿಷಯ, ಸಾಖೀ ಸ್ವಯಂಪ್ರಕಾಸ ॥೧೧೬॥

ತಾತ್ಪರ್ಯ – ಶಿಷ್ಯನೇ, ಈ ಪ್ರಶ್ನೆಗೆ ಉತ್ತರವನ್ನು ಸಾವಧಾನವಾಗಿ ಕೇಳು ನಾನು ಹೇಳುವ ಉತ್ತರವನ್ನು ನೀನು ಕೇಳಿದರೆ ಜ್ಞಾನರೂಪಿ ಸೂರ್ಯನ ಪ್ರಕಾಶವಾಗಿ ಅಜ್ಞಾನರೂಪಿ ಅಂಧಕಾರವು ನಾಶವಾಗುತ್ತದೆ. "ಅಹಂ" ವೃತ್ತಿಯಲ್ಲಿ ಸಾಕ್ಷಿ ಮತ್ತು ಆಭಾಸನ ಜ್ಞಾನವು ಏಕ ಕಾಲ ದಲ್ಲಿಯೇ ಆಗುತ್ತದೆ ಈ ಎರಡರಲ್ಲಿ ಅಂತಃಕರಣ ಸಹಿತ ಆಭಾಸನಾದರೋ ಸಾಕ್ಷೀ ಚೇತನಕ್ಕೆ ವಿಷಯನಾಗಿ ಪ್ರಕಾಶಿತನಾಗುತ್ತಾನೆ. ಮತ್ತು ಸಾಕ್ಷಿ ಯಾದರೋ ಸ್ವಯಂ ಪ್ರಕಾಶನು ಅವನ ಪ್ರತೀತಿಯಲ್ಲಿ ಇತರೆ ಸಾಧನಗಳು ಬೇಕಾಗಿಲ್ಲ.

ವಿವರಣೆ – ಹೇ ಶಿಷ್ಯನೇ, "ಅಹಂ'' ವೃತ್ತಿಯಲ್ಲಿ ಸಾಕ್ಷಿಯ ಅಂತಃ ಕರಣ ಸಹಿತ ಚಿದಾಭಾಸನ ಭಾನವು ಅಂದರೆ ಪ್ರತೀತಿಯು ಒಂದೇ ಕಾಲದಲ್ಲಿ ಆಗುತ್ತದೆ.

ಪ್ರಶ್ನೆ – ಅಂತಃಕರಣ ಸಹಿತ ಚಿದಾಭಾಸನ ಪ್ರತೀತಿಯು ಹೇಗೆ ಆಗ. ತ್ತದೆ ? ಮತ್ತು ಯಾರಿಗೆ ಆಗುತ್ತದೆ ?

ಉತ್ತರ – ಅಂತಃಕರಣ ಸಹಿತ ಆಭಾಸನು ಚೈತನ್ಯ ರೂಪನಾದ ಸಾಕ್ಷಿಗೆ ವಿಷಯ ರೂಪನಾದುದರಿಂದ ಸಾಕ್ಷಿಗೆ ಭಾನವಾಗುತ್ತಾನೆ.

ಪ್ರಶ್ನೆ – ಸಾಕ್ಷಿಯ ಭಾನವು ಹೇಗೆ ?

ಉತ್ತರ – ಸಾಕ್ಷಿಯು ಸಾಭಾಸಾಂತಃಕರಣ ವೃತ್ತಿಗೆ ವಿಷಯವಲ್ಲ. ಅವನು ಸ್ವಯಂ ಪ್ರಕಾಶನಾದುದರಿಂದ ತನ್ನ ಬೆಳಕಿನಲ್ಲಿ ತಾನು ಬೆಳಗುತ್ತಾನೆ.

ಪ್ರಶ್ನೆ – ಬಾಹ್ಯದಲ್ಲಿರುವ ಘಟಾದಿ ಪದಾರ್ಥಗಳ ಪ್ರಕಾಶವು ಹೇಗೆ ಆಗುತ್ತದೆ ?

ಉತ್ತರ – ಇಂದ್ರಿಯವು ಘಟದೊಂದಿಗೆ ಸಂಯೋಗವಾದಾಗ ಅಂತಃ ಕರಣದ ವೃತ್ತಿಯು ಇಂದ್ರಿಯಗಳ ದ್ವಾರ ಹೊರಗೆ ಹೋಗಿ ಘಟದ ಸಮಾನಾ ಕಾರವನ್ನು ತಾಳುತ್ತದೆ. ಹೇಗೆಂದರೆ, ಮೂಸೆಯಲ್ಲಿ ಕರಗಿಸಿದ ತಾಮ್ರವು

ಮೂಸೆಯ ಆಕಾರವಾಗುವಂತೆ ಘಟವನ್ನು ಹೊಂದಿದ ಅಂತಃಕರಣ ವೃತ್ತಿಯು ಘಟಾಕಾರವಾಗುತ್ತದೆ ಆ ವೃತ್ತಿಯಲ್ಲಿ ಆಭಾಸನಿದ್ದಾನೆ ಹೇಗೆಂದರೆ ವೃತ್ತಿಯು ಅಂತಃಕರಣದ ಪರಿಣಾಮ; ಅಂತಃಕರಣವು ಸತ್ವಗುಣದ ಕಾರ್ಯವಾದುದರಿಂದ ಸ್ವಚ್ಛವಾಗಿದೆ ಆದುದರಿಂದ ಅದರಲ್ಲಿ ಚೈತನ್ಯದ ಆಭಾಸವಾಗುತ್ತದೆ. ಅದರಂತೆ ಅಂತಃಕರಣದ ಕಾರ್ಯವಾದ ವೃತ್ತಿಯು ಸ್ವಚ್ಛವಾದುದರಿಂದ ಅದರಲ್ಲಿಯೂ ಸಹ ಚೈತನ್ಯದ ಆಭಾಸವಾಗುತ್ತದೆ. ಇಲ್ಲವೇ ಉದ್ಭವವಾದ ವೃತ್ತಿಯು ಸಾಭಾಸಾಂತಃಕರಣದಿಂದಲೇ ಉದ್ಭವವಾಗುವುದರಿಂದ ಆ ವೃತ್ತಿಯಲ್ಲಿ ಆಭಾಸನು ಸಹಜವಾಗಿಯೇ ಇರುತ್ತಾನೆ

ಪ್ರಶ್ನೆ – ಅಜ್ಞಾನಕ್ಕೆ ಆಶ್ರಯುವು ಮತ್ತು ವಿಷಯುವು ಯಾವುದು ?

ಉತ್ತರ – ವಿಷಯವಾದ ಘಟವು ತಮೋಗುಣದ ಕಾರ್ಯವಾದುದರಿಂದ ಅದು ಸ್ವರೂಪತಃ ಜಡ ಸ್ವರೂಪತಃ ಜಡವಾದ ಘಟದಲ್ಲಿ ಅಜ್ಞಾನವೂ ಮತ್ತು ಅಜ್ಞಾನದ ಆವರಣವೂ ಇರುವುದೆಂಬುದರಲ್ಲಿ ಸಂದೇಹ ಬರುತ್ತದೆ. ಹೇಗೆಂದರೆ, ವಿಚಾರ ದೃಷ್ಟಿಯಿಂದ ನೋಡಿದರೆ ಅಜ್ಞಾನವೂ, ಆವರಣವೂ ಚೈತನ್ಯದಲ್ಲಿಯೇ ಇರಬೇಕು ಜಡವಾದ ಘಟದಲ್ಲಿ ಇರಲಾರವು. ಆದುದರಿಂದಲೇ ವೇದಾಂತದಲ್ಲಿ ಅಜ್ಞಾನವು ಚೈತನ್ಯದ ಆಶ್ರಯದಲ್ಲಿದ್ದು ಚೈತನ್ಯವನ್ನೇ ವಿಷಯೀಕರಿಸುತ್ತದೆಂದು ಹೇಳಿದೆ.

ಪ್ರಶ್ನೆ – ಸ್ವಾಮಿ, ಇಲ್ಲಿ ಮತ್ತೊಂದು ಸಂದೇಹ ಆಭಾಸನ ಸಪ್ತಾವಸ್ಥೆಗಳನ್ನು ಹೇಳುವ ಪ್ರಸಂಗದಲ್ಲಿ ನೀವು ಅಜ್ಞಾನಕ್ಕೆ ಅಂತಃಕರಣಸಹಿತ ಆಭಾಸನು ಆಶ್ರಯನೆಂದು ಹೇಳಿದ್ದಿರಿ. ಈಗ ಅಜ್ಞಾನಕ್ಕೆ ಚೇತನವು ಆಶ್ರಯವೆಂದು ಹೇಳುತ್ತೀರಿ. ಇದು ಪರಸ್ಪರ ವಿರೋಧವಲ್ಲವೇ ?

ಉತ್ತರ – ಪೂರ್ವಾಪರ ವಿರೋಧವೇನೂ ಇಲ್ಲ ಅಲ್ಲಿ ಆಭಾಸನು ಅಜ್ಞಾನದ ಅಭಿಮಾನಿ ಎಂದು ಹೇಳಿತ್ತು. “ನಾನು ಅಜ್ಞಾನಿ” ಎಂಬ ಅಭಿಮಾನವು ಅಂತಃಕರಣ ಸಹಿತ ಆಭಾಸನಿಗೇ ಉಂಟಾಗುತ್ತದೆ. ಅಲ್ಲಿ ಆ ಚಿದಾಭಾಸನು ಅಜ್ಞಾನಕ್ಕೆ ಆಶ್ರಯನೆಂದು ಹೇಳಿದ್ದರೂ ಅಜ್ಞಾನಕ್ಕೆ ಮುಖ್ಯ ಆಶ್ರಯವು ಚೈತನ್ಯವೇ.

ಪ್ರಶ್ನೆ – ಮುಖ್ಯ ಆಶ್ರಯವೆಂದರೇನು ?

ಉತ್ತರ – ಆಶ್ರಯವು ಮುಖ್ಯ ಆಶ್ರಯ, ಅಭಿಮಾನರೂಪ ಆಶ್ರಯ ವೆಂದು ಎರಡು ವಿಧ.

ಉದಾಹರಣೆ – ಧನಕ್ಕೆ ಮುಖ್ಯಾಶ್ರಯವು ಪೆಟ್ಟಿಗೆ ನಾನು ಧನ ವಂತನೆಂಬ ಅಭಿಮಾನ ರೂಪ ಆಶ್ರಯವು ಮನುಷ್ಯನು. ಇದರಂತೆ ಅಜ್ಞಾನಕ್ಕೆ ಮುಖ್ಯಾಶ್ರಯ ಚೈತನ್ಯ ಅಭಿಮಾನ ರೂಪ ಆಶ್ರಯ ಆಭಾಸ ಸಹಿತ ಅಂತಃಕರಣ. ಆಭಾಸ ಸಹಿತ ಅಂತಃಕರಣವು ಅಜ್ಞಾನದ ಕಾರ್ಯವಾದುದರಿಂದ ತನಗೆ ಕಾರಣವಾದ ಅಜ್ಞಾನಕ್ಕೆ ಅದು ಆಶ್ರಯವಾಗಲಾರದು ಚೈತನ್ಯವೇ ಅಜ್ಞಾನಕ್ಕೆ ಅಧಿಷ್ಠಾನವಾದುದರಿಂದ ಮುಖ್ಯ ಆಶ್ರಯವಾಗಿದೆ. ಮತ್ತು ಅಜ್ಞಾನವು ಆ ಚೈತನ್ಯವನ್ನೇ ಆವರಿಸುತ್ತದೆ, ಅಂದರೆ ವಿಷಯೀಕರಿಸುತ್ತದೆ.

ಪ್ರಶ್ನೆ – ಅಜ್ಞಾನವು ಚೈತನ್ಯವನ್ನೇ ವಿಷಯೀಕರಿಸುತ್ತದೆ ಎಂದರೇನು?

ಉತ್ತರ – ಸ್ವರೂಪಕ್ಕೆ ಆವರಣವನ್ನು ಉಂಟುಮಾಡುತ್ತದೆ ಎಂಬುದೇ ಅಜ್ಞಾನವು ಚೈತನ್ಯವನ್ನು ವಿಷಯೀಕರಿಸುತ್ತದೆಂಬುದಕ್ಕೆ ಅರ್ಥ. ಆ ಅಜ್ಞಾನದಿಂದ ಉಂಟಾದ ಆವರಣವು ಜಡವಸ್ತುವಿನಲ್ಲಿ ಸಂಭವವಾಗಲಾರದು ಏಕೆಂದರೆ ಮೇಲೆ ಹೇಳಿದಂತೆ ಜಡ ವಸ್ತುವು ಸ್ವರೂಪತಃ ಆವೃತವಾಗಿದೆ. ಅದರಲ್ಲಿ ಮತ್ತೊಂದು ಆವರಣದ ಉಪಯೋಗವೇನೂ ಇಲ್ಲ. ಆದುದರಿಂದ ಅಜ್ಞಾನಕ್ಕೆ ಆಶ್ರಯವೂ, ವಿಷಯವೂ ಒಂದೇ ಚೈತನ್ಯ.

ಉದಾಹರಣೆ – ಮನೆಯ ಆಶ್ರಯದಲ್ಲಿರುವ ಅಂಧಕಾರವು ಮನೆಯನ್ನೇ (ಆವರಿಸಿದಂತೆ) ಮುಚ್ಚುವಂತೆ.

ಈ ರೀತಿಯಾಗಿ ಘಟದಲ್ಲಿ ಅಂದರೆ ದೃಶ್ಯಪದಾರ್ಥಗಳಲ್ಲಿ ಅಜ್ಞಾನವೂ ಅಜ್ಞಾನದಿಂದ ಉಂಟಾದ ಆವರಣವೂ ಸಂಭವಿಸಲಾರದು.

ಪ್ರಶ್ನೆ – ಬಾಹ್ಯ ಪದಾರ್ಥಗಳನ್ನು ಅಂದರೆ ಜಡ ಪದಾರ್ಥಗಳನ್ನು ತಿಳಿದುಕೊಳ್ಳುವ ಪ್ರಸಂಗದಲ್ಲಿ ವೃತ್ತಿಯಲ್ಲಿರುವ ಆಭಾಸನ ಉಪಯೋಗ ವೇನು ?

ಉತ್ತರ – ಚೈತನ್ಯಕ್ಕಿಂತ ಭಿನ್ನವಾದ ಸದಸದ್ವಿಲಕ್ಷಣವಾದ ಅಜ್ಞಾನವು ಚೈತನ್ಯದ ಆಶ್ರಯವನ್ನು ಪಡೆದು ಚೈತನ್ಯವನ್ನೇ ಆವರಿಸಿದಂತೆ, ಘಟ ಸ್ವರೂಪಕ್ಕಿಂತ ಭಿನ್ನವಾದ ಅಜ್ಞಾನವು ಘಟವನ್ನು ಆಶ್ರಯಿಸುವುದೇ ಆಗಲಿ ಮತ್ತು ಆವರಿಸುವುದೇ ಆಗಲಿ ಸಂಭವಿಸಲಾರದು ಆದರೂ ಅಜ್ಞಾನದಿಂದಲೇ ಘಟಾದಿ ಜಡ ಪದಾರ್ಥಗಳು ಪ್ರಕಾಶ ರಹಿತ ಜಡ ಸ್ವರೂಪಗಳಾಗಿ ರಚಿಸಲ್ಪಟ್ಟವೆ. ಆದುದರಿಂದ ಯಾವಾಗಲೂ ಕುರುಡನಂತೆ ಆವೃತಗಳಾಗಿಯೇ ಇರುತ್ತವೆ. ಆ ಘಟಾದಿಗಳ ಆವೃತ ಸ್ವಭಾವವು ಅಜ್ಞಾನದಿಂದಲೇ ಉಂಟಾಗಿದೆ ಹೇಗೆಂದರೆ ತಮೋಗುಣ ಪ್ರಧಾನವಾದ ಅಜ್ಞಾನದಿಂದ ಭೂತೋತ್ಪತ್ತಿ ದ್ವಾರ ಘಟಾದಿಗಳು ಉತ್ಪತ್ತಿಯಾಗುತ್ತವೆ ಆ ಘಟಾದಿಗಳಿಗೆ ಕಾರಣವಾದ ತಮೋಗುಣಕ್ಕೆ ಆವರಣವೇ ಸ್ವಭಾವವಾದುದರಿಂದ ಘಟಾದಿ ಪದಾರ್ಥಗಳು ಪ್ರಕಾಶ ರಹಿತವಾಗಿರುತ್ತವೆ. ಈ ರೀತಿಯಿಂದ ಅಂಧಕಾರ ರೂಪವಾದ ಅಜ್ಞಾನದಿಂದ ಉಂಟಾದ ಆವರಣವು ಘಟಾದಿಗಳಲ್ಲಿ ಸ್ವಭಾವ ಸಿದ್ಧವಾಗಿಯೇ ಇರುತ್ತದೆ. ಮತ್ತು ಅವೇ ಘಟಾದಿ ಪದಾರ್ಥಗಳಿಗೆ ಅಧಿಷ್ಠಾನವಾದ ಚೈತನ್ಯದ ಆಶ್ರಯದಲ್ಲಿರುವ ಅಜ್ಞಾನವು ತನ್ನ ಸ್ವಭಾವಕ್ಕೆ ಅನುಸಾರವಾಗಿ ಚೈತನ್ಯವನ್ನು ಆವರಿಸಿ, ಸ್ವಭಾವದಿಂದಲೇ ಆವೃತವಾದ ಪದಾರ್ಥಗಳನ್ನೂ ಸಹ ಆವರಿಸುತ್ತದೆ. ಸ್ವಭಾವತಃ ಆವೃತವಾದ ಪದಾರ್ಥಗಳನ್ನು ಆವರಿಸುವುದರಲ್ಲಿ ಯಾವ ಪ್ರಯೋಜನವಿಲ್ಲದಿದ್ದರೂ ಅದು ತನ್ನ ಸ್ವಭಾವಕ್ಕೆ ಅನುಸಾರವಾಗಿ ಅವುಗಳನ್ನು ಆವರಿಸುತ್ತದೆ. ಇದು ಲೋಕದಲ್ಲಿ ಪ್ರಸಿದ್ಧ.

ಉದಾಹರಣೆ – ವ್ಯವಸಾಯ ಮಾಡಿದ ಭೂಮಿಯಲ್ಲಿ, ಕೂಪ (ಭಾವಿ) ತಟಾಕಾದಿ (ಕೆರೆ) ಜಲಾಶಯಗಳಲ್ಲಿ ಪರ್ಜನ್ಯ ವೃಷ್ಟಿಗೆ ಉಪಯೋಗವಿರುತ್ತದೆ. ಮನೆಯ ಮೇಲೂ, ಅಂಗಡಿಯ ಮೇಲೂ ಪ್ರಯೋಜನವಿಲ್ಲದಿದ್ದರೂ, ಅಪಕಾರವಾಗುತ್ತಿದ್ದರೂ ಮೇಘರಾಜನು ತನ್ನ ಕೆಲಸವನ್ನು ತಾನು ಮಾಡುತ್ತಾನೆ.

ಶಿಷ್ಯನೇ, ಬಾಹ್ಯ ಪದಾರ್ಥಗಳಲ್ಲಿ ವೃತ್ತಿಯಲ್ಲಿರುವ ಆಭಾಸನ ಉಪಯೋಗವೇನೆಂದು ನೀನು ಕೇಳಿದ್ದೀಯಲ್ಲವೇ ? ಅದಕ್ಕೆ ಸಮಾಧಾನವೇನೆಂದರೆ ಅಜ್ಞಾನದಿಂದ ಆವರಿಸಿರುವ ಘಟದಲ್ಲಿ ಪ್ರಾಪ್ತವಾದ ಆಭಾಸ ಸಹಿತ ಅಂತಃ

ಕರಣದ ಘಟಾಕಾರ ವೃತ್ತಿಯಲ್ಲಿರುವ ವೃತ್ತಿ ಭಾಗವು ಘಟದ ಆವರಣವನ್ನು ತೊಲಗಿಸುತ್ತದೆ ಮತ್ತು ಆ ವೃತ್ತಿಯಲ್ಲಿರುವ ಆಭಾಸ ಭಾಗವು ಘಟವನು ಪ್ರಕಾಶ ಮಾಡುತ್ತದೆ

ಇದರಂತೆ ಪ್ರತಿಯೊಂದು ವ್ಯವಹಾರದಲ್ಲಿಯೂ, ಪ್ರತಿ ಪದಾರ್ಥವನ್ನು ನೋಡುವುದಕ್ಕಾಗಿ ವೃತ್ತಿ ಮತ್ತು ಆಭಾಸ – ಈ ಎರಡರ ಉಪಯೋಗವೂ ಇರುತ್ತದೆ

ಪ್ರಶ್ನೆ – ಹಿಂದೆ ಹೇಳಿದ ಸಂಗತಿಯನ್ನು ದೃಷ್ಟಾಂತ ಪೂರ್ವಕವಾಗಿ ತಿಳಿಸಿರಿ.

ಉತ್ತರ – ಶ್ರದ್ಧೆಯಿಂದ ಕೇಳು. ಅಂಧಕಾರದಲ್ಲಿ ಒಂದು ಮಣ್ಣಿನ ಪಾತ್ರೆಯಿಂದ ಮುಚ್ಚಲ್ಪಟ್ಟ ಲೋಹ ಪಾತ್ರೆಯು ದಂಡದಿಂದ ಮಣ್ಣಿನ ಪಾತ್ರೆಯನ್ನು ಒಡೆದರೂ ಸಹ ದೀಪವಿಲ್ಲದೆ ಆ ನಿರಾವರಣವಾದ ಲೋಹ ಪಾತ್ರೆಯು ಪ್ರಕಾಶವಾಗಲಾರದು. ಅದರ ಪ್ರಕಾಶಕ್ಕೆ ದೀಪವೇ ಬೇಕು ಈ ರೀತಿ ವೃತ್ತಿಯು ಅಜ್ಞಾನದಿಂದ ಆವರಿಸಲ್ಪಟ್ಟ ಘಟದ ಆವರಣವನ್ನು ತೊಲಗಿಸಿದರೂ ಚಿದಾಭಾಸನೆಂಬ ದೀಪವಿಲ್ಲದೆ ಘಟವು ಪ್ರಕಾಶವಾಗಲಾರದು

ಪ್ರಶ್ನೆ – ವೃತ್ತಿಯು ಆವರಣವನ್ನು ಭಂಗ ಮಾಡಿದ ಮೇಲೆಯೂ ಅದರ ಪ್ರಕಾಶಕ್ಕೆ ಚಿದಾಭಾಸನು ಬೇಕೆಂಬುದಕ್ಕೆ ಕಾರಣವೇನು ?

ಉತ್ತರ – ಘಟವೂ ಸಹ ಸ್ವರೂಪತಃ ಜಡ. ವೃತ್ತಿಯೂ ಸಹ ಸ್ವರೂಪತಃ ಜಡ ಆವರಣ ಭಂಗವೆಂಬ ಕೆಲಸವು ಮಾತ್ರ ವೃತ್ತಿಯ ಪ್ರಯೋಜನ. ಅದರಿಂದ ದೃಶ್ಯ ಪದಾರ್ಥವು ಪ್ರಕಾಶಿತವಾಗಲಾರದು. ಘಟ ಪ್ರಕಾಶಕ್ಕೆ ಚಿದಾಭಾಸನು ಬೇಕೇ ಬೇಕು. ಇಲ್ಲಿ ನೇತ್ರದ ವಿಷಯವನ್ನು ಕುರಿತು ಪ್ರತ್ಯಕ್ಷ ಜ್ಞಾನದ ರೀತಿಯು ಹೇಳಲ್ಪಟ್ಟಿದೆ. ಮಿಕ್ಕ ಶ್ರವಣಾದಿಗಳ ವಿಷಯದಲ್ಲಿಯೂ, ಅವುಗಳ ಪ್ರತ್ಯಕ್ಷ ರೀತಿಯಲ್ಲಿಯೂ ಹೀಗೆಯೇ ತಿಳಿದ್ಕು ಕೊಳ್ಳಬೇಕು ವೃತ್ತಿ ಮತ್ತು ಘಟ ಎರಡೂ ಒಂದೇ ಸ್ಥಳಕ್ಕೆ ಸೇರಿದರೆ ಆಗ ಉಂಟಾಗುವ ಘಟದ ಜ್ಞಾನಕ್ಕೆ ಪ್ರತ್ಯಕ್ಷವೆನ್ನುತ್ತಾರೆ.

ಇದಲ್ಲದೆ ವೃತ್ತಿಯು ಹೊರಗಿರುವ ಘಟದೊಂದಿಗೆ ಒಂದಾಗದೆ

ಒಳಗೇ ಘಟಾಕಾರವಾದರೆ ಅದಕ್ಕೆ ಘಟದ ಪರೋಕ್ಷ ಜ್ಞಾನವೆನ್ನುತ್ತಾರೆ ಅಂದರೆ "ಈ ಘಟವು ಇದೆ" ಎಂಬುದು ಘಟದ ಅಪರೋಕ್ಷ ಜ್ಞಾನದ ಆಕಾರ ಹಾಗಾಗದೆ ''ಘಟವಿದೆ" ಎಂಬುದು ಪರೋಕ್ಷ ಜ್ಞಾನದ ಆಕಾರ.

ಸ್ಮೃತಿ ಜ್ಞಾನವು ಪರೋಕ್ಷವೇ ಆದರೂ ಅದು ಸಂಸ್ಕಾರ ಜನ್ಯವಾಗಿದೆ. ಮತ್ತು ಆ ಪರೋಕ್ಷ ಜ್ಞಾನವು ಅನುಮಾನವೇ ಮೊದಲಾದ ಪ್ರಮಾಣ (ಗಳಿಂದ ಉಂಟಾದ ಜ್ಞಾನವಾಗಿದೆ) ಜನ್ಯವಾಗಿದೆ.

ಪ್ರಶ್ನೆ – ಪ್ರಮಾಣವೆಂದು ಹೇಳಿದಿರಲ್ಲಾ, ಆ ಪ್ರಮಾಣಗಳೆಷ್ಟು ? ಯಾವ ಯಾವ ದರ್ಶನಕಾರರು ಯಾವ ಯಾವ ಪ್ರಮಾಣವನ್ನು ಒಪ್ಪಿ ಕೊಂಡಿರುತ್ತಾರೆ, ಅಂಗೀಕರಿಸಿರುತ್ತಾರೆ ಎಂಬುದನ್ನು ವಿವರವಾಗಿ ತಿಳಿಸಿರಿ.

ಉತ್ತರ – ದರ್ಶನಕಾರರು ಯಾವ ಯಾವ ಪ್ರಮಾಣವನ್ನು ಒಪ್ಪಿ ಕೊಂಡಿರುತ್ತಾರೆಂಬುದಕ್ಕೆ ಪ್ರಮಾಣ.

ಚಾರ್ವಾಕಾಸ್ತ್ವ ದೇಕಂ ದ್ವಿತಯಮಪಿ ಪುನರ್ಬೌದ್ಧವೈಶೇಷಿ
ಕಾದ್ಯಾ ।
ಭಾಸರ್ವಜ್ಞಶ್ಚ ಸಾಂಖ್ಯ ಸ್ತ್ರಿತಯ ಮುದಯ ನಾದ್ಯಾಶ್ಚತುಷ್ಕಂ
ವದಂತಿ ॥
ಪ್ರಾಹುಃ ಪ್ರಾಭಾಕರಾಃ ಪಂಚಕಮಪಿಚ ವಯಂ ತೇಽಪಿ
ವೇದಾಂತ ವಿಜ್ಞಾಃ ।
ಷಟ್ಕಂ ಪೌರಾಣಿಕಾ ಸ್ತ್ವಷ್ಟಕ ಮಭಿ ದಧಿರೇ ಸಂಭವೈ ತಿಹ್ಯ
ಯೋಗಾತ್ ॥

೧) ಚಾರ್ವಾಕ, ೨) ಬೌದ್ಧ ಮತ್ತು ವೈಶೇಷಿಕ, ೩) ಭಾಸರ್ವಜ್ಞ, ೪) ನೈಯ್ಯಾಯಿಕರು, ೫) ಪ್ರಭಾಕರ, ೬) ಭಾಟ್ಟ ಮತ್ತು ವೇದಾಂತಿ, ೭) ಪೌರಾಣಿಕರು–ಸಂಭವ, ೮) ಐತಿಹ್ಯ. ಈ ಎಂಟು ಪ್ರಮಾಣಗಳು. ಪ್ರಮಾಣವೆಂದರೆ ವಸ್ತುವನ್ನು ತಿಳಿಯತಕ್ಕ ಸಾಧನವು.

ಮೇಲಿನ ಈ ಶ್ಲೋಕದಲ್ಲಿ ೮ ಪ್ರಮಾಣಗಳನ್ನು ಅಂಗೀಕರಿಸಿದರೂ ಮುಖ್ಯವಾದವು ಆರೇ. ಅವುಗಳ ಹೆಸರು :

೧) ಪ್ರತ್ಯಕ್ಷ, ೨) ಅನುಮಾನ, ೩) ಶಬ್ದ, ೪) ಉಪಮಾನ, ೫) ಅರ್ಥಾಪತ್ತಿ, ೬) ಅನುಪಲಬ್ಧಿ

ಇವುಗಳ ವಿವರಣೆ .

೧. ಇವುಗಳಲ್ಲಿ ಚಾರ್ವಾಕನು ಅಂದರೆ ನಾಸ್ತಿಕಶಿರೋಮಣಿಯಾದ ವಿರೋಚನನು ಪ್ರತ್ಯಕ್ಷ ಪ್ರಮಾಣ ಒಂದನ್ನೇ ಅನುಸರಿಸುತ್ತಾನೆ. ಇತರೆ ಪ್ರಮಾಣಗಳನ್ನು ಅಂಗೀಕರಿಸುವುದಿಲ್ಲ. ಈ ಚಾರ್ವಾಕರಲ್ಲಿಯೂ ೨ ವಿಧ ·

(i) ಯಾರ ಮತದಲ್ಲಿ ಆಕಾಶಾದಿ ಪಂಚಭೂತಗಳನ್ನು ಅಂಗೀಕರಿಸಿದ್ದಾರೋ ಆ ಪಂಗಡಕ್ಕೆ "ಲೋಕಾಯತಿಕ"ರೆನ್ನುತ್ತಾರೆ.

(ii) ಯಾರ ಮತದಲ್ಲಿ ಆಕಾಶ ಭೂತವನ್ನು ಬಿಟ್ಟು ಉಳಿದ ನಾಲ್ಕು ಭೂತಗಳನ್ನು ಅಂಗೀಕರಿಸಿರುವರೋ ಆ ದೇಹಾತ್ಮವಾದಿಗಳಿಗೆ ಚಾರ್ವಾಕರೆನ್ನುತ್ತಾರೆ

೨. ವೈಶೇಷಕಶಾಸ್ತ್ರ ಕರ್ತನಾದ ಕಣಾದ ಮುನಿಯು ಮತ್ತು ಬೌದ್ಧ ಮತಾನುಯಾಯಿಗಳು ಎರಡನೆಯದಾದ ಅನುಮಾನ ಪ್ರಮಾಣವನ್ನೂ ಸಹ ಅಂಗೀಕರಿಸುತ್ತಾರೆ.

ವಸ್ತುವಿನ ಸರಿಯಾದ ತಿಳುವಳಿಕೆಗೆ ಪ್ರತ್ಯಕ್ಷ ಪ್ರಮಾಣ ಒಂದೇ ಸಾಲದು, ಅನುಮಾನ ಪ್ರಮಾಣವೂ ಬೇಕೆನ್ನುತ್ತಾರೆ ಅದಕ್ಕೆ ಕಾರಣವೇನೆಂದರೆ "ಅಭುಕ್ತ ಭೋಜನ"ದಲ್ಲಿ ತೃಪ್ತಿಗೆ ಕಾರಣವು ಪ್ರತ್ಯಕ್ಷ ಪ್ರಮಾಣದಿಂದ ಸಿದ್ಧವಾಗಲಾರದು. ಭುಕ್ತ ಭೋಜನದಲ್ಲಿ ಅನುಭವಿಸಿದ ತೃಪ್ತಿಗೆ ಹೇತು ಅಭುಕ್ತ ಭೋಜನದಲ್ಲಿ ಅನುಮಾನ ಪ್ರಮಾಣದಿಂದ ತಿಳಿದು ತೃಪ್ತಿಗಾಗಿ ಭೋಜನದಲ್ಲಿ ಪ್ರವೃತ್ತರಾಗುತ್ತಾರೆ ಒಂದೇ ಪ್ರತ್ಯಕ್ಷ ಪ್ರಮಾಣದಿಂದ ನಿರ್ವಾಹವಾಗುವುದಿಲ್ಲವೆಂದು ತಿಳಿದು ಕಣಾದರೇ ಮೊದಲಾದವರು ಪ್ರತ್ಯಕ್ಷ, ಅನುಮಾನ ಎರಡೂ ಪ್ರಮಾಣಗಳನ್ನು ಅಂಗೀಕರಿಸುತ್ತಾರೆ.

೩ ಸಾಂಖ್ಯ ಶಾಸ್ತ್ರ ಕರ್ತನಾದ ಕಪಿಲ ಮುನಿಯು ಮೂರನೆಯ ದಾದ ಶಬ್ದ ಪ್ರಮಾಣವನ್ನೂ ಅಂಗೀಕರಿಸಿದ್ದಾನೆ. ಅವನು ಮೂರನ್ನೂ ಅಂಗೀಕರಿಸಲು ಕಾರಣವೇನೆಂದರೆ ಪ್ರತ್ಯಕ್ಷ, ಅನುಮಾನ ಈ ಎರಡು ಪ್ರಮಾಣಗಳನ್ನೇ ಅಂಗೀಕರಿಸಿದರೆ ಒಂದು ಕೊರತೆಯು ಕಂಡುಬರುತ್ತದೆ. ಅದು ಏನೆಂದರೆ ದೂರ ದೇಶದಲ್ಲಿ ಸತ್ತ ತಂದೆಯ ಮರಣದ ವಾರ್ತೆಯನ್ನು ಒಬ್ಬ ಯಥಾರ್ಥ ವಕ್ತನು "ನಿಮ್ಮ ತಂದೆಯು ಸತ್ತುಹೋದನು" ಎಂದು ಹೇಳಿದರೆ ಪ್ರತ್ಯಕ್ಷ, ಅನುಮಾನ ಎರಡೇ ಪ್ರಮಾಣಗಳಿಂದ ಪಿತೃ ಮರಣದ ನಿಶ್ಚಯವು ಆಗಲಾರದು. ದೇಶಾಂತರದಲ್ಲಿ ಆದ ಪಿತೃಮರಣದ ಜ್ಞಾನವು ಪ್ರತ್ಯಕ್ಷ, ಅನುಮಾನ ಎರಡು ಪ್ರಮಾಣದಿಂದಲೇ ಉಂಟಾಗಲಾರದು. ಆದುದರಿಂದ ಕಪಿಲ ಮತಾನುಯಾಯಿಗಳು ಪ್ರತ್ಯಕ್ಷ, ಅನುಮಾನ, ಶಬ್ದ ಈ ಮೂರೂ ಪ್ರಮಾಣಗಳನ್ನು ಅಂಗೀಕರಿಸಿರುತ್ತಾರೆ.

೪. ನ್ಯಾಯ ಶಾಸ್ತ್ರ ಕರ್ತನಾದ ಗೌತಮ ಮುನಿಯು ಉಪಮಾನ ವೆಂಬ ನಾಲ್ಕನೇ ಪ್ರಮಾಣವನ್ನು ಅಂಗೀಕರಿಸಿದ್ದಾನೆ ಅದಕ್ಕೆ ಕಾರಣವೇ ನೆಂದರೆ, ಒಬ್ಬ ಪುರುಷನು ಗವಯವನ್ನು ನೋಡಿರಲಿಲ್ಲ (ಗವಯ = ಹಸುವಿ ನಂತಿರುವ ಪಶು) ಒಬ್ಬ ವನವಾಸಿ ಪುರುಷನಿಂದ ಹಸುವಿನಂತೆ ಗವಯವು ಇರುವುದೆಂದು ಕೇಳಿದ್ದ.

ಇಲ್ಲಿ ಗವಯವೆಂದರೆ ಒಂದು ಪಶು ವಿಶೇಷ. ಇದಕ್ಕೆ ಹಿಂದಿ ಭಾಷೆ ಯಲ್ಲಿ "ರೋಜ" ಎನ್ನುತ್ತಾರೆ. ಕನ್ನಡ ಭಾಷೆಯಲ್ಲಿ "ಅಡವಿ ಆಕಳು" ಎನ್ನುತ್ತಾರೆ.

ವನವಾಸಿ ಪುರುಷನ ಮಾತನ್ನು ಕೇಳಿದ ಆ ಪುರುಷನು ಒಂದಾನೊಂದು ದಿವಸ ಅರಣ್ಯದಲ್ಲಿ ಹೋಗುವಾಗ ಗವಯವನ್ನು ನೋಡಿದನು. ಕೂಡಲೆ ಅವನಿಗೆ ವನವಾಸಿ ಪುರುಷನು ಹೇಳಿದ ಮಾತು ಜ್ಞಾಪಕಕ್ಕೆ ಬಂದು, ಆ ಸ್ಮೃತಿಯ ನಂತರ ನಾನು ನೋಡಿದ ಈ ಪಶುವು "ಗವಯ"ವೆಂದು ಜ್ಞಾನ ವಾಗುತ್ತದೆ. ಪ್ರತ್ಯಕ್ಷಾದಿ ಮೂರು ಪ್ರಮಾಣಗಳನ್ನು ಅಂಗೀಕರಿಸಿದ್ದರೆ ಈ ಜ್ಞಾನವು ಆಗುತ್ತಿರಲಿಲ್ಲವಲ್ಲವೇ ಎಂಬ ವಿಚಾರವನ್ನು ಮಾಡಿ, ನ್ಯಾಯ

ಮತಾನುಯಾಯಿಗಳು ಇಂತಹ ವಿಲಕ್ಷಣ ಜ್ಞಾನಕ್ಕೆ ಹೇತುವಾದ ನಾಲ್ಕನೇ ಉಪಮಾನ ಪ್ರಮಾಣವನ್ನು ಅಂಗೀಕರಿಸಿದ್ದಾರೆ

೫ ಪೂರ್ವಮೀಮಾಂಸಕ ಏಕದೇಶಿ ಪ್ರಭಾಕರ ಮತಾನುಯಾಯಿಗಳು ಐದನೆಯದಾದ ಅರ್ಥಾಪತ್ತಿ ಪ್ರಮಾಣವನ್ನೂ ಅಂಗೀಕರಿಸಿದ್ದಾರೆ. ಅದಕ್ಕೆ ಕಾರಣವೇನೆಂದರೆ ಹಗಲು ಊಟ ಮಾಡದ ಪುರುಷನ ಸ್ಥೂಲತ್ವವನ್ನು ನೋಡಿ ಈ ಪುರುಷನು ರಾತ್ರಿ ಯಾರೂ ಕಾಣದಂತೆ ಊಟ ಮಾಡುತ್ತಾನೆಂಬ ಜ್ಞಾನ ಉಂಟಾಗುತ್ತದೆ. ರಾತ್ರಿ ಭೋಜನವಿಲ್ಲದೆ, ಹಗಲು ಭೋಜನವೂ ಇಲ್ಲದೆ ಸ್ಥೂಲತ್ವವು ಸಂಘಟಿಸಲಾರದು. ಆದುದರಿಂದ ಸ್ಥೂಲತ್ವವು ರಾತ್ರಿ ಭೋಜನಕ್ಕೆ ಸಂಪಾದಕವಾಗಿರುವುದು ರಾತ್ರಿ ಭೋಜನವು ಸಂಪಾದ್ಯವಾಗಿರುವುದು. ಸಂಪಾದ್ಯವಾದ ರಾತ್ರಿ ಭೋಜನ ಜ್ಞಾನಕ್ಕೆ ಹೇತುವಾದ ಸ್ಥೂಲತ್ವ ಜ್ಞಾನವು ಅರ್ಥಾಪತ್ತಿ ಪ್ರಮಾಣವೆನಿಸಿಕೊಳ್ಳುತ್ತದೆ.

ಮೊದಲು ಹೇಳಿದ ನಾಲ್ಕು ಪ್ರಮಾಣಗಳಿಂದ ಈ ಜ್ಞಾನವು ಸಂಭವಿಸಲಾರದು. ಆದುದರಿಂದ ಇದನ್ನು ತಿಳಿದು ಪ್ರಭಾಕರ ಮತಾನುಯಾಯಿಗಳು ಐದನೆಯದಾದ ಅರ್ಥಾಪತ್ತಿ ಪ್ರಮಾಣವನ್ನು ಅಂಗೀಕರಿಸಿದ್ದಾರೆ

೬. ಪೂರ್ವ ಮೀಮಾಂಸಕ ಭಟ್ಟ ಅನುಯಾಯಿಗಳು ಆರನೆಯದಾದ ಅನುಪಲಬ್ಧಿ ಪ್ರಮಾಣವನ್ನು ಅಂಗೀಕರಿಸಿದ್ದಾರೆ. ಮತ್ತು ವೇದಾಂತ ಶಾಸ್ತ್ರದಲ್ಲಿಯೂ ಸಹ ಈ ಆರು ಪ್ರಮಾಣಗಳನ್ನು ಅಂಗೀಕರಿಸಿದ್ದಾರೆ. ಈ ಅನುಪಲಬ್ಧಿ ಪ್ರಮಾಣದ ಸ್ವರೂಪವೇನೆಂದರೆ, ಗೃಹಾದಿಗಳಲ್ಲಿ ಒಬ್ಬನಿಗೆ ಘಟಾದಿಗಳ ಅಭಾವ ಜ್ಞಾನವಾಗುತ್ತದೆ ಅಲ್ಲಿ ಯಾವ ಪದಾರ್ಥದ ಪ್ರತೀತಿಯು ಆಗುವುದಿಲ್ಲವೋ ಅದರ ಅಭಾವದ ಜ್ಞಾನವಾಗುತ್ತದೆ ಘಟದ ಅಪ್ರತೀತಿಯಿಂದ ಘಟದ ಅಭಾವವು ನಿಶ್ಚಯವಾಗುತ್ತದೆ ಈ ರೀತಿ ಪದಾರ್ಥದ ಅಭಾವದ ನಿಶ್ಚಯಕ್ಕೆ ಹೇತುವಾದ ಪದಾರ್ಥದ ಅಪ್ರತೀತಿಗೆ ಅನುಪಲಬ್ಧಿ ಪ್ರಮಾಣವೆನ್ನುತ್ತಾರೆ. ಈ ಪದಾರ್ಥದ ಅಭಾವದ ಜ್ಞಾನವು ಪ್ರತ್ಯಕ್ಷಾದಿ ಐದು ಪ್ರಮಾಣಗಳಿಂದ ಆಗಲಾರದು ಎಂದು ತಿಳಿದು ಭಾಟ್ಟ ಮತಾನುಯಾಯಿಗಳು ಆರನೆಯದಾದ ಅನುಪಲಬ್ಧಿ ಪ್ರಮಾಣವನ್ನು ಅಂಗೀಕರಿಸಿದ್ದಾರೆ.

ಬೇರೆ ಬೇರೆ ಗ್ರಂಥಗಳಲ್ಲಿ ಇನ್ನೂ ಕೆಲವು ಪ್ರಮಾಣಗಳನ್ನು ಅಂಗೀಕರಿಸಿದ್ದರೂ ಅವೆಲ್ಲವೂ ಈ ಆರು ಪ್ರಮಾಣದಲ್ಲಿಯೇ ಅಂತರ್ಗತವಾಗಿರುತ್ತವೆ ಆದುದರಿಂದಲೇ ಭಾಷ್ಯಕಾರರು ಪ್ರಮಾಣ ಸಂಖ್ಯೆಯನ್ನು ಆರೇ ಎಂದು ಹೇಳುತ್ತಾರೆ

ಪ್ರಶ್ನೆ – ಪ್ರಮಾಣವೆಂದರೆ ವಸ್ತುವನ್ನು ತಿಳಿಯುವ ಸಾಧನ, ಪ್ರಮೇಯವೆಂದರೆ ಪ್ರಮಾಣದಿಂದ ತಿಳಿದುಬರುವ ಪದಾರ್ಥವೆಂಬುದು ಸರಿಯಷ್ಟೆ ಈ ಪ್ರಮಾಣ, ಪ್ರಮೇಯಗಳ ಸ್ವರೂಪವನ್ನು ವರ್ಣಿಸಿರಿ.

ಉತ್ತರ – ಪ್ರಮಾ ಜ್ಞಾನಕ್ಕೆ ಕರಣವಾದುದನ್ನು ಪ್ರಮಾಣವೆನ್ನುತ್ತಾರೆ

ಪ್ರಶ್ನೆ – ಪ್ರಮ ಎಂದರೇನು ?

ಉತ್ತರ – ಸ್ಮೃತಿಗಿಂತ ಭಿನ್ನವಾಗಿದ್ದು ಅಬಾಧಿತವಾದ ಅರ್ಥವನ್ನು ವಿಷಯೀಕರಿಸುವ ಜ್ಞಾನಕ್ಕೆ ಪ್ರಮ ಎನ್ನುತ್ತಾರೆ

ಪ್ರಶ್ನೆ – ಹಾಗಾದರೆ ಸ್ಮೃತಿ ಜ್ಞಾನವು ಪ್ರಮೆ ಅಲ್ಲವೋ ?

ಉತ್ತರ – ಸ್ಮೃತಿ ಜ್ಞಾನವು ಪ್ರಮೆಯಲ್ಲ.

ಪ್ರಶ್ನೆ – ಏಕಲ್ಲ ?

ಉತ್ತರ – ಪ್ರಮಾ ಜ್ಞಾನವು ಪ್ರಮಾತನನ್ನು ಆಶ್ರಯಿಸಿರುತ್ತದೆ. ಸ್ಮೃತಿ ಜ್ಞಾನವು ಪ್ರಮಾತನ ಆಶ್ರಯದಲ್ಲಿರುವುದಿಲ್ಲ. ಅದು ಸಾಕ್ಷಿಯನ್ನು ಆಶ್ರಯಿಸಿರುತ್ತದೆ ಇದರಂತೆ ಸ್ಮೃತಿ ಜ್ಞಾನ, ಸಂಶಯ ಜ್ಞಾನ, ಭ್ರಾಂತಿ ಜ್ಞಾನ ಈ ಮೂರು ಪ್ರಮಾತನ ಆಶ್ರಯದಲ್ಲಿರದೆ ಸಾಕ್ಷಿಯ ಆಶ್ರಯದಲ್ಲಿರುತ್ತವೆ.

ಪ್ರಶ್ನೆ – ಸ್ಮೃತಿ ಜ್ಞಾನ, ಭ್ರಾಂತಿ ಜ್ಞಾನ, ಸಂಶಯ ಜ್ಞಾನ – ಇವು ಯಾವ ವೃತ್ತಿಗೆ ಸಂಬಂಧಪಟ್ಟವು ?

ಉತ್ತರ – ಅವು ಅವಿದ್ಯಾ ವೃತ್ತಿ ರೂಪವಾಗಿರುತ್ತವೆ ಅಂತಃಕರಣ ವೃತ್ತಿ ರೂಪವಲ್ಲ. ಆದುದರಿಂದ ಪ್ರಮಾತನ ಆಶ್ರಯದಲ್ಲಿ ಇರುವುದಿಲ್ಲ. ಸಾಕ್ಷಿಯನ್ನೇ ಆಶ್ರಯಿಸಿರುತ್ತವೆ ಅಂತಃಕರಣ ವೃತ್ತಿ ರೂಪ ಜ್ಞಾನವು ಪ್ರಮಾತನನ್ನು ಆಶ್ರಯಿಸಿರುವುದರಿಂದ ಅದಕ್ಕೆ ಪ್ರಮೇಯವೆನ್ನುತ್ತಾರೆ. ಕೆಲವರ ಮತದಲ್ಲಿ ಸ್ಮೃತಿ ಜ್ಞಾನ, ಸಂಶಯ ಜ್ಞಾನ, ಭ್ರಾಂತಿ ಜ್ಞಾನ ಈ

ಮೂರರಲ್ಲಿ ಭ್ರಾಂತಿ ಜ್ಞಾನ, ಸಂಶಯ ಜ್ಞಾನಗಳು ಪ್ರಮೇಯ ಅಲ್ಲ ಎಂಬು ದಕ್ಕೆ ವಿವಾದವಿಲ್ಲದಿದ್ದರೂ ಸ್ಮೃತಿ ಜ್ಞಾನದ ವಿಷಯದಲ್ಲಿ ಮಾತ್ರ ವಿವಾದವಿದೆ

ಆದರೂ ವಿಚಾರ ದೃಷ್ಟಿಯಿಂದ ನೋಡಿದರೆ ಭ್ರಾಂತಿ ಜ್ಞಾನ, ಸಂಶಯ ಜ್ಞಾನಗಳಂತೆ ಸ್ಮೃತಿ ಜ್ಞಾನವೂ ಸಹ ಅಂತಃಕರಣದ ವೃತ್ತಿರೂಪವಲ್ಲ ಆದುದರಿಂದ ಅದು ಪ್ರಮಾತನ ಆಶ್ರಯದಲ್ಲಿ ಇರುವುದಿಲ್ಲ ಈ ದೃಷ್ಟಿ ಯಿಂದಲೇ ಅದು ಪ್ರಮಾ ಜ್ಞಾನವಲ್ಲವೆಂದು ಹೇಳಿದುದಾಗಿದೆ

ಹಿಂದೆ ಹೇಳಿದ ಪ್ರಮಾ ಲಕ್ಷಣದಲ್ಲಿ ಪ್ರಮಾ ಜ್ಞಾನವು ಸ್ಮೃತಿಜ್ಞಾನ ಕ್ಕಿಂತ ಭಿನ್ನವಾಗಿದ್ದು ಅಬಾಧಿತ ಅರ್ಥವನ್ನು ವಿಷಯೀಕರಿಸುವುದೆಂದು ಹೇಳಿದೆ. ಅದರಲ್ಲಿ ಸ್ಮೃತಿ ಜ್ಞಾನವೂ ಸಹ ಅಬಾಧಿತ ಅರ್ಥವನ್ನು ವಿಷಯೀ ಕರಿಸುವುದಾದರೂ ಅದು ಸ್ಮೃತಿ ಜ್ಞಾನಕ್ಕಿಂತ ಭಿನ್ನವಲ್ಲ. ಆದುದರಿಂದ ಅದು ಪ್ರಮಾ ಜ್ಞಾನವಲ್ಲ

ಪ್ರಶ್ನೆ – ಹಾಗಾದರೆ ಪ್ರಮಾ ಜ್ಞಾನಕ್ಕೆ ಸರಿಯಾದ ಲಕ್ಷಣವೇನು ?

ಉತ್ತರ – "ಯಥಾರ್ಥಾನುಭವ ಪ್ರಮು" ಇದು ಪ್ರಮಾ ಜ್ಞಾನದ ಸರಿಯಾದ ಲಕ್ಷಣ ಇದು ಸ್ಮೃತಿ ಜ್ಞಾನಕ್ಕಿಂತಲೂ ಭಿನ್ನವೆಂದು ಸ್ಪಷ್ಟ ವಾಗಿದೆ ಮತ್ತೆ ಕೆಲವರು ಸ್ಮೃತಿ ಜ್ಞಾನವನ್ನೂ ಸಹ ಪ್ರಮಾ ಜ್ಞಾನವೆಂದು ಅಂಗೀಕರಿಸಿದ್ದಾರೆ. ಅವರ ಮತ ಪ್ರಕಾರ ಪ್ರಮಾ ಜ್ಞಾನ ಲಕ್ಷಣವು ಸ್ಮೃತಿ ಜ್ಞಾನಕ್ಕಿಂತ ಭಿನ್ನವಲ್ಲ ಅದಕ್ಕೆ ಅಬಾಧಿತಾರ್ಥವನ್ನು ವಿಷಯೀಕರಿಸು ವುದೇ ಪ್ರಮಾಜ್ಞಾನವೆಂದು ಹೇಳಿದ್ದಾಗಿದೆ ಭ್ರಾಂತಿಜ್ಞಾನವು ಅಬಾಧಿತಾ ರ್ಥವನ್ನು ವಿಷಯೀಕರಿಸಲಾರದು ಆದುದರಿಂದ ಆ ಭ್ರಾಂತಿ ಜ್ಞಾನದಲ್ಲಿ ಪ್ರಮಾ ಜ್ಞಾನದ ಲಕ್ಷಣವಿಲ್ಲ ಸ್ಮೃತಿ ಜ್ಞಾನದಲ್ಲಿ ಪ್ರಮಾ ವ್ಯವಹಾರ ವನ್ನು ಅಂಗೀಕರಿಸುವವರ ಮತದಲ್ಲಿ ಸ್ಮೃತಿ ಜ್ಞಾನವು ಅಂತಃಕರಣ ವೃತ್ತಿ ರೂಪವಾಗಿದೆ. ಅವರ ದೃಷ್ಟಿಯಲ್ಲಿ ಅವಿದ್ಯಾ ವೃತ್ತಿಯಲ್ಲ ಮತ್ತು ಆ ಜ್ಞಾನವು ಸಾಕ್ಷಿಯ ಆಶ್ರಯದಲ್ಲಿ ಇರುವುದೂ ಅಲ್ಲ. ಅವರು ಅದಕ್ಕೆ "ಪ್ರಮಾತಾಶ್ರಿತ"ವೆನ್ನುತ್ತಾರೆ.

ನಿಜವಾಗಿ ನೋಡಿದರೆ ಅಂತಃಕರಣ ವೃತ್ತಿಗೆ ಪ್ರಮಾತನೇ ಆಶ್ರಯ, ಸಾಕ್ಷಿಯಲ್ಲ.

ಈ ರೀತಿಯಾಗಿ ಯಾವ ಮತದಲ್ಲಿ ಸ್ಮೃತಿ ಜ್ಞಾನವು ಅಂತಃಕರಣ ವೃತ್ತಿ ರೂಪವಾಗಿರುವುದೋ ಆ ಮತದಲ್ಲಿ ಅದು ಪ್ರಮಾ ರೂಪವಾಗುವುದು. ಮತ್ತು ಯಾವ ಮತದಲ್ಲಿ ಸ್ಮೃತಿ ಜ್ಞಾನವು ಅವಿದ್ಯಾ ವೃತ್ತಿ ರೂಪವಾಗಿರುವುದೋ ಅವರ ಮತದಲ್ಲಿ ಸ್ಮೃತಿ ಜ್ಞಾನವು ಪ್ರಮಾ ರೂಪವಲ್ಲ. ಇನ್ನು ಉಳಿದ ಭ್ರಾಂತಿ ಜ್ಞಾನ ಮತ್ತು ಸಂಶಯ ಜ್ಞಾನ ಈ ಎರಡೂ ಸರ್ವ ಮತದಲ್ಲಿಯೂ ಅವಿದ್ಯಾ ವೃತ್ತಿ ರೂಪವೆಂತಲೂ, ಸಾಕ್ಷಿಗೆ ಆಶ್ರಿತವೆಂತಲೂ ಅಂಗೀಕರಿಸಲ್ಪಟ್ಟವೆ. ಇದರಲ್ಲಿ ಯಾರಿಗೂ ವಿವಾದವಿಲ್ಲ.

ಆಳವಾಗಿ ವಿಚಾರ ಮಾಡಿ ನೋಡಿದರೆ ಸ್ಮೃತಿ ಜ್ಞಾನವೂ ಸಹ ಅವಿದ್ಯಾ ವೃತ್ತಿ ರೂಪವಾಗಿಯೂ, ಸಾಕ್ಷಿಗೆ ಆಶ್ರಿತವಾಗಿಯೂ ಇರುತ್ತದೆ. ಅದು ಎಂದಿಗೂ ಪ್ರಮಾ ರೂಪವಲ್ಲ ಏಕೆಂದರೆ ವೇದಾಂತ ಸಂಪ್ರದಾಯ ಕರ್ತರಾದ ಬ್ರಹ್ಮವೇತ್ತರು ಪ್ರಮಾ ಜ್ಞಾನವನ್ನು ೬ ಪ್ರಕಾರವೆಂದು ಹೇಳಿದ್ದಾರೆ ಆ ಆರು ಪ್ರಕಾರದಲ್ಲಿ ಸ್ಮೃತಿ ಜ್ಞಾನವನ್ನು ತೆಗೆದುಕೊಂಡಿಲ್ಲ. "ಗೀತಾ ಗೂಢಾರ್ಥ ದೀಪಿಕಾ''ದಲ್ಲಿಯೂ ಸಹ ಸ್ಮೃತಿ ಜ್ಞಾನವು ಸಾಕ್ಷಿಯ ಆಶ್ರಿತವೆಂದು ಹೇಳಿದ್ದಾರೆ ಆದುದರಿಂದ ಅದು ಪ್ರಮಾ ಜ್ಞಾನವಲ್ಲ.

ಪ್ರಶ್ನೆ – ಸ್ವಾಮಿ, ಪ್ರಮ – ಕರಣ ಇವುಗಳ ಸ್ವರೂಪವನ್ನು ವಿವರಿಸಿರಿ.

ಉತ್ತರ – ಪ್ರಮಾ ಆರು ವಿಧ : ೧ ಪ್ರತ್ಯಕ್ಷ, ೨. ಅನುಮಿತಿ, ೩. ಶಾಬ್ದಿ, ೪ ಉಪಮಿತಿ, ೫. ಅರ್ಥಾಪತ್ತಿ, ೬ ಅನುಪಲಬ್ಧಿ.

ಹಿಂದೆ ಹೇಳಿದ ಪ್ರತ್ಯಕ್ಷಾದಿ ಷಟ್ ಪ್ರಮಾಣಗಳು ಕ್ರಮವಾಗಿ ಇವುಗಳಿಗೆ ಕಾರಣವಾಗಿರುತ್ತವೆ.

ಉದಾಹರಣೆ – ಪ್ರತ್ಯಕ್ಷ, ಪ್ರಮೆಯ ಕರಣವು ಪ್ರತ್ಯಕ್ಷ ಪ್ರಮಾಣ. ಇದರಂತೆಯೇ ಉಳಿದ ಎಲ್ಲವನ್ನೂ ತಿಳಿದುಕೊಳ್ಳಬೇಕು.

ಪ್ರಶ್ನೆ – ಕರಣವೆಂದರೆ ಸರಿಯಾಗಿ ತಿಳಿಯಲಿಲ್ಲ; ಬಿಡಿಸಿ ಹೇಳಿರಿ

ಉತ್ತರ – ಅಸಾಧಾರಣ ಕಾರಣಕ್ಕೆ ಕರಣವೆನ್ನುತ್ತಾರೆ.

ಪ್ರಶ್ನೆ – ಅಸಾಧಾರಣ ಕಾರಣವೆಂದರೇನು ?

ಉತ್ತರ – ಯಾವುದು ಸರ್ವ ಕಾರ್ಯಕ್ಕೆ ಕಾರಣವಾಗಿರುವುದೋ ಅದು ಸಾಧಾರಣ ಕಾರಣ. ಅವೇ ಧರ್ಮಾಧರ್ಮಗಳು ಯಾವುದು ಸರ್ವ ಕಾರ್ಯಗಳಿಗೂ ಕಾರಣವಾಗದೆ ಯಾವುದೇ ಒಂದು ವಿಶೇಷ ಕಾರ್ಯಕ್ಕೆ ಮಾತ್ರ ಕಾರಣವಾಗಿರುವುದೋ ಅದನ್ನು ಅಸಾಧಾರಣ ಕಾರಣವೆನ್ನುತ್ತಾರೆ

ಉದಾಹರಣೆ – ಘಟವಾಗುವುದಕ್ಕೆ ಬೇಕಾಗುವ ಚಕ್ರದಂಡಾದಿಗಳು ಅಸಾಧಾರಣ ಕಾರಣವಾದುದರಿಂದ ಅವುಗಳನ್ನು ಘಟದ ಕರಣವೆನ್ನುತ್ತಾರೆ

ಪ್ರಶ್ನೆ – ಸಾಧಾರಣ ಕಾರಣವೆಂದರೇನು ?

ಉತ್ತರ – ಈಶತಜ್ಞಾನ ಯತ್ನೇಚ್ಛ ಕಾಲೋಽದೃಷ್ಟಂ ದಿಗೇವವ |
ಪ್ರಾಕ್ ಪ್ರತಿಬಂಧಕಾಭಾವೋ ಕಾರ್ಯೇ ಸಾಧಾರಣಾ
ಸ್ಮೃತಾಃ ||

ಅರ್ಥ – (i) ಈಶ್ವರ, (ii) ಈಶ್ವರನ ಜ್ಞಾನ, (iii) ಈಶ್ವರನ ಯತ್ನ, (iv) ಈಶ್ವರನ ಇಚ್ಛೆ, (v) ಕಾಲ, (vi) ಅದೃಷ್ಟ, (vii) ದಿಶ, (viii) ಪ್ರಾಗ್ಭಾವ, (ix) ಪ್ರತಿಬಂಧಕಾಭಾವ.

ಈ ಒಂಬತ್ತು ಎಲ್ಲಾ ಕಾರ್ಯಗಳಿಗೂ ಸಾಧಾರಣ ಕಾರಣಗಳಾಗಿವೆ. ಏಕೆಂದರೆ ಈ ಈಶ್ವರಾದಿ ಒಂಬತ್ತು ಕರಣಗಳಿಲ್ಲದಿದ್ದರೆ ಯಾವ ಕಾರ್ಯವೂ ಉಂಟಾಗಲಾರದು.

ಇನ್ನು ವ್ಯಷ್ಟಿ ದೇಶದಲ್ಲಿರುವ ನೇತ್ರವೇ ಮೊದಲಾದ ಇಂದ್ರಿಯಗಳು ಪ್ರತ್ಯಕ್ಷ ಪ್ರಮೆಗೆ ಅಸಾಧಾರಣ ಕಾರಣಗಳಾಗಿರುತ್ತವೆ. ಆದುದರಿಂದ ಅವುಗಳನ್ನು ಪ್ರತ್ಯಕ್ಷ ಪ್ರಮೆಗೆ ಕಾರಣಗಳೆನ್ನುತ್ತಾರೆ. ಆದುದರಿಂದಲೇ ವೇದಾಂತ ಶಾಸ್ತ್ರದಲ್ಲಿ ನೇತ್ರ ಮೊದಲಾದ ಜ್ಞಾನೇಂದ್ರಿಯಗಳೈದನ್ನು ಪ್ರತ್ಯಕ್ಷ ಪ್ರಮಾಣಗಳೆನ್ನುತ್ತಾರೆ.

ಪ್ರಶ್ನೆ – ವೇದಾಂತ ಸಿದ್ಧಾಂತದಲ್ಲಿ ಇಂದ್ರಿಯಗಳು ಜಡವಾದುದರಿಂದ ಅವು ಯಾವ ಪ್ರಮಾ ಜ್ಞಾನಕ್ಕೂ ಕಾರಣವಾಗಲಾರವು. ನೀವು ಇಂದ್ರಿಯಗಳೇ ಪ್ರತ್ಯಕ್ಷ ಪ್ರಮಾಣವೆಂದು ಹೇಳುವುದು ಹೇಗೆ ?

ಉತ್ತರ – ಇಂದ್ರಿಯಗಳ ಮೂಲಕ ವಿಷಯವನ್ನು ತಿಳಿದುಕೊಳ್ಳು ವುದು ಚೇತನ, ಬರೀ ಇಂದ್ರಿಯಗಳಲ್ಲ ಆ ಚೇತನವು ೪ ವಿಧ.

(i) ಪ್ರಮಾತ ಚೇತನ
(ii) ಪ್ರಮಾಣ ಚೇತನ
(iii) ಪ್ರಮಿತಿ ಅಥವಾ ಪ್ರಮಾ ಚೇತನ
(iv) ಪ್ರಮೇಯ ಚೇತನ ಅಥವಾ ವಿಷಯ ಚೇತನ

ಈ ರೀತಿಯಾಗಿ ಹೇಳಿದ ಚೈತನ್ಯಗಳಿಗೆ ಪ್ರಮಾ ಎನ್ನುತ್ತಾರೆ ಆ ಚೈತನ್ಯವು ನಿತ್ಯವಾಗಿರುವುದರಿಂದ ಇಂದ್ರಿಯ ಜನ್ಯವಲ್ಲ ಆದುದರಿಂದಲೇ ಇಂದ್ರಿಯಗಳು ಆ ಚೈತನ್ಯಕ್ಕೆ ಕಾರಣವಾಗಲಾರವು. ಹೀಗಿದ್ದರೂ ಪ್ರಮಾ ಚೈತನ್ಯದಲ್ಲಿ ಪ್ರಮಾ ವ್ಯವಹಾರಕ್ಕೆ ಸಂಪಾದಕವಾದ ವೃತ್ತಿಗೆ ಪ್ರಮೆ ಎನ್ನು ತ್ತಾರೆ. ಆ ಪ್ರಮೆಗೆ ಇಂದ್ರಿಯಗಳು ಕರಣಗಳಾಗಿರುತ್ತವೆ.

ಪ್ರಶ್ನೆ – ಆ ನಾಲ್ಕೂ ಚೈತನ್ಯಗಳನ್ನು ಸ್ಪಷ್ಟವಾಗಿ ವಿವರಿಸಿ.

೧ ಪ್ರಮಾತೃ ಚೈತನ್ಯ. ದೇಹದಲ್ಲಿರುವ ಅಂತಃಕರಣದಿಂದ ಅವ ಚ್ಛಿನ್ನ ಚೇತನವಾದ ಪ್ರಮಾತನನ್ನು ಪ್ರಮಾತೃ ಚೈತನ್ಯವೆನ್ನುತ್ತಾರೆ.

೨. ಪ್ರಮಾಣ ಚೈತನ್ಯವೆಂದರೇನು ?

ಅಂತಃಕರಣವು ನೇತ್ರಾದಿ ಇಂದ್ರಿಯ ದ್ವಾರ ಹೊರಗೆ ಹೊರಟು ಘಟಾದಿ ವಿಷಯಗಳು ಇರುವಷ್ಟು ದೂರ ಪರಿಣಾಮವನ್ನು ಹೊಂದುತ್ತದೆ. ನಂತರ ವಿಷಯಗಳಾದ ಘಟಾದಿಗಳೊಂದಿಗೆ ಕೂಡಿ ಘಟಾದಿಗಳ ಆಕಾರವನ್ನು ತಾಳುತ್ತದೆ

ಉದಾಹರಣೆ – ತೊಟ್ಟಿಯಲ್ಲಿ ತುಂಬಿದ ನೀರು ತೊಟ್ಟಿಯ ಛಿದ್ರದಿಂದ ಹೊರ ಹೊರಟು ಕಾಲುವೆಯ ಮೂಲಕ ಹರಿದು ಕೇದಾರದ ಆಕಾರವನ್ನು ಹೊಂದಿದಂತೆ, ಶರೀರ ರೂಪ ತೊಟ್ಟಿಯಲ್ಲಿ ತುಂಬಿದ ಅಂತಃಕರಣವೆಂಬ ಜಲವು ಇಂದ್ರಿಯ ರೂಪ ಛಿದ್ರಗಳ ಮೂಲಕ ಹೊರಬಿದ್ದು ಘಟಾದಿ ವಿಷಯ ರೂಪ ವೆಂಬ ಕೇದಾರವನ್ನು ಹೊಂದುತ್ತದೆ ಅಲ್ಲಿ ಶರೀರದಿಂದ ಹಿಡಿದು ಘಟಾದಿ ವಿಷಯಗಳವರೆಗೆ ಇರುವ ಅಂತಃಕರಣದ ಪರಿಣಾಮಕ್ಕೆ ಪ್ರಮಾಣ ವೃತ್ತಿ

ಎನ್ನುತ್ತಾರೆ. ಆ ಪ್ರಮಾಣ ವೃತ್ತಿಯಿಂದ ಅವಚ್ಛಿನ್ನವಾದ ಚೈತನ್ಯಕ್ಕೆ ಪ್ರಮಾಣ ಚೈತನ್ಯವೆನ್ನುತ್ತಾರೆ.

೩. (ಪ್ರಮ) ಪ್ರಮಿತಿ ಚೈತನ್ಯವೆಂದರೇನು ?

ಆನಂತರ ಅಂತಃಕರಣ ರೂಪ ಜಲದ ಘಟಾದಿ ವಿಷಯ ರೂಪ ಕೇದಾರಾಕಾರವಾದ ಪರಿಮಾಣಕ್ಕೆ ಪ್ರಮಾವೃತ್ತಿ ಎನ್ನುತ್ತಾರೆ. ಆ ಪ್ರಮಾವೃತ್ತಿಯಿಂದ ಅವಚ್ಛಿನ್ನವಾದ ಚೈತನ್ಯವೇ ಪ್ರಮಾ ಚೈತನ್ಯವೆನಿಸುತ್ತದೆ.

೪. ವಿಷಯ ಚೈತನ್ಯವೆಂದರೇನು ?

ಜ್ಞಾನಕ್ಕೆ ವಿಷಯಗಳಾದ ಘಟಾದಿ ಪದಾರ್ಥಗಳಿಗೆ ಪ್ರಮೇಯಗಳೆನ್ನುತ್ತಾರೆ. ಆ ಪ್ರಮೇಯದಿಂದ ಅವಚ್ಛಿನ್ನವಾದ ಚೈತನ್ಯಕ್ಕೆ ಪ್ರಮೇಯ ಚೈತನ್ಯವೆನ್ನುತ್ತಾರೆ. ಇಲ್ಲವೇ ವಿಷಯ ಚೈತನ್ಯವೆನ್ನುತ್ತಾರೆ. ಮೇಲೆ ಹೇಳಿದ ವಿಷಯವನ್ನು ವೇದಾರ್ಥವನ್ನು ಬಲ್ಲ ಆಚಾರ್ಯರು ಅಂಗೀಕರಿಸಿರುತ್ತಾರೆ.

ಪ್ರಶ್ನೆ – ವೇದಾಂತ ಶಾಸ್ತ್ರದಲ್ಲಿ ಆಭಾಸನ ವಿಷಯವನ್ನು ವಿವರಿಸುವಾಗ ಅವಚ್ಛೇದವಾದವೆಂದೂ, ಆಭಾಸವಾದವೆಂದೂ ಎರಡು ವಾದಗಳಿರುತ್ತವೆ. ಅವುಗಳಲ್ಲಿ ಮೊದಲಿನ ಅವಚ್ಛೇದ ವಾದದ ರೀತಿಯಾಗಿ ಪ್ರಮಾತ ಮತ್ತು ಸಾಕ್ಷಿಯ ಲಕ್ಷಣಗಳೇನು ?

ಉತ್ತರ – ಮೇಲೆ ಹೇಳಿದ ಚೈತನ್ಯ ಲಕ್ಷಣದಲ್ಲಿ ಅವಚ್ಛೇದ ವಾದವನ್ನು ಅಂಗೀಕರಿಸಿರುವವರ ಮತದಲ್ಲಿ ಅಂತಃಕರಣ ವಿಶಿಷ್ಟ ಚೈತನ್ಯಕ್ಕೆ ಪ್ರಮಾತವೆಂದೂ, ಅದೇ ಕರ್ತ ಭೋಕ್ತ ಎಂದೂ ಮತ್ತು ಅಂತಃಕರಣೋಪಹಿತ ಚೈತನ್ಯಕ್ಕೆ ಸಾಕ್ಷಿ ಎಂದೂ, ಅದು ಅಕರ್ತ, ಅಭೋಕ್ತ ಎಂದೂ ಅವರು ಅಂಗೀಕರಿಸಿರುತ್ತಾರೆ. ಅವರ ಅಭಿಪ್ರಾಯದಂತೆ ಒಂದೇ ಅಂತಃಕರಣವು ಪ್ರಮಾತನಿಗೆ ವಿಶೇಷಣವಾಗಿಯೂ, ಸಾಕ್ಷಿಗೆ ಉಪಾಧಿಯಾಗಿಯೂ ಇರುತ್ತದೆ

ಪ್ರಶ್ನೆ – ವ್ಯಾವರ್ತಕ ಎಂದರೇನು ?

ಉತ್ತರ – ಇತರ ಪದಾರ್ಥಗಳಿಗಿಂತ ಬೇರ್ಪಡಿಸಿ ವಸ್ತುವಿನ ಸ್ವರೂಪವನ್ನು ತೋರಿಸುವುದಕ್ಕೆ ವ್ಯಾವರ್ತಕವೆನ್ನುತ್ತಾರೆ. ಇದಕ್ಕೆ ಅವಚ್ಛೇದಕವೆಂತಲೂ, ಪರಿಚ್ಛೇದಕವೆಂತಲೂ ಹೆಸರುಗಳು.

ಪ್ರಶ್ನೆ – ವ್ಯಾವರ್ತ್ಯ ಎಂದರೇನು ?

ಉತ್ತರ – ಇತರ ಪದಾರ್ಥಗಳಿಗಿಂತ ಬೇರ್ಪಡಿಸಿ ಯಾವುದನ್ನು ತೋರಿಸುವುದೋ ಅದು ವ್ಯಾವರ್ತ್ಯ ಇದಕ್ಕೆ ಅವಚ್ಛೇದ್ಯವೆಂತಲೂ, ಪರಿಚ್ಛೇದ್ಯವೆಂತಲೂ ಹೆಸರುಗಳು

ಪ್ರಶ್ನೆ – ವಿಶೇಷಣ ಎಂದರೇನು ?

ಉತ್ತರ – ಸ್ವರೂಪದಲ್ಲಿ ಪ್ರವೇಶಿಸದ ವ್ಯಾವರ್ತಕ ಪದಾರ್ಥಕ್ಕೆ ವಿಶೇಷಣ ಎಂದು ಹೇಳುತ್ತಾರೆ

ಪ್ರಶ್ನೆ – ವಿಶೇಷ್ಯ ಎಂದರೇನು ?

ಉತ್ತರ – ಹಿಂದ ಹೇಳಿದ ವಿಶೇಷಣವು ಇತರ ಪದಾರ್ಥಗಳಿಗಿಂತ ಬೇರ್ಪಡಿಸಿ ಯಾವುದನ್ನು ತೋರಿಸುವುದೋ ಅದು ವಿಶೇಷ್ಯ

ಪ್ರಶ್ನೆ – ನೀವು ಇಲ್ಲಿಯವರೆಗೆ ಹೇಳಿದ ವಿಷಯವನ್ನು ಉದಾಹರಣೆಯಿಂದ ವಿವರಿಸಿರಿ.

ಉತ್ತರ – "ನಮ್ಮ ಮನೆಯಲ್ಲಿ ಒಂದು ನೀಲಿ ಬಣ್ಣದ ಘಟವಿದೆ". ಈ ವಾಕ್ಯದಲ್ಲಿ ನೀಲತ್ವವು ಅಂದರೆ ನೀಲಿ ಬಣ್ಣವು ಘಟದಲ್ಲಿ ಪ್ರವೇಶಿಸಿ ಶ್ವೇತ ಪೀತಾದಿ ಇತರೆ ಬಣ್ಣಗಳಿಗಿಂತ ಬೇರ್ಪಡಿಸಿ ನೀಲಿ ಬಣ್ಣದ ಘಟವನ್ನು ಮಾತ್ರ ತೋರಿಸುತ್ತದೆ ಆದುದರಿಂದ ಆ ನೀಲತ ಎಂಬುದು ಘಟದ ವಿಶೇಷಣ ಮತ್ತು ಶ್ವೇತ ಪೀತಾದಿ ಇತರೆ ಬಣ್ಣದ ಘಟಗಳಿಗಿಂತ ಬೇರೆಯಾಗಿ ತಿಳಿದು ಬರುವ ಘಟವು ವಿಶೇಷ್ಯ.

ಮತ್ತೊಂದು ಉದಾಹರಣೆ (ಉಪಮಾನ)·

"ಕೈಯಲ್ಲಿ ಕೋಲು ಹಿಡಿದ ಮನುಷ್ಯನು ಬಂದನು" ಈ ಸ್ಥಾನದಲ್ಲಿ ದಂಡವು ಪುರುಷನ ವಿಶೇಷಣ

ಉಪಮೇಯ – "ಅಂತಃಕರಣ ವಿಶಿಷ್ಟವಾದ ಚೈತನ್ಯವು ಪ್ರಮಾತ" ಈ ವಾಕ್ಯದಲ್ಲಿ ಅಂತಃಕರಣವು ಪ್ರಮಾತನ ಸ್ವರೂಪದಲ್ಲಿ ಪ್ರವೇಶಿಸಿ ಪ್ರಮೇಯವೇ ಮೊದಲಾದ ಚೈತನ್ಯಗಳಿಗಿಂತ ಬೇರ್ಪಡಿಸಿ ಪ್ರಮಾತನ ಸ್ವರೂಪವನ್ನು ತೋರಿಸುವುದರಿಂದ ಅಂತಃಕರಣವು ಪ್ರಮಾತನಿಗೆ ವ್ಯಾವರ್ತಕವಾಗಿಯೂ, ವಿಶೇಷಣವಾಗಿಯೂ ಇರುತ್ತದೆ. ಮತ್ತು ಪ್ರಮೇಯಾದಿ

ಚೈ ತ ನ್ಯ ಗ ಳಿ ಗಿ ಂ ತ ಬೇರೆಯಾಗಿ ತಿಳಿದುಬಂದ ಪ್ರಮಾತೃ ಚೈತನ್ಯವು ವ್ಯಾವರ್ತ್ಯವಾಗಿಯೂ ಮತ್ತು ವಿಶೇಷ್ಯವಾಗಿಯೂ ಇದೆ.

ಪ್ರಶ್ನೆ – ಉಪಾಧಿ ಎಂದರೇನು ?

ಉತ್ತರ – ಸ್ವರೂಪದಲ್ಲಿ ಪ್ರವೇಶ ಮಾಡದೆ ವ್ಯಾವರ್ತಕವಾಗಿರುವ ವಸ್ತುವಿಗೆ ಉಪಾಧಿ ಎನ್ನುತ್ತಾರೆ.

ಪ್ರಶ್ನೆ – ಉಪಹಿತ ಎಂದರೇನು ?

ಉತ್ತರ – (ಉಪಾಧಿಯಿಂದ ತಿಳಿದು ಬರುವುದು ಉಪಹಿತ.) ಮೇಲೆ ಹೇಳಿದ ಉಪಾಧಿಯಿಂದ ಯಾವುದು ಬೇರ್ಪಡಿಸಿ ತಿಳಿದುಬರುವುದೋ ಅದು ಉಪಹಿತ.

ನ್ಯಾಯಮತದಲ್ಲಿ ಕರ್ಣಗೋಲಕದಿಂದ ಅವಚ್ಛಿನ್ನವಾದ ಆಕಾಶವನ್ನು ಶ್ರೋತ್ರವೆನ್ನುತ್ತಾರೆ. ಇಲ್ಲಿ ಕರ್ಣಗೋಲಕವು ಆಕಾಶದಲ್ಲಿ ಪ್ರವೇಶ ಮಾಡದೆ ಇತರೆ ಆಕಾಶ ಭಾಗಕ್ಕಿಂತ ಬೇರ್ಪಡಿಸಿ ತೋರಿಸುತ್ತದೆ. ಆದುದರಿಂದ ಕರ್ಣ ಗೋಲಕವು ಶ್ರೋತ್ರೇಂದ್ರಿಯಕ್ಕೆ ಉಪಾಧಿ. ಆ ಶ್ರೋತ್ರೇಂದ್ರಿಯ ಎಷ್ಟು ಸ್ಥಾನದಲ್ಲಿ ಇರುವುದೋ ಆ ಸ್ಥಾನಕ್ಕೆ ಉಪಹಿತವೆನ್ನುತ್ತಾರೆ.

ಮತ್ತೊಂದು ಉದಾಹರಣೆ – "ಘಟಾಕಾಶ''.

ಇಲ್ಲಿ ಘಟ, ಆಕಾಶಕ್ಕೆ ಉಪಾಧಿ. ಆಕಾಶವು ಉಪಹಿತ. ಏಕೆಂದರೆ ಘಟವು ಆಕಾಶದಲ್ಲಿ ಪ್ರವೇಶಿಸದೆ ಮಹಾಕಾಶಕ್ಕಿಂತ ಬೇರ್ಪಡಿಸಿ ತೋರಿಸುತ್ತದೆ

ಈ ದೃಷ್ಟಾಂತವನ್ನು ದ್ರಾಷ್ಟಾಂತದಲ್ಲಿ ನೋಡೋಣ. ''ಅಂತಃ ಕರಣೋಪಹಿತ ಚೈತನ್ಯವು ಸಾಕ್ಷಿ". ಈ ಸ್ಥಾನದಲ್ಲಿ ಅಂತಃಕರಣವು ಸಾಕ್ಷಿ ಸ್ವರೂಪದಲ್ಲಿ ಪ್ರವೇಶವಾಗದೆ ಪ್ರಮೇಯಾದಿ ಚೈತನ್ಯಗಳಿಗಿಂತ ಬೇರ್ಪಡಿಸಿ ಸಾಕ್ಷಿ ಸ್ವರೂಪವನ್ನು ತೋರಿಸುವುದರಿಂದ ಆ ಅಂತಃಕರಣವು ಸಾಕ್ಷಿಗೆ ಉಪಾಧಿಯಾಗಿದೆ. ಮತ್ತು ಪ್ರಮೇಯಾದಿ ಚೈತನ್ಯಗಳಿಗಿಂತ ಬೇರೆಯಾಗಿ ತಿಳಿದು ಬಂದು ಸಾಕ್ಷಿ ಚೈತನ್ಯವು ಉಪಹಿತವಾಗಿದೆ.

ಈ ರೀತಿಯಾಗಿ ಒಂದೇ ಅಂತಃಕರಣವು ಸಾಕ್ಷಿಗೆ ಉಪಾಧಿಯಾಗಿಯೂ, ಪ್ರಮಾತನಿಗೆ ವಿಶೇಷಣವಾಗಿಯೂ ಇದೆ. ಆದುದರಿಂದ ಅಂತಃಕರಣೋಪ

ಹಿತ ಚೈತನ್ಯವು ಪ್ರಮಾತ, ಆ ಪ್ರಮಾತನೇ ಕರ್ತ, ಭೋಕ್ತ, ಸುಖಿ, ದುಃಖಿ, ಸಂಸಾರಿಯಾದ ಜೀವನು ಇದು ಅವಚ್ಛೇದ ವಾದದ ರೀತಿ.

ಪ್ರಶ್ನೆ – ಅವಚ್ಛೇದ ವಾದದ ರೀತಿಯು ತಿಳಿದಂತಾಯಿತು ಆಭಾಸ ವಾದದ ರೀತಿಯಂತೆ ಜೀವ ಮತ್ತು ಸಾಕ್ಷಿಗಳ ಲಕ್ಷಣವನ್ನು ತಿಳಿಸಿರಿ.

ಉತ್ತರ – ಆಭಾಸವಾದದಲ್ಲಿ ಆಭಾಸಯುತ ಅಂತಃಕರಣವು ಜೀವನಿಗೆ ವಿಶೇಷಣವಾಗಿಯೂ, ಅದೇ ಆಭಾಸ ಸಹಿತ ಅಂತಃಕರಣವು ಸಾಕ್ಷಿಗೆ ಉಪಾಧಿಯಾಗಿಯೂ ಇರುತ್ತದೆ. ಆದುದರಿಂದ ಆಭಾಸ ಸಹಿತ ಅಂತಃಕರಣ ವಿಶಿಷ್ಟ ಚೈತನ್ಯವು ಜೀವನೆಂತಲೂ, ಆಭಾಸ ಸಹಿತ ಅಂತಃಕರಣೋಪಹಿತ ಚೈತನ್ಯವು ಸಾಕ್ಷಿ ಎಂತಲೂ ಹೇಳಿಸಿಕೊಳ್ಳುತ್ತದೆ.

ಅವಚ್ಛಿನ್ನವಾದ ಮತ್ತು ಆಭಾಸವಾದ ಈ ಎರಡು ಪಕ್ಷಗಳಲ್ಲಿಯೂ ವಿಶೇಷ ಸಹಿತ ಚೈತನ್ಯವೇ ಜೀವನೆನಿಸಿಕೊಳ್ಳುತ್ತದೆ ಆ ಜೀವನೇ ಸಂಸಾರಿ. ವಿಶೇಷಣವನ್ನು ಕಳೆದು ಉಳಿದ ವಿಶೇಷ್ಯ ಭಾಗವಾದ ಚೈತನ್ಯದಲ್ಲಿ ಜನನ ಮರಣಾದಿ ಸಂಸಾರವು ಸಂಭವಿಸುವುದಿಲ್ಲ. ಆದರೂ ವಿಶೇಷಣ ಮಾತ್ರ ವಾದ ವೃತ್ತಿ ಸಂಸಾರವು ವಿಶಿಷ್ಟ ಚೈತನ್ಯದಲ್ಲಿ ಪ್ರತೀತಿಯಾಗುತ್ತದೆ

ಕೆಲವು ಸ್ಥಳಗಳಲ್ಲಿ ವಿಶೇಷಣ ಧರ್ಮವು ವಿಶಿಷ್ಟದಲ್ಲಿಯೂ, ಕೆಲವು ಸ್ಥಳಗಳಲ್ಲಿ ವಿಶಿಷ್ಟ ಧರ್ಮವು ವಿಶೇಷಣದಲ್ಲಿಯೂ, ಇನ್ನು ಕೆಲವು ಸ್ಥಳಗಳಲ್ಲಿ ವಿಶೇಷ್ಯ, ವಿಶೇಷಣ ಈ ಎರಡೂ ವಿಶಿಷ್ಟ್ಯದಲ್ಲಿಯೂ ವ್ಯವಹಾರವಾಗುತ್ತವೆ.

ಉದಾಹರಣೆ :

೧ "ನಮ್ಮ ಹುಡುಗನು ದಂಡದಿಂದ ಘಟವನ್ನು ಒಡೆಯಲು ಘಟಾಕಾಶವು ನಾಶವಾಯಿತು". ಈ ಸ್ಥಳದಲ್ಲಿ ವಿಶೇಷಣವಾದ ಘಟಕ್ಕೆ ದಂಡದಿಂದ ನಾಶ ಸಂಭವಿಸುತ್ತದೆ. ವಿಶೇಷ್ಯವಾದ ಆಕಾಶಕ್ಕೆ ದಂಡದಿಂದ ನಾಶವು ಸಂಭವಿಸಲಾರದು. ಆದರೂ ವಿಶಿಷ್ಟವಾದ ಘಟಾಕಾಶದಲ್ಲಿ ನಾಶ ವ್ಯವಹಾರವು ಜರಗುತ್ತದೆ

೨. ''ಕಿವಿಯಲ್ಲಿ ಕುಂಡಲಗಳನ್ನು ಇಟ್ಟುಕೊಂಡ ಪುರುಷನು ನಿದ್ರಿಸು

ತ್ತಾನೆ” ಈ ಸ್ಥಾನದಲ್ಲಿ ಕುಂಡಲಗಳು ವಿಶೇಷಣ. ಅವುಗಳನ್ನು ಇಟ್ಟು ಕೊಂಡ ಪುರುಷನು ವಿಶೇಷ್ಯ ವಿಶೇಷಣವಾದ ಕುಂಡಲಗಳಲ್ಲಿ ನಿದ್ರಿಸುವುದು ಸಂಭವಿಸಲಾರದು ವಿಶೇಷ್ಯನಾದ ಪುರುಷನಲ್ಲಿಯೇ ನಿದ್ರೆಯು ಸಂಭವಿಸು ವುದು. ಆದರೂ ಕುಂಡಲಗಳನ್ನು ಇಟ್ಟುಕೊಂಡ ಪುರುಷನು ನಿದ್ರಿಸುತ್ತಾ ನೆಂದು ವಿಶಿಷ್ಟದಲ್ಲಿ ನಿದ್ರಾ ವ್ಯವಹಾರವು ಸಂಭವಿಸುತ್ತದೆ

೩. “ಶಸ್ತ್ರವನ್ನು ಧರಿಸಿದ ನಮ್ಮ ಸ್ನೇಹಿತ ಯುದ್ಧಕ್ಕೆ ಹೋದನು”. ಈ ಸ್ಥಾನದಲ್ಲಿ ಶಸ್ತ್ರವು ವಿಶೇಷಣ ಪುರುಷನು ವಿಶೇಷ್ಯ. ಪುರುಷ ಮತ್ತು ಶಸ್ತ್ರ ಎರಡೂ ಯುದ್ಧಕ್ಕೆ ಹೋಗಿರುತ್ತವೆ. ಆದುದರಿಂದ ಎರಡರ ಧರ್ಮ ಗಳಿಗೂ ವಿಶಿಷ್ಟದಲ್ಲಿ ವ್ಯವಹಾರ ಉಂಟಾಗುತ್ತದೆ.

ಅವಚ್ಛೇದ ವಾದದ ರೀತಿಯಿಂದ ಅಂತಃಕರಣವು ವಿಶೇಷಣವಾಗಿಯೂ, ಆಭಾಸವಾದದ ದೃಷ್ಟಿಯಿಂದ ಆಭಾಸ ಸಹಿತ ಅಂತಃಕರಣವು ವಿಶೇಷಣ ವಾಗಿಯೂ, ಈ ಎರಡೂ ಪಕ್ಷಗಳಲ್ಲಿಯೂ ಚೈತನ್ಯವು ವಿಶೇಷ್ಯವಾಗಿಯೂ ಇದೆ. ಆ ವಿಶೇಷ್ಯ ಚೈತನ್ಯದಲ್ಲಿ ಜನ್ಮವೇ ಮೊದಲಾದ ಸಂಸಾರವು ಸಂಭವಿಸ ಲಾರದು ವಿಶೇಷಣವಾದ ಅಂತಃಕರಣ ಇಲ್ಲವೇ ಆಭಾಸ ಸಹಿತ ಅಂತಃ ಕರಣ – ಇವುಗಳ ಧರ್ಮವಾದ ಜನ್ಮವೇ ಮೊದಲಾದ ಸಂಸಾರಕ್ಕೆ ವಿಶಿಷ್ಟ ಚೈತನ್ಯದಲ್ಲಿ ವ್ಯವಹಾರವು ಕಂಡುಬರುತ್ತದೆ.

ಪ್ರಶ್ನೆ – ಹಾಗೆಂದರೇನು ?

ಉತ್ತರ – ಅವಿವೇಕಿಗಳಾದ ಜನರು ಭ್ರಾಂತಿ ಬಲದಿಂದ ಅಂತಃಕರಣ ರೂಪವಾದ ವಿಶೇಷಣದ ಧರ್ಮವಾದ ಸಂಸಾರವನ್ನು ವಿಶಿಷ್ಟ ಚೈತನ್ಯದಲ್ಲಿ ನೋಡುತ್ತಾರೆಂದರ್ಥ

ಪ್ರಶ್ನೆ – ವ್ಯವಹಾರವೆಂದರೇನು ?

ಉತ್ತರ – ಪ್ರತೀತಿ ಹಾಗೂ ಕಥನ ಈ ಎರಡೂ ಸೇರಿ ವ್ಯವಹಾರವೆನಿಸಿ ಕೊಳ್ಳುತ್ತದೆ.

ಈ ರೀತಿಯಾಗಿ ಆಭಾಸವಾದಕ್ಕೂ, ಅವಚ್ಛೇದ ವಾದಕ್ಕೂ ಪರಸ್ಪರ ಭೇದವಿದ್ದರೂ, ಈ ಎರಡು ಮತಗಳಲ್ಲಿಯೂ ವಿಶೇಷಣದ ಧರ್ಮವಾದ ಸಂಸಾರವು ವಿಶಿಷ್ಟದಲ್ಲಿಯೇ ವ್ಯವಹಾರವಾಗುತ್ತದೆ.

ಪ್ರಶ್ನೆ – ಅವಚ್ಛೇದ ವಾದ, ಆಭಾಸವಾದ ಈ ಎರಡರಲ್ಲಿ ಶ್ರೇಷ್ಠ ವಾದದ್ದು ಯಾವುದು ?

ಉತ್ತರ – ಆಭಾಸವಾದದಲ್ಲಿ ಅಂತಃಕರಣವು ಆಭಾಸ ಸಹಿತವಾಗಿರುತ್ತದೆ ಅವಚ್ಛೇದ ವಾದದಲ್ಲಿ ಅಂತಃಕರಣವು ಆಭಾಸ ರಹಿತವಾಗಿರುತ್ತದೆ. ಈ ರೀತಿ ಆಭಾಸವಾದವೇ ಶ್ರೇಷ್ಠ ಏಕೆಂದರೆ ಬ್ರಹ್ಮಸೂತ್ರ ಭಾಷ್ಯಾದಿ ಗ್ರಂಥಗಳಲ್ಲಿ ಭಾಷ್ಯಕಾರರು ಆಭಾಸವಾದವನ್ನೇ ಅಂಗೀಕರಿಸಿರುತ್ತಾರೆ.

ಮತ್ತು ಪಂಚದಶಿ ಕರ್ತರಾದ ಶ್ರೀ ವಿದ್ಯಾರಣ್ಯ ಸ್ವಾಮಿಗಳವರು ಅವಚ್ಛೇದ ವಾದದಲ್ಲಿ ದೋಷವನ್ನು ಕಂಡು ಹಿಡಿದಿದ್ದಾರೆ ಅದು ಯಾವುದೆಂದರೆ :

ಆಭಾಸರಹಿತ ಅಂತಃಕರಣ ವಿಶಿಷ್ಟ ಚೈತನ್ಯಕ್ಕೆ ಪ್ರಮಾತವೆನ್ನುವುದಾದರೆ ಘಟ ವಿಶಿಷ್ಟ ಚೈತನ್ಯಕ್ಕೂ ಪ್ರಮಾತವೆನ್ನಬೇಕಾಗುತ್ತದೆ. ಕಾರಣವೇನೆಂದರೆ ಅಂತಃಕರಣವು ಭೂತಗಳ ಕಾರ್ಯವಾದಂತೆ ಘಟವೂ ಸಹ ಭೂತಗಳ ಕಾರ್ಯವೇ ಮತ್ತು ಅಂತಃಕರಣವು ಚೈತನ್ಯಕ್ಕೆ ಅವಚ್ಛೇದಕವಾಗಿದೆ ಆದುದರಿಂದ ಅಂತಃಕರಣ ವಿಶಿಷ್ಟವು ಪ್ರಮಾತವಾದರೆ ಘಟ ವಿಶಿಷ್ಟವೂ ಪ್ರಮಾತವಾಗಬೇಕಾಗುತ್ತದೆ

ಅಂತಃಕರಣದಲ್ಲಿ ಆಭಾಸವನ್ನು ಅಂಗೀಕರಿಸುವುದರಿಂದ ಈ ದೋಷವು ಉಂಟಾಗುವುದಿಲ್ಲ.

ಪ್ರಶ್ನೆ – ಇದಕ್ಕೆ ಕಾರಣವೇನು ?

ಉತ್ತರ – ಅಂತಃಕರಣವು ಪಂಚಭೂತಗಳ ಸತ್ವಗುಣ ಕಾರ್ಯ. ಆದ್ದರಿಂದ ಅದು ಸ್ವಚ್ಛವಾಗಿದೆ. ಶರೀರ, ಘಟ ಮೊದಲಾದ ಪದಾರ್ಥಗಳು ಪಂಚಭೂತಗಳ ತಮೋಗುಣ ಕಾರ್ಯವಾದುದರಿಂದ ಅವು ಸ್ವಚ್ಛವಲ್ಲ. ಸ್ವಚ್ಛ ಪದಾರ್ಥವೇ ಆಭಾಸಕ್ಕೆ ಯೋಗ್ಯವಾಗಿದೆ. ಮಲಿನ ಪದಾರ್ಥವು ಆಭಾಸಕ್ಕೆ ಯೋಗ್ಯವಲ್ಲ

ಉದಾಹರಣೆ – ಕನ್ನಡಿಯು ಮಣ್ಣಿನಿಂದ ಉಂಟಾದುದಾದರೂ ಸ್ವಚ್ಛವಾದುದರಿಂದ ಮುಖಾಭಾಸವು ಉಂಟಾಗುತ್ತದೆ. ಗಡಿಗೆಯೂ ಸಹ ಮಣ್ಣಿನಿಂದ ಉಂಟಾದುದಾದರೂ ಮಲಿನವಾಗಿರುವುದರಿಂದ ಆಭಾಸ ಉಂಟಾಗಲಾರದು. ಅದರಂತೆ ಅಂತಃಕರಣವು ಸ್ವಚ್ಛವಾದುದರಿಂದ ಅದರಲ್ಲಿ ಚೈತನ್ಯದ

ಆಭಾಸ ಉಂಟಾಗುತ್ತದೆ ಶರೀರ, ಗಡಿಗೆ ಮೊದಲಾದುವುಗಳು ಮಲಿನ ವಾದುದರಿಂದ ಅವುಗಳಲ್ಲಿ ಆಭಾಸವು ಸಂಭವಿಸುವುದಿಲ್ಲ

ಪ್ರಶ್ನೆ – ಅಂತಃಕರಣದಲ್ಲಿ ಮಾತ್ರ ಆಭಾಸವು ಸಂಭವಿಸುತ್ತದೆ, ಶರೀರ ಘಟ ಮೊದಲಾದುವುಗಳಲ್ಲಿ ಆಭಾಸವು ಸಂಭವಿಸುವುದಿಲ್ಲ ಎಂಬುದಕ್ಕೆ ಕಾರಣವೇನು ? ಮತ್ತು ಆಭಾಸಯುತ ಅಂತಃಕರಣ ವಿಶಿಷ್ಟ ಚೈತನ್ಯಕ್ಕೆ ಪ್ರಮಾತನೆಂಬುದಕ್ಕೆ ಪ್ರಮಾಣವೇನು ?

ಉತ್ತರ – ಸಾವಧಾನವಾಗಿ ಕೇಳು. ಅಂತಃಕರಣದಲ್ಲಿ ಎರಡು ವಿಧ ವಾದ ಪ್ರಕಾಶವಿರುತ್ತದೆ. ಒಂದನೆಯದು ವ್ಯಾಪಕ ಚೈತನ್ಯದ ಪ್ರಕಾಶ. ಎರಡನೆಯದು ಆಭಾಸನ ಪ್ರಕಾಶ. ಶರೀರ ಘಟ ಮೊದಲಾದುವುಗಳಲ್ಲಿ ಒಂದನೆಯದಾದ ವ್ಯಾಪಕ ಚೈತನ್ಯದ ಪ್ರಕಾಶವು ಮಾತ್ರ ಇರುತ್ತದೆ ಎರಡನೆಯದಾದ ಆಭಾಸನ ಪ್ರಕಾಶ ಇರುವುದಿಲ್ಲ. ಆದುದರಿಂದಲೇ ಎರಡೂ ವಿಧವಾದ ಪ್ರಕಾಶದಿಂದ ಕೂಡಿದ ಅಂತಃಕರಣ ವಿಶಿಷ್ಟ ಚೈತನ್ಯವನ್ನೇ ಪ್ರಮಾತನೆನ್ನುತ್ತಾರೆ. ಒಂದೇ ಪ್ರಕಾಶವಿರುವ ಶರೀರ, ಘಟಾದಿ ವಿಶಿಷ್ಟ ಚೈತನ್ಯವು ಪ್ರಮಾತವಾಗಲಾರದು.

ಅಂತಃಕರಣದಲ್ಲಿ ಆಭಾಸನನ್ನು ಒಪ್ಪಿಕೊಳ್ಳದವರ ಮತದಲ್ಲಿ ಘಟಾದಿ ಗಳಂತೆ ಅಂತಃಕರಣದಲ್ಲಿ ಆಭಾಸನಿಗೆ ಸಂಬಂಧಪಟ್ಟ ಎರಡನೆಯ ಪ್ರಕಾಶ ಇರುವುದಿಲ್ಲ. ವ್ಯಾಪಕ ಚೈತನ್ಯದ ಪ್ರಕಾಶವು ಮಾತ್ರ ಇರುತ್ತದೆ· ಅದೇ ವ್ಯಾಪಕ ಚೈತನ್ಯದ ಪ್ರಕಾಶವು ಘಟಾದಿಗಳಲ್ಲಿಯೂ ಇರುತ್ತದೆ. ಅಂತಃಕರಣ ವಿಶಿಷ್ಟವೇ ಪ್ರಮಾತವೆನ್ನುವುದಾದರೆ ಘಟ ವಿಶಿಷ್ಟ, ಶರೀರ ವಿಶಿಷ್ಟ, ಭಿತ್ತಿ (ಗೋಡೆ) ವಿಶಿಷ್ಟ ಚೈತನ್ಯವನ್ನೂ ಸಹ ಪ್ರಮಾತನೆನ್ನಬೇಕಾಗುತ್ತದೆ.

ಆಭಾಸವಾದದ ಪ್ರಕಾರ ಅಂತಃಕರಣದಲ್ಲಿ ಆಭಾಸನ ದ್ವಿತೀಯ ಪ್ರಕಾಶವಿರುವುದರಿಂದ ಆಭಾಸವಾದವು ಶ್ರೇಷ್ಠವಾಗಿದೆ

ಪ್ರಶ್ನೆ – ಆಭಾಸವಾದವು ಶ್ರೇಷ್ಠವೆನ್ನುವುದಕ್ಕೆ ಮತ್ತೇನಾದರೂ ಕಾರಣವಿದೆಯೇ ?

ಉತ್ತರ – ಆಭಾಸವಾದದಲ್ಲಿ ಆಭಾಸನ ಕಲ್ಪನೆಯು ಅಧಿಕವಾಗಿದೆ.

ಅವಚ್ಛೇದ ವಾದದಲ್ಲಿ ಆಭಾಸನ ಕಲ್ಪನೆ ಇಲ್ಲ. ಆದುದರಿಂದ ಆಭಾಸವಾದದಲ್ಲಿ ಗೌರವ ಎಂದರೆ ವಿಸ್ತಾರವು ಕಂಡುಬರುತ್ತದೆ. ಅವಚ್ಛೇದ ವಾದದಲ್ಲಿ ಇದೊಂದು ಸಂಕೋಚ ಮಂದ ಬುದ್ಧಿಯುಳ್ಳ ಜಿಜ್ಞಾಸುಗಳ ಬುದ್ಧಿಯಲ್ಲಿ ಆಭಾಸವಾದವು ಸುಲಭವಾಗಿ ತಿಳಿದುಬರುತ್ತದೆ. ಈ ಕಾರಣದಿಂದಲೂ ಆಭಾಸವಾದವು ಶ್ರೇಷ್ಠ

ಪ್ರಶ್ನೆ – ಹಿಂದೆ ನೀವು ನಾಲ್ಕು ವಿಧವಾದ ಚೈತನ್ಯಗಳನ್ನು ಹೇಳಿರುತ್ತೀರಿ ಅವುಗಳಿಗೂ ಸಾಕ್ಷಿ ಚೇತನಕ್ಕೂ ಇರುವ ಅಂತರವೇನು ? ಮತ್ತು ಸಾಕ್ಷಿಯ ಸಾಕ್ಷಾತ್ಕಾರವು ಹೇಗೆ ?

ಉತ್ತರ – ೧ ಒಂದನೆಯದು ಅಂತಃಕರಣ ವಿಶಿಷ್ಟ ಚೈತನ್ಯ ಇಲ್ಲವೇ ಆಭಾಸ ಸಹಿತ ಅಂತಃಕರಣ ವಿಶಿಷ್ಟ ಚೈತನ್ಯ ಇದಕ್ಕೆ ಪ್ರಮಾತೃ ಚೈತನ್ಯವೆನ್ನುತ್ತಾರೆ

೨ ಘಟಾದಿ ಪ್ರಮೇಯಾವಚ್ಛಿನ್ನ ಚೈತನ್ಯಕ್ಕೆ ಪ್ರಮೇಯ ಚೈತನ್ಯವೆನ್ನುತ್ತಾರೆ

೩ ಕೇವಲ ವೃತ್ತಿ ವಿಶಿಷ್ಟ ಚೈತನ್ಯ ಅಥವಾ ಸಾಭಾಸವೃತ್ತಿ ವಿಶಿಷ್ಟ ಚೈತನ್ಯಕ್ಕೆ ಪ್ರಮಾಣ ಚೈತನ್ಯವೆನ್ನುತ್ತಾರೆ

೪ ಘಟಾದಿ ವಿಷಯಾಕಾರ ವೃತ್ತಿಯಲ್ಲಿ ಆರೂಢವಾಗಿರುವ ಚೈತನ್ಯಕ್ಕೆ ಪ್ರಮಾ ಚೈತನ್ಯವೆನ್ನುತ್ತಾರೆ ಇವೇ ನಾಲ್ಕು ಚೈತನ್ಯಗಳು

ಪ್ರಮಾ ಚೈತನ್ಯಕ್ಕೆ ಸಾಧನವಾದ ಇಂದ್ರಿಯಗಳನ್ನು ಪ್ರಮಾಣವೆನ್ನುತ್ತಾರೆ. ಹೀಗಿದ್ದರೂ ಚೈತನ್ಯವು ಸ್ವರೂಪತಃ ನಿತ್ಯವಾಗಿದೆ. ಅದರಲ್ಲಿ ಇಂದ್ರಿಯಜನ್ಯತ್ವದ ಅಭಾವದಿಂದ ಪ್ರಮಾ ಚೈತನ್ಯಕ್ಕೆ ಸಾಧನ ಇಂದ್ರಿಯಗಳೆಂದು ಹೇಳಕೂಡದು ಆಳವಾಗಿ ನೋಡಿದರೆ, ನಿರುಪಾಧಿಕ ಚೈತನ್ಯದಲ್ಲಿ ಪ್ರಮಾ ವ್ಯವಹಾರವು ಸಂಭವಿಸುವುದಿಲ್ಲ ಆ ಪ್ರಮಾ ವ್ಯವಹಾರವು ವಿಷಯಾಕಾರ ವೃತ್ತಿ ಉಪಹಿತ ಚೈತನ್ಯದಲ್ಲಿ ಸಂಭವಿಸುತ್ತದೆ ಆದುದರಿಂದ ಚೈತನ್ಯದಲ್ಲಿ ಪ್ರಮಾ ವ್ಯವಹಾರದ ಪ್ರವೃತ್ತಿಗೆ ವಿಷಯಾಕಾರ ವೃತ್ತಿಯು ಇಂದ್ರಿಯಗಳಿಂದ ಉಂಟಾಗುವುದರಿಂದ ಆ ವೃತ್ತಿ ಉಪಹಿತವಾದ ಪ್ರಮಾ ಚೈತನ್ಯವು ಇಂದ್ರಿಯಜನ್ಯವೆಂದು ಹೇಳಲ್ಪಟ್ಟಿದೆ

ಅಂದಮೇಲೆ ಅಂತಃಕರಣದ ಪರಿಣಾಮವು ಪೂರ್ಣವಾಗಿ ಪ್ರಮಾ ಆಗಲಾರದು ಶರೀರದಿಂದ ಹಿಡಿದು ಘಟಾದಿಗಳವರೆಗೆ ಇರುವ ಅಂತಃಕರಣದ ಪರಿಣಾಮವು ಪ್ರಮಾಣವೆನಿಸುತ್ತದೆ. ಅದೇ ಅಂತಃಕರಣದ ಪರಿಣಾಮವು ವಿಷಯದೊಡನೆ ಕೂಡಿ ತದಾಕಾರವಾದಾಗ ವಿಷಯಾಕಾರವಾದ ಪರಿಣಾಮವು ಪ್ರಮಾ ಎನಿಸುತ್ತದೆ. ಈ ರೀತಿಯಿಂದ ಪ್ರಮಾ ಮತ್ತು ಪ್ರಮಾಣ ಇವುಗಳಲ್ಲಿ ಭೇದವು ಅಲ್ಪವಾಗಿದೆ.

ಹೀಗೆ ನೋಡಿದರೆ ಬಾಹ್ಯ ಪದಾರ್ಥಗಳ ಪ್ರತ್ಯಕ್ಷ ಜ್ಞಾನ ಪ್ರಸಂಗದಲ್ಲಿ ಅಂತಃಕರಣವು ಇಂದ್ರಿಯಗಳ ದ್ವಾರ ಹೊರ ಹೊರಟು ಘಟಾದಿ ವಿಷಯಗಳ ಸಮಾನಾಕಾರವನ್ನು ತಾಳುತ್ತದೆ ಇದು ಹೊರಗಿನ ಪದಾರ್ಥಗಳು ಪ್ರತ್ಯಕ್ಷವಾಗುವ ರೀತಿ.

ಪ್ರಶ್ನೆ – ಇನ್ನು ಶರೀರ ಸ್ಥಿತವಾದ ಸಾಕ್ಷಿರೂಪ ಆತ್ಮನು ಪ್ರತ್ಯಕ್ಷ ಆಗುವುದು ಹೇಗೆ ?

ಉತ್ತರ – ಶರೀರ ಸ್ಥಿತವಾದ ಸಾಕ್ಷಿರೂಪ ಆತ್ಮನ ಪ್ರತ್ಯಕ್ಷ ಜ್ಞಾನ ಪ್ರಸಂಗದಲ್ಲಿ ಅಂತಃಕರಣ ವೃತ್ತಿಯು ಹೊರಗೆ ಹೋಗದೆ ಶರೀರದೊಳಗೆ ಆತ್ಮಾಕಾರವನ್ನು ಧರಿಸುತ್ತದೆ ಆ ಆತ್ಮಾಕಾರ ವೃತ್ತಿಯಿಂದ ಆತ್ಮಾಶ್ರಿತವಾದ ಆವರಣವು ದೂರವಾಗಿ ಆ ವೃತ್ತಿಯಲ್ಲಿ ಆತ್ಮವು ಸ್ವತಃ ಪ್ರಕಾಶರೂಪವಾಗಿ ಪ್ರಕಟವಾಗುತ್ತದೆ. ಈ ಕಾರಣದಿಂದಲೇ ಶಾಸ್ತ್ರದಲ್ಲಿ ಆತ್ಮನು ವೃತ್ತಿಗೆ ವಿಷಯನೆಂದೂ ಹೇಳಲ್ಪಟ್ಟಿದೆ. ಆದರೂ ವೃತ್ತಿಯಲ್ಲಿರುವ ಚಿದಾಭಾಸನಿಗೆ ಆತ್ಮನು ವಿಷಯನಲ್ಲ. ಈ ರೀತಿಯಾಗಿ ಸಾಕ್ಷಿಯಾದ ಆತ್ಮನು ಸ್ವಯಂ ಪ್ರಕಾಶ ರೂಪನಾಗಿ ಭಾಸಿಸುತ್ತಾನೆಂದು ಸಿದ್ಧವಾಯಿತು

ಸಂಬಂಧ – ಮುಂದಿನ ದೋಹಾದಲ್ಲಿ "ಅಹಂ ಬ್ರಹ್ಮಾಸ್ಮಿ" ಎಂಬ ಜ್ಞಾನವು ಹೇಗೆ ಪ್ರತ್ಯಕ್ಷವಾಗುತ್ತದೆ ಎಂಬ ವಿಷಯವು ನಿರೂಪಿಸಲ್ಪಡುತ್ತದೆ

## ತತ್ತ್ವದೃಷ್ಟಿರುವಾಚ

**ದೋಹಾ** – ಇಂದ್ರಿಯತೆ ಸಂಬಂಧ ಬಿನ, "ಅಹಂಬ್ರಹ್ಮ"ಯಹ ಜ್ಞಾನ ।
ಕೈ ಸೈ ಹ್ವೈ ಪ್ರತ್ಯಚ್ಛ ಪ್ರಭು, ಮೋಕೊ ಕಹೌ ಬಖಾನ ॥

ತಾತ್ಪರ್ಯ – ಹೇ ಭಗವಂತನಾದ ಸದ್ಗುರುವೇ, ಇಂದ್ರಿಯಗಳ ಸಂಬಂಧವಿಲ್ಲದೆ "ಅಹಂ ಬ್ರಹ್ಮಾsಸ್ಮಿ" ಎಂಬ ಜ್ಞಾನವು ಹೇಗಾಗುತ್ತದೆ? ಈ ವಿಷಯವನ್ನು ವಿವರವಾಗಿ ಬೋಧಿಸಿರಿ

ವಿವರಣೆ – ಬ್ರಹ್ಮದ ಅಪರೋಕ್ಷ ಜ್ಞಾನದಿಂದ ಸಕಲ ಅವಿದ್ಯಾ ಜಾಲವು ನಾಶವಾಗುತ್ತದೆ, ಅದು ಪರೋಕ್ಷ ಜ್ಞಾನದಿಂದ ಆಗಲಾರದು ಎಂದು ಹಿಂದೆ ಹೇಳಲ್ಪಟ್ಟಿದೆ. ಈ ಬೋಧೆಯಲ್ಲಿ ಒಂದು ಸಂದೇಹವು ಎದ್ದು ಕೊಳ್ಳುತ್ತದೆ ಅದೇನೆಂದರೆ, ಬ್ರಹ್ಮಜ್ಞಾನವು ಪ್ರತ್ಯಕ್ಷವಾಗುವುದು ಸಂಭವಿಸುವುದಿಲ್ಲ ಏಕೆಂದರೆ ಇಂದ್ರಿಯಜನ್ಯ ಜ್ಞಾನಕ್ಕೆ ಪ್ರತ್ಯಕ್ಷವೆಂದೆನ್ನಬೇಕು. ಬ್ರಹ್ಮಜ್ಞಾನವು ಇಂದ್ರಿಯಜನ್ಯ ಜ್ಞಾನವಲ್ಲ. ಹೇಗೆಂದರೆ, ನೇತ್ರೇಂದ್ರಿಯಕ್ಕೆ ನೀಲ ಪೀತಾದಿಗಳ ಮತ್ತು ರೂಪವಂತ ಘಟಾದಿಗಳ ಜ್ಞಾನವಾಗುತ್ತದೆ. ಬ್ರಹ್ಮವು ಅಂತಹ ಪದಾರ್ಥವಲ್ಲ ಆದುದರಿಂದ ನೇತ್ರೇಂದ್ರಿಯಕ್ಕೆ ಬ್ರಹ್ಮ ವಿಷಯಕವಾದ ಜ್ಞಾನವು ಸಂಭವಿಸಲಾರದು

ಪ್ರಶ್ನೆ – ಶ್ರೀ ರಾಮ, ಶ್ರೀ ಕೃಷ್ಣ ಮುಂತಾದವರ ಮನುಷ್ಯಾಕಾರ ಮೂರ್ತಿಗಳು ರೂಪವಂತವಾಗಿ ನಮ್ಮ ನೇತ್ರೇಂದ್ರಿಯಗಳಿಗೆ ಪ್ರತ್ಯಕ್ಷವಾಗುತ್ತವೆ ಆ ಮೂರ್ತಿಗಳು ಬ್ರಹ್ಮ ಸ್ವರೂಪವೆಂದು ಶಾಸ್ತ್ರಗಳಲ್ಲಿ ಹೇಳಿದೆಯಲ್ಲವೆ? ಹಾಗಾದರೆ ನೇತ್ರೇಂದ್ರಿಯಕ್ಕೆ ಬ್ರಹ್ಮ ಸ್ವರೂಪವು ಸಾಕ್ಷಾತ್ಕಾರವಾದಂತಾಯಿತಲ್ಲಾ ?

ಉತ್ತರ – ಆ ರೂಪವಂತವಾದ ಮೂರ್ತಿಗಳು ಮಾಯಾ ವಿರಚಿತವಾದುದರಿಂದ ಮಿಥ್ಯೆಯಾಗಿವೆ. ಈ ಮೂರ್ತಿಗಳು ಬ್ರಹ್ಮವಲ್ಲ. ಪುರಾಣಗಳಲ್ಲಿ ರಾಮ, ಕೃಷ್ಣಾದಿಗಳು ಬ್ರಹ್ಮರೂಪವೆಂದು ಹೇಳಿರುವುದರ ಮರ್ಮವೇ ಬೇರೆ. ಆ ಶರೀರ ರೂಪ ಮೂರ್ತಿಗಳೇ ಬ್ರಹ್ಮರೂಪವೆಂಬ ಅಭಿಪ್ರಾಯದಿಂದ ಹೇಳಿದ್ದಲ್ಲ. ಮತ್ತೆ ಹೇಗೆ ಹೇಳಿರುವುದೆಂದರೆ ರಾಮ, ಕೃಷ್ಣ ಮುಂತಾದ ಅವತಾರಿಕ ಪುರುಷರ ಶರೀರಗಳಿಗೆ ಅಧಿಷ್ಠಾನವು ಬ್ರಹ್ಮವೆಂಬ ಅಭಿಪ್ರಾಯದಿಂದ ಹೇಳಿದೆ

ಈ ವಿಷಯದಲ್ಲಿ ಮತ್ತೊಂದು ಶಂಕೆ ಬರುತ್ತದೆ. ಅದೇನೆಂದರೆ, ಬರೀ

ರಾಮ, ಕೃಷ್ಣ ಮೊದಲಾದ ಅವತಾರಿಕ ಪುರುಷರ ಶರೀರಗಳಿಗೆ ಅಧಿಷ್ಠಾನವು ಬ್ರಹ್ಮವೆಂದಲ್ಲ. ಸರ್ವ ಶರೀರಗಳಿಗೂ ಬ್ರಹ್ಮವೇ ಅಧಿಷ್ಠಾನ ಆದುದರಿಂದ ಅಧಿಷ್ಠಾನವೆಂಬ ಅಭಿಪ್ರಾಯದಿಂದ ರಾಮ, ಕೃಷ್ಣಾದಿ ಅವತಾರಿಕ ಪುರುಷರಿಗೆ ಬ್ರಹ್ಮ ಸ್ವರೂಪವನ್ನು ಹೇಳುವ ಪಕ್ಷದಲ್ಲಿ ಸರ್ವ ಶರೀರಗಳಿಗೂ ಅಧಿಷ್ಠಾನವು ಬ್ರಹ್ಮವಾಗಿರುವುದರಿಂದ ಮನುಷ್ಯ, ಪಶು, ಪಕ್ಷ್ಯಾದಿ ಸಮಸ್ತ ಶರೀರಗಳೂ ಬ್ರಹ್ಮರೂಪವೇ ಎಂದು ಹೇಳಬೇಕಾಗುತ್ತದೆ ಹೀಗೆ ಹೇಳುವುದರಿಂದ ರಾಮ, ಕೃಷ್ಣಾದಿ ಅವತಾರಿಕ ಪುರುಷರ ಸರ್ವ ಶರೀರಗಳಿಗೂ ಸಮಾನ ರಿಂದಾಗುತ್ತದೆ. ಹೀಗಾದರೆ ಅವರ ಶರೀರಗಳಿಗೆ ಪೂಜಾದಿ ಸತ್ಕಾರ್ಯ ಗಳನ್ನು ಮಾಡುವ ಅಗತ್ಯವೇ ಉಳಿಯುವುದಿಲ್ಲ ಇದು ಅನುಭವಕ್ಕೆ ವಿರೋಧವೇ ಆಗಿದೆ ಆದುದರಿಂದ ರಾಮ, ಕೃಷ್ಣಾದಿ ಅವತಾರಿಕ ಪುರುಷರ ಶರೀರಗಳಿಗೆ ಅಧಿಷ್ಠಾನವಾದುದು ಬ್ರಹ್ಮವೆಂಬ ಅಭಿಪ್ರಾಯವು ಯುಕ್ತವಾದು ದಲ್ಲ ಇತರೆ ಜೀವರುಗಳಿಗಿಂತ ವಿಶೇಷ ರೂಪತ್ವದ ಸಿದ್ಧಿಗಾಗಿ ರಾಮ, ಕೃಷ್ಣಾದಿಗಳ ಶರೀರಗಳು ಬ್ರಹ್ಮವೆಂದು ಅಂಗೀಕರಿಸುವುದು ಯೋಗ್ಯವೆಂಬ ಅಭಿಪ್ರಾಯದಿಂದ ರಾಮ, ಕೃಷ್ಣಾದಿ ಅವತಾರಿಕ ಪುರುಷರು ಬ್ರಹ್ಮರೂಪ ವೆಂದು ಹೇಳಲ್ಪಟ್ಟಿದೆ

ಶ್ರೀ ರಾಮ, ಶ್ರೀ ಕೃಷ್ಣ ಮೊದಲಾದ ಅವತಾರಿಗಳ ಶರೀರಕ್ಕೂ, ಇತರ ಶರೀರಗಳಿಗೂ ಇರುವ ಭೇದವೇನೆಂದರೆ ·

೧ ಜೀವರುಗಳ ಶರೀರಗಳು ಪುಣ್ಯಪಾಪಗಳಿಗೆ ಅಧೀನವಾಗಿರುತ್ತವೆ

೨ ಜೀವರುಗಳ ಶರೀರಗಳು ಭೂತ ಕಾರ್ಯಗಳು

೩. ಜೀವರುಗಳಿಗೆ ದೇಹಾದಿ ಅನಾತ್ಮ ಪದಾರ್ಥಗಳಲ್ಲಿ ಅವಿದ್ಯಾ ಬಲದಿಂದ "ಅಹಂ" "ಮಮ" ಅಧ್ಯಾಸವು ಉಂಟಾಗಿರುತ್ತದೆ ಅದು ಶ್ರೋತ್ರೀಯ ಬ್ರಹ್ಮನಿಷ್ಠ ಸದ್ಗುರುಗಳ ಉಪದೇಶದಿಂದ ನಿವೃತ್ತಿಯಾಗು ತ್ತದೆ. ಇವು ಸಾಮಾನ್ಯ ಜೀವರುಗಳ ಲಕ್ಷಣಗಳು

ಇನ್ನು ಶ್ರೀ ರಾಮ, ಶ್ರೀ ಕೃಷ್ಣಾದಿ ಅವತಾರಿಕ ಪುರುಷರ ಶರೀರಗಳ ಲಕ್ಷಣಗಳೇನೆಂದರೆ :

೧. ಅವು ಪುಣ್ಯ ಪಾಪಗಳಿಂದ ಉಂಟಾದವುಗಳಲ್ಲ.

೨. ಅವರ ದೇಹಗಳು ಭೂತ ಕಾರ್ಯಗಳಲ್ಲ. ಅವು ಸಾಕ್ಷಾತ್

ಮಾಯಾ ಕಾರ್ಯಗಳು. ಹೇಗೆಂದರೆ, ಸೃಷ್ಟಿಯ ಆದಿಯಲ್ಲಿ ಸರ್ವ ಪ್ರಾಣಿಗಳ ಕರ್ಮವು ಭೋಗವನ್ನು ಕೊಡಲು ಸನ್ಮುಖವಾದಾಗ ಆಪ್ತಕಾಮನಾದ ಈಶ್ವರನಲ್ಲಿ ಜೀವರುಗಳ ಕರ್ಮಕ್ಕನುಸಾರವಾಗಿ ನಾನು ಜಗದುತ್ಪತ್ತಿಯನ್ನು ಮಾಡಬೇಕೆಂಬ ಸಂಕಲ್ಪ ಉಂಟಾಗುತ್ತದೆ. ಈ ಸಂಕಲ್ಪದಿಂದಲೇ ಜಗತ್ತಿನ ಪಾಲನೆಯೂ ಸಹ ನಡೆದು ಹೋಗುತ್ತದೆ. ಕರ್ಮಾನುಸಾರವಾಗಿ ಸುಖ ದುಃಖಗಳ ಭೋಗವನ್ನು ಕೊಡುವುದಕ್ಕೆ ಪಾಲನೆ ಎನ್ನುತ್ತಾರೆ.

ಆ ಪಾಲನಾ ಸಂಕಲ್ಪದಲ್ಲಿ ಉಪಾಸಕ ಪುರುಷರ ಉಪಾಸನೆಯ ಬಲದಿಂದಲೂ ಮತ್ತು ದುಷ್ಟ ಪುರುಷರ ದುಷ್ಕೃತ್ಯದ ಫಲದಿಂದಲೂ ಈಶ್ವರನಿಗೆ "ರಾಮ ಕೃಷ್ಣಾದಿ ನಾಮದಿಂದ ಕೂಡಿದ ಮೂರ್ತಿಗಳು ಸರ್ವರಿಗೂ ಪ್ರತೀತಿಯಾಗಲಿ" ಎಂಬ ಸಂಕಲ್ಪ ಉಂಟಾಗುತ್ತದೆ. ಆಗ ಜಗತ್ಕರ್ತನಾದ ಈಶ್ವರನ ಸಂಕಲ್ಪವು ಸತ್ಯವಾದುದರಿಂದ ಆ ಸತ್ಯ ಸಂಕಲ್ಪದ ಬಲದಿಂದ ವಿಶೇಷ ನಾಮ ರೂಪ ರಹಿತ ಈಶ್ವರನಲ್ಲಿ ರಾಮ ಕೃಷ್ಣಾದಿ ಹೆಸರುಗಳುಳ್ಳ ಶಾಮ ಸುಂದರ ಪೀತಾಂಬರಧಾರಿಗಳಾದ ವಿಗ್ರಹಗಳು ಉತ್ಪತ್ತಿಯಾಗುತ್ತವೆ. ಆ ಉತ್ಪತ್ತಿಯಾದ ವಿಗ್ರಹಗಳು ಜೀವರುಗಳ ಶರೀರಗಳಂತೆ ಕರ್ಮಾಧೀನಗಳಲ್ಲ ಮತ್ತು ಭೂತಕಾರ್ಯಗಳಲ್ಲ.

ಶ್ರೀ ರಾಮ, ಶ್ರೀ ಕೃಷ್ಣಾದಿ ಅವತಾರಿಕ ಪುರುಷರ ದೇಹದಿಂದ ಸಾಧು, ಅಸಾಧು ಪುರುಷರಿಗೆ ಕ್ರಮವಾಗಿ ಸುಖ ದುಃಖಗಳು ಸಂಭವಿಸುತ್ತವೆ. ಯಾವುದು ಯಾವುದರ ಸುಖ ದುಃಖಗಳಿಗೆ ಹೇತುವೋ ಅದು ಅದರ ಪುಣ್ಯ ಪಾಪಗಳಿಂದ ರಚಿತವಾಗಿರುತ್ತದೆ. ಆದುದರಿಂದ, ಶರೀರಗಳು ಪುಣ್ಯ ಪಾಪಕ್ಕೆ ಅಧೀನವೆಂದು ಹೇಳಲ್ಪಟ್ಟಿವೆ. ಈ ರೀತಿಯಾಗಿ ಅವತಾರ ಪುರುಷರ ಶರೀರಗಳು ಸಾಧು ಪುರುಷರಿಗೆ ಸುಖ ಹೇತುವಾದುದರಿಂದ ಅವರ ಪುಣ್ಯ ಸಮುದಾಯದಿಂದ ಮತ್ತು ಅವತಾರ ಪುರುಷರ ದೇಹಗಳು ಅಸುರರೇ ಮೊದಲಾದ ಅಸಾಧು ಪುರುಷರಿಗೆ ದುಃಖ ಹೇತುವಾದುದರಿಂದ ಅವರ ಪಾಪ ಸಮುದಾಯದಿಂದ ರಚಿತವಾಗಿವೆ, ಎಂದು ಹೇಳಲ್ಪಟ್ಟಿದೆ. ಆದುದರಿಂದಲೇ ಅವತಾರ ಪುರುಷರ ಶರೀರಗಳು ಪುಣ್ಯ ಪಾಪಗಳಿಗೆ ಅಧೀನವಲ್ಲ ಎಂದು ಹೇಳಲ್ಪಟ್ಟಿದೆ. ಜೀವರುಗಳಿಂದ ಪೂರ್ವ ಶರೀರದಲ್ಲಿ ಮಾಡಲ್ಪಟ್ಟ ಪುಣ್ಯ ಪಾಪ

ಕರ್ಮಗಳ ಫಲವು ಉತ್ತರ ಜನ್ಮದಲ್ಲಿ ಅವರಿಗೆ ಸುಖ ದುಃಖ ರೂಪದಿಂದ ಪ್ರಾಪ್ತವಾಗುತ್ತದೆ ಆದುದರಿಂದಲೇ ಶರೀರಾಭಿಮಾನಿಯಾದ ಜೀವನ ಉತ್ತರ ಶರೀರವು ಪೂರ್ವ ಶರೀರದಲ್ಲಿ ಮಾಡಿದ ಪುಣ್ಯ ಪಾಪಗಳಿಗೆ ಅಧೀನವೆಂದು ಹೇಳಲ್ಪಟ್ಟಿದೆ. ಆದರೆ ರಾಮ, ಕೃಷ್ಣಾದಿ ಅವತಾರಿಕ ಪುರುಷರ ಶರೀರಗಳು ಸಾಧು, ಅಸಾಧು ಪುರುಷರ ಪುಣ್ಯ ಪಾಪಗಳ ಅಧೀನವಾಗಿದ್ದರೂ ಮತ್ತು ಆ ಸಾಧು, ಅಸಾಧು ಪುರುಷರಿಗೆ ಸುಖ ದುಃಖ ಹೇತುವಾಗಿದ್ದರೂ, ರಾಮ ಕೃಷ್ಣಾದಿ ಅವತಾರಿಕ ಪುರುಷರ ಸ್ವಂತ ಪುಣ್ಯಪಾಪಗಳಿಂದ ರಚಿತವಾದವುಗಳಲ್ಲ ಎಂಬುದರಲ್ಲಿ ಸಂದೇಹವಿಲ್ಲ. ಏಕೆಂದರೆ ಸತ್ಕರ್ಮ, ದುಷ್ಕರ್ಮಗಳನ್ನು ಮಾಡಿದವರಿಗೆ ಪುಣ್ಯ ಪಾಪಗಳು ಸಂಭವಿಸುತ್ತವೆ. ಕರ್ಮಗಳನ್ನೇ ಮಾಡದಿದ್ದವರಿಗೆ ಪುಣ್ಯ ಪಾಪಗಳೆಲ್ಲಿ ? ಮತ್ತು ರಾಮ, ಕೃಷ್ಣಾದಿ ಅವತಾರಿಕ ಪುರುಷರಿಗೆ ತಮ್ಮ ಶರೀರದಿಂದ ಸುಖ ದುಃಖಗಳ ಉಪಭೋಗವು ಸಂಭವಿಸಲಾರದು ಆದುದರಿಂದ ರಾಮ, ಕೃಷ್ಣಾದಿ ಅವತಾರಿಕ ಶರೀರಗಳು ತಮ್ಮ ತಮ್ಮ ಪುಣ್ಯ ಪಾಪಾದಿಗಳಿಗೆ ಅಧೀನವಲ್ಲವೆಂಬುದು ನಿರ್ವಿವಾದವಾಗಿದೆ

ಮತ್ತು ರಾಮ, ಕೃಷ್ಣಾದಿ ಅವತಾರಿಕ ಪುರುಷರ ಶರೀರಗಳು ಪಂಚೀಕೃತ ಭೂತಗಳ ಪರಿಣಾಮವಲ್ಲ. ಚೈತನ್ಯಾಶ್ರಿತವಾದ ಮಾಯೆಯ ಸಾಕ್ಷಾತ್ಪರಿಣಾಮಗಳು. ಅವು ಪಂಚಭೂತಗಳ ಪರಿಣಾಮವೆಂದು ಹೇಳುವ ಪಕ್ಷದಲ್ಲಿ ಶ್ರೀ ಕೃಷ್ಣನ ಶರೀರದಲ್ಲಿ ರಜ್ಜು ಬಂಧನದ ಅಶಕ್ಯತೆಯು ಶಾಸ್ತ್ರದಲ್ಲಿ ಹೇಳಿದ್ದು ಅಸಂಗತವಾಗುವುದು.

ಇದರಲ್ಲಿ ಮತ್ತೊಂದು ಸಂದೇಹ :

ಪಂಚಭೂತಗಳಿಂದ ರಚಿತವಾದ ಸಿದ್ಧಯೋಗಿಯ ಶರೀರದಲ್ಲಿಯೂ ರಜ್ಜು ಬಂಧನಾದಿಗಳು ಸಂಭವಿಸುವುದಿಲ್ಲ. ಆದರೂ ಯೋಗಿ ಪುರುಷರಿಗೆ ಯೋಗ ಸಿದ್ಧಿಗಿಂತ ಮೊದಲು ಬಂಧನಾದಿಗಳು ಕಂಡುಬಂದ ನಂತರ ಯೋಗ ಸಿದ್ಧಿಯ ಬಲದಿಂದ ಬಂಧನಾದಿಗಳು ಇಲ್ಲವಾಗುತ್ತವೆ. ಇದರಂತೆ ರಾಮ ಕೃಷ್ಣಾದಿ ಅವತಾರಿಕ ಪುರುಷರ ಶರೀರದಲ್ಲಿ ಯೋಗ ಸಿದ್ಧಿ ಪಡೆದ ಪುರುಷನ ಶರೀರದಂತೆ ಯಾವುದೋ ಒಂದು ಪುರುಷಾರ್ಥದ ಬಲದಿಂದ ಬಂಧನಾದಿಗಳು

ಇರುವುದಿಲ್ಲವೆಂದು ಅರ್ಥವಲ್ಲ. ಅದು ಅವರಿಗೆ ಸಹಜವಾಗಿಯೇ ಉಂಟಾಗಿರುತ್ತದೆ ಆದುದರಿಂದ ರಾಮ ಕೃಷ್ಣಾದಿ ಅವತಾರಿಕ ಪುರುಷರ ದೇಹಗಳು ಭೂತಕಾರ್ಯಗಳಲ್ಲ ಸಾಕ್ಷಾತ್ ಮಾಯಾ ಕಾರ್ಯಗಳು.

ಮಾಂಡುಕ್ಯೋಪನಿಷತ್ತಿನ ಭಾಷ್ಯಕ್ಕೆ ಟೀಕೆಯನ್ನು ಬರೆದ ಆನಂದಗಿರಿಗಳು "ರಾಮ ಕೃಷ್ಣಾದಿ ಅವತಾರಿಕ ಪುರುಷರ ಶರೀರಗಳು ಭೂತಕಾರ್ಯ"ವೆಂದು ಹೇಳಿದ್ದಾರೆ. ಅದು ಸ್ಥೂಲ ದೃಷ್ಟಿಯಿಂದ ಹೇಳಿದ ಮಾತು. ಅವರು ಬಹುಶಃ ಇತರ ಶರೀರಗಳಿಗೆ ರಾಮ ಕೃಷ್ಣಾದಿ ಅವತಾರ ಪುರುಷರ ಶರೀರಗಳು ಸಮಾನವಾಗಿ ಪ್ರತೀತಿಯಾಗುತ್ತವೆಂಬ ಅಭಿಪ್ರಾಯದಿಂದ ಹೇಳಿರಬಹುದು. ಇದೇ ವಿಷಯುವನ್ನು ಶ್ರೀಮದ್ಭಗವದ್ಗೀತಾ ಭಾಷ್ಯದಲ್ಲಿ ಶ್ರೀ ಶಂಕರ ಭಗವತ್ಪಾದರವರು "ಜೀವರುಗಳನ್ನು ಅನುಗ್ರಹಿಸುವುದಕ್ಕಾಗಿ ಶರೀರ ಸಂಬಂಧವಿಲ್ಲದ ಈಶ್ವರನು ಶರೀರಧಾರಿಗಳಂತೆ ಮಾಯಾ ಬಲದಿಂದ ಪರಮಾತ್ಮನು ಕೃಷ್ಣರೂಪನಾಗಿ ಪ್ರತೀತನಾಗುತ್ತಾನೆ. ಹೀಗೆ ಪ್ರತೀತಿಯಾದರೂ ವಾಸ್ತವ ದೃಷ್ಟಿಯಿಂದ ಕೃಷ್ಣನು ಜನ್ಮಾದಿ ರಹಿತನಾಗಿಯೇ ಇದ್ದಾನೆ. ಅವನ ಜನ್ಮವು ವಸುದೇವನಿಂದ ದೇವಕೀ ಜಠರದಲ್ಲಿ ಮಾಯೆಯಿಂದ ಪ್ರತೀತವಾಗುತ್ತದೆ" ಎಂದು ಈ ರೀತಿಯಾಗಿ ಭಾಷ್ಯಕಾರರು ಕೃಷ್ಣನ ಶರೀರವು ಮಾಯಾ ಕಾರ್ಯವೆಂದು ಹೇಳಿದ್ದಾರೆ.

ಜೀವರುಗಳಿಗೆ ದೇಹಾದಿಗಳಲ್ಲಿ ಉಂಟಾಗಿರುವ ಆತ್ಮ ಭ್ರಾಂತಿಯು ರಾಮ ಕೃಷ್ಣಾದಿ ಅವತಾರಿಕ ಪುರುಷರಿಗೆ ಇರುವುದಿಲ್ಲ. ಏಕೆಂದರೆ ಜೀವನ ಉಪಾಧಿಯು ಅವಿದ್ಯೆ ಅಂದರೆ ಮಲಿನ ಸತ್ವಗುಣವುಳ್ಳದ್ದು. ರಾಮ ಕೃಷ್ಣಾದಿ ಅವತಾರ ಪುರುಷರ ಉಪಾಧಿಯು ಮಾಯೆ. ಅಂದರೆ ಶುದ್ಧ ಸತ್ವಗುಣವುಳ್ಳದ್ದು. ಈ ಕಾರಣದಿಂದ ಜೀವನಿಗೆ ಅವಿದ್ಯೆಯಿಂದುಂಟಾದ ಭ್ರಾಂತಿಯು ಸಂಭವಿಸುತ್ತದೆ. ರಾಮ ಕೃಷ್ಣಾದಿ ಅವತಾರಿಕ ಪುರುಷರಿಗೆ ಮಾಯಾಕೃತ ಸರ್ವಜ್ಞತ್ವವು ಸಂಭವಿಸುತ್ತದೆ.

ಜೀವರುಗಳಿಗೆ ಅಜ್ಞಾನದಿಂದುಂಟಾದ ಆವರಣದ ನಾಶಕ್ಕಾಗಿಯೂ, ಭ್ರಾಂತಿ ನಾಶಕ್ಕಾಗಿಯೂ, ಆಚಾರ್ಯರಿಂದ ಪಡೆದ ಮಹಾವಾಕ್ಯೋಪದೇಶ

ದಿಂದುಂಟಾದ ಜ್ಞಾನವು ಅಗತ್ಯವಾಗಿದೆ ಆದರೆ ರಾಮ ಕೃಷ್ಣಾದಿ ಅವತಾರಿಕ ಪುರುಷರಿಗೆ ಆವರಣವು ಇಲ್ಲ, ಭ್ರಾಂತಿಯೂ ಇಲ್ಲ. ಆದುದರಿಂದ ಅವರಿಗೆ ಉಪದೇಶದಿಂದುಂಟಾಗಬೇಕಾದ ಜ್ಞಾನದ ಅವಶ್ಯಕತೆಯೂ ಇಲ್ಲ

ಜೀವರುಗಳಿಗೆ ಅಂತಃಕರಣ ವೃತ್ತಿರೂಪ ಜ್ಞಾನದಂತೆ ಈಶ್ವರನಿಗೆ ಅಂದರೆ ಅವತಾರಿಕ ಪುರುಷರಿಗೆ ಮಾಯಾ ವೃತ್ತಿರೂಪವಾದ ಆತ್ಮಜ್ಞಾನವು ಉಪದೇಶವಿಲ್ಲದೆ ಉಂಟಾಗಿರುತ್ತದೆ ಅಂಥ ಮಾಯಾ ವೃತ್ತಿರೂಪ ಜ್ಞಾನ ಉಂಟಾಗಿದ್ದರೂ ಆ ಜ್ಞಾನದಿಂದ ಅವತಾರ ಪುರುಷರಿಗೆ ಆವರಣ ಭಂಗ ಮತ್ತು ಆತ್ಮ ಪ್ರಕಾಶವೆಂಬ ಪ್ರಯೋಜನವು ಉಂಟಾಗುವುದಿಲ್ಲ. ವಿಚಾರ ಮಾಡಿ ನೋಡಿದರೆ, ಜೀವರುಗಳಿಗೆ ಘಟಾದಿಗಳ ಜ್ಞಾನವಾಗಬೇಕಾದರೆ ಅಂತಃಕರಣ ವೃತ್ತಿ ದ್ವಾರ ಘಟಾದಿ ವಿಷಯಗಳ ಆವರಣ ಭಂಗವೂ, ಪ್ರಕಾಶವೂ ಆಗುತ್ತದೆ ಮತ್ತು ಜೀವರುಗಳಿಗೆ ಆತ್ಮ ಜ್ಞಾನವಾಗಬೇಕಾದರೆ "ಅಹಂ ಬ್ರಹ್ಮಾಸ್ಮಿ" ಎಂಬ ಅಂತಃಕರಣ ವೃತ್ತಿಯಿಂದ ಆತ್ಮನ ಆವರಣ ಭಂಗವಾಗುತ್ತದೆ. ಆತ್ಮ ಸ್ವಯಂ ಪ್ರಕಾಶನಾದುದರಿಂದ ವೃತ್ತಿಯಿಂದ ಅವನ ಪ್ರಕಾಶವಾಗಬೇಕಾದುದಿಲ್ಲ. ಅವನು ವೃತ್ತಿಯಿಂದ ಪ್ರಕಾಶವಾಗುವವನಾದರೆ ಪರಪ್ರಕಾಶನಾಗುತ್ತಾನೆ. ಈ ರೀತಿಯಾಗಿ ಜೀವರುಗಳಿಗೆ ಆತ್ಮ ಪ್ರಕಾಶವೆಂಬ ಪ್ರಯೋಜನ ಒಂದನ್ನು ಬಿಟ್ಟು ಮಿಕ್ಕ ಸಕಲ ಪ್ರಯೋಜನಗಳು ವೃತ್ತಿ ಜ್ಞಾನದಿಂದ ಸಿದ್ಧಿಸುತ್ತವೆ. ಆದರೆ ಈಶ್ವರನು ಜೀವನ ಆತ್ಮದಂತೆ ಸಾವರಣ ಸ್ವಯಂ ಪ್ರಕಾಶವಾಗದೆ ನಿರಾವರಣ ಸ್ವಯಂ ಪ್ರಕಾಶವಾದುದರಿಂದ ಮಾಯಾ ವೃತ್ತಿ ರೂಪವಾದ "ಅಹಂ ಬ್ರಹ್ಮಾಸ್ಮಿ" ಎಂಬ ಈಶ್ವರ ಜ್ಞಾನಕ್ಕೆ ಆವರಣ ಭಂಗಾದಿ ಯಾವ ಪ್ರಯೋಜನದ ಆವಶ್ಯಕತೆಯೂ ಇಲ್ಲ ಇದನ್ನು ಅನುಭವದಿಂದ ನೋಡಿಕೊಳ್ಳಬೇಕಾದರೆ ಜೀವನ್ಮುಕ್ತ ವಿದ್ವಾಂಸರಲ್ಲಿ ನೋಡಿಕೊಳ್ಳಬಹುದು. ಜೀವನ್ಮುಕ್ತ ವಿದ್ವಾಂಸರುಗಳಿಗೆ ನಿರಾವರಣನಾದ ಆತ್ಮನನ್ನು ವಿಷಯೀಕರಿಸುವ "ಅಹಂ ಬ್ರಹ್ಮಾಸ್ಮಿ" ರೂಪವಾದ ಅಂತಃಕರಣ ವೃತ್ತಿಗೆ ಆವರಣ ಭಂಗವೇ ಮೊದಲಾದ ಪ್ರಯೋಜನ ರಹಿತವಾಗಿರುವಂತೆ ಅವತಾರಿಕ ಪುರುಷರಿಗೂ ಸಹ ಆವರಣ ಭಂಗಾದಿ ಪ್ರಯೋಜನ ರಹಿತವಾದ ಮಾಯಾ ವೃತ್ತಿ ರೂಪವಾದ "ಅಹಂ ಬ್ರಹ್ಮಾಸ್ಮಿ" ಎಂಬ ಜ್ಞಾನವು ಉಪದೇಶಾದಿಗಳಿಲ್ಲದೆ ಉಂಟಾಗಿರುತ್ತದೆ.

ಸಾರಾಂಶವೇನೆಂದರೆ, ರಾಮ ಕೃಷ್ಣಾದಿ ಅವತಾರಿಕ ಪುರುಷರ ದೇಹದಲ್ಲಿ ಜೀವರುಗಳ ದೇಹಕ್ಕಿಂತ ವಿಲಕ್ಷಣತೆಯೂ ಮತ್ತು ಈಶ್ವರತ್ವವೂ ಇರುತ್ತದೆ ಹಾಗಿದ್ದರೂ ರಾಮ ಕೃಷ್ಣಾದಿ ಅವತಾರಿಕ ಪುರುಷರ ಶರೀರಗಳು ಮಾಯಾರಚಿತವಾದವುಗಳೇ. ಆ ಶರೀರಗಳೇ ಬ್ರಹ್ಮ ಸ್ವರೂಪಗಳಲ್ಲ.

ನೇತ್ರೇಂದ್ರಿಯವು ರೂಪವನ್ನೂ, ತದಾಶ್ರಯವಾದ ಪದಾರ್ಥವನ್ನೂ ವಿಷಯೀಕರಿಸುವುದು. ಈ ನೇತ್ರವು ಮಾಯೆಯಿಂದುಂಟಾದ ಹಸ್ತ ಪಾದಾದಿ ಅವಯವ ಸಹಿತಗಳಾದ ರೂಪವುಳ್ಳ ಅವತಾರ ಶರೀರಗಳನ್ನು ವಿಷಯೀಕರಿಸಿದರೂ, ನಿರಾಕಾರವಾದ, ರೂಪರಹಿತವಾದ ಬ್ರಹ್ಮವನ್ನು ವಿಷಯೀಕರಿಸಲಾರದು.

ನೇತ್ರ ವೃತ್ತಿಯು ತನ್ನ ಗೋಲಕವನ್ನು ಬಿಟ್ಟು ಹೊರಗೆ ಹೋಗಿ ರೂಪವುಳ್ಳ ಪದಾರ್ಥವನ್ನು ತಿಳಿದುಕೊಳ್ಳುತ್ತದೆ. ಶ್ರೋತ್ರ ವೃತ್ತಿಯೂ ಸಹ ತನ್ನ ಗೋಲಕವನ್ನು ಬಿಟ್ಟು ಹೊರಗೆ ಹೋಗಿ ಶಬ್ದದ ಜ್ಞಾನವನ್ನು ತಿಳಿದುಕೊಳ್ಳುತ್ತದೆ. ಇನ್ನು ಮಿಕ್ಕ ತ್ವಕ್ಕು, ರಸನ, ಘ್ರಾಣ ಈ ಮೂರೂ ತಮ್ಮ ಗೋಲಕವನ್ನು ಬಿಟ್ಟು ಹೊರಗೆ ಹೋಗುವುದಿಲ್ಲ. ಅವು ಶರೀರ ಕ್ರಿಯೆಯಿಂದುಂಟಾಗಲಿ, ವಿಷಯ ಕ್ರಿಯೆಯಿಂದುಂಟಾಗಲಿ, ಗೋಲಕದ ಸಮೀಪಕ್ಕೆ ಪ್ರಾಪ್ತವಾದ ಸ್ಪರ್ಶವನ್ನೇ ಆಗಲಿ, ರಸವನ್ನೇ ಆಗಲಿ, ಗಂಧವನ್ನೇ ಆಗಲಿ, ಆಯಾ ಜ್ಞಾನವನ್ನು ಆಯಾ ಇಂದ್ರಿಯಗಳು ಪಡೆದುಕೊಳ್ಳುತ್ತವೆ. ಆಯಾ ವಿಷಯ ಜ್ಞಾನ ಪ್ರಸಂಗದಲ್ಲಿ ಅಂತಃಕರಣ ವೃತ್ತಿಯು ಆಯಾ ಇಂದ್ರಿಯಗಳವರೆಗೆ ಬಂದು ಆಯಾ ಇಂದ್ರಿಯಗಳ ದ್ವಾರ ಆಯಾ ವಿಷಯಗಳ ಆವರಣವನ್ನು ಭಂಗಮಾಡಿದ ಮೇಲೆ ಆ ವೃತ್ತಿಯಲ್ಲಿರುವ ಚಿದಾಭಾಸನು ಆಯಾ ವಿಷಯಗಳನ್ನು ಪ್ರಕಾಶ ಮಾಡುತ್ತಾನೆ. ಈ ರೀತಿಯಾಗಿ ನೇತ್ರ, ಶ್ರೋತ್ರಗಳ ವೃತ್ತಿಯು ಹೊರಗೆ ಹೋಗುತ್ತದೆ. ತ್ವಕ್ಕು, ರಸನ, ಘ್ರಾಣ ಇವುಗಳ ವೃತ್ತಿಯು ಹೊರಗೆ ಹೋಗುವುದಿಲ್ಲ. ಇವುಗಳಲ್ಲಿ ಅಷ್ಟು ಪರಸ್ಪರ ವಿಲಕ್ಷಣತೆ ಇದೆ

ಘ್ರಾಣೇಂದ್ರಿಯದ ವಿಷಯವಾದ ಗಂಧವೂ, ಅದಕ್ಕೆ ಆಶ್ರಯವಾದ

ಪುಷ್ಪಾದಿ ಪದಾರ್ಥಗಳೂ ನಾಸಿಕಕ್ಕಿಂತ ದೂರವಾಗಿದ್ದರೂ ಗಂಧ ಜ್ಞಾನ ಉಂಟಾಗುತ್ತದೆ ಆ ಪ್ರಸಂಗದಲ್ಲಿ ಪುಷ್ಪಾದಿಗಳ ಸೂಕ್ಷ್ಮ ಪ್ರಮಾಣವು ಘ್ರಾಣೇಂದ್ರಿಯುದವರೆಗೆ ಬಂದಿರುವುದೆಂದು ತಿಳಿಯಬೇಕು.

ಕೆಲವು ಮತಸ್ಥರ ಅಭಿಪ್ರಾಯ "ಘ್ರಾಣವೇ ಮೊದಲಾದ ಮೂರು ಇಂದ್ರಿಯಗಳಂತೆ ನೇತ್ರೇಂದ್ರಿಯ, ಶ್ರೋತ್ರೇಂದ್ರಿಯ ವೃತ್ತಿಗಳೂ ಸಹ ಹೊರಗೆ ಹೋಗದೆ ತಮ್ಮ ತಮ್ಮ ಸ್ಥಾನದಲ್ಲಿಯೇ ಇದ್ದು ನೇತ್ರೇಂದ್ರಿಯ, ಶ್ರೋತ್ರೇಂದ್ರಿಯಗಳಿಂದ ವಿಷಯ ಜ್ಞಾನವನ್ನು ಉಂಟುಮಾಡಿಕೊಳ್ಳುತ್ತವೆ" ಎಂಬುದಾಗಿದೆ.

ರೂಪವುಳ್ಳ ಪದಾರ್ಥಕ್ಕಿಂತ ವ್ಯತ್ಯಸ್ಥವಾದ ಅದರ ಪ್ರತಿಬಿಂಬವು ನೇತ್ರೇಂದ್ರಿಯದ ಬಾಹ್ಯ ಪ್ರದೇಶದಲ್ಲಿ ಉಂಟಾಗುತ್ತದೆ. ನಂತರ ಅದಕ್ಕೆ ಸಮಾನವಾದ ಪ್ರತಿಬಿಂಬವು ಅಂತಃಪ್ರದೇಶದಲ್ಲಿ ಉಂಟಾಗುತ್ತದೆ ಈ ರೀತಿ ಪರಂಪರೆಯಾಗಿ ಈ ರೂಪವುಳ್ಳ ಪದಾರ್ಥದ ಜ್ಞಾನವು ಅಂತಃಕರಣಕ್ಕೆ ಉಂಟಾಗುತ್ತದೆ

ಇನ್ನು ಶಬ್ದದ ವಿಚಾರವನ್ನು ನೋಡೋಣ :

ಶಬ್ದವು ಹುಟ್ಟುತ್ತಲೇ ಆ ಸ್ಥಳದಲ್ಲಿದ್ದ ವಾಯುವಿನಲ್ಲಿ ಆ ಶಬ್ದದ ಆಘಾತ ಉಂಟಾಗಿ ಆ ವಾಯುವಿನಲ್ಲಿ ಪ್ರತಿ ಸಾರಣವುಂಟಾಗುತ್ತದೆ. ಮತ್ತು ಆ ವಾಯುವಿಗೆ ಸನ್ನಿಹಿತವಾಗುವ ಮುಂದಿನ ವಾಯುವಿನಲ್ಲಿ ಆಘಾತವುಂಟಾಗುತ್ತದೆ. ಈ ವಿಧವಾಗಿ ವಾಯುವಿನ ಪ್ರತಿ ಸಾರಣವಾಗಿ ಶಬ್ದವು ಶ್ರೋತ್ರೇಂದ್ರಿಯದ ಹತ್ತಿರಕ್ಕೆ ಸೇರುತ್ತದೆ. ಆಗ ಶಬ್ದ ಜ್ಞಾನವಾಗುತ್ತದೆ. ಮತ್ತೊಂದು ರೀತಿಯಿಂದ ಶಬ್ದವು ಹುಟ್ಟಿದ ಕೂಡಲೆ ಅದರ ಪ್ರತಿಧ್ವನಿಯು ಹತ್ತಿರ ಇರುವ ವಾಯುವಿನಲ್ಲಿ ಉಂಟಾಗುತ್ತದೆ. ಈ ವಿಧವಾಗಿ ಪ್ರತಿಧ್ವನಿಯ ಪರಂಪರೆಯಿಂದ ಶಬ್ದವು ಶ್ರೋತ್ರೇಂದ್ರಿಯದವರೆಗೆ ಹೋಗುತ್ತದೆ.

ಈ ವಿಷಯದಲ್ಲಿ ಅನೇಕ ಜನರಿಗೆ ಅನೇಕ ಅಭಿಪ್ರಾಯಗಳಿದ್ದರೂ ಈಗ ಹೇಳಿದುದರಲ್ಲಿ ದೋಷವಿರಲಿ, ಇಲ್ಲದಿರಲಿ ಅದರ ದೂಷಣ ಭೂಷಣವನ್ನು ಹೇಳುವ ಅವಶ್ಯಕತೆ ಏನೂ ಇಲ್ಲ. ತಾತ್ಪರ್ಯವೇನೆಂದರೆ, "ಬ್ರಹ್ಮ

ಜ್ಞಾನವು ಇಂದ್ರಿಯ ಜನ್ಯವಲ್ಲ" ಎಂಬ ಅರ್ಥದಲ್ಲಿ ವೇದಾಂತದ ಅಂತರಂಗ ತಾತ್ಪರ್ಯವಿರುತ್ತದೆ ಮತ್ತು "ವಿಷಯದ ಜ್ಞಾನವಾದಾಗ ಅಂತಃಕರಣದ ವೃತ್ತಿಯಿಂದ ವಿಷಯದ ಆವರಣ ಭಂಗವಾಗಿ ಆವರಣದಲ್ಲಿರುವ ಚಿದಾಭಾಸನಿಂದ ವಿಷಯದ ಪ್ರಕಾಶವಾಗುತ್ತದೆ" ಎಂಬ ಈ ಅರ್ಥದ ಮೇಲೆ ಬಹಿರಂಗ ತಾತ್ಪರ್ಯವಿರುತ್ತದೆ ಮೇಲೆ ಹೇಳಿದ ಎರಡು ಅರ್ಥಗಳನ್ನು ಬಿಟ್ಟು ಇಂದ್ರಿಯ ಜ್ಞಾನ ವ್ಯವಸ್ಥೆಯಲ್ಲಿ ವೇದಾಂತದ ತಾತ್ಪರ್ಯವು ಬೇರೆ ಅರ್ಥದಲ್ಲಿ ಇಲ್ಲವೇ ಇಲ್ಲ ಮೇಲೆ ಹೇಳಿದ ತಾತ್ಪರ್ಯಕ್ಕೆ ಸಾಧಕವಾದ ಇಂದ್ರಿಯ ಜ್ಞಾನ ವ್ಯವಸ್ಥೆಯು ವೇದಾಂತ ಶಾಸ್ತ್ರದಲ್ಲಿ ಮಾಡಲ್ಪಟ್ಟಿದೆ. ಇದೇ ಅದಕ್ಕೆ ಪ್ರಯೋಜನ. ಇದು ನಿರ್ದೋಷವಾದ ಪದ್ಧತಿ.

ಮತ್ತೊಬ್ಬ ಮಹನೀಯನು "ವೇದಾಂತ ಶಾಸ್ತ್ರದಲ್ಲಿ ಮಾಡಿದ ಇಂದ್ರಿಯ ಜ್ಞಾನ ವ್ಯವಸ್ಥೆಯು ಮಿಥ್ಯೆಯಾಗಿದೆ" ಎನ್ನುತ್ತಾನೆ. ಅವನನ್ನು ಕುರಿತು "ಅಯ್ಯಾ, ಇಂದ್ರಿಯಗಳು ಸತ್ಯವಾಗಿದ್ದು, ಅವುಗಳ ಜ್ಞಾನ ವ್ಯವಸ್ಥೆಯು ಮಾತ್ರ ಮಿಥ್ಯೆಯೇ ? ಇಲ್ಲವೇ ಇಂದ್ರಿಯಗಳೂ ಮಿಥ್ಯ, ಜ್ಞಾನ ವ್ಯವಸ್ಥೆಯೂ ಮಿಥ್ಯ ಎಂದು ಹೇಳುವೆಯಾ ?" ಎಂದು ಕೇಳಿದರೆ ಅವನು ಇಂದ್ರಿಯಗಳೂ ಮಿಥ್ಯ, ಅವುಗಳ ಜ್ಞಾನಗಳೂ ಮಿಥ್ಯ ಎಂದು ಹೇಳುವ ಪಕ್ಷದಲ್ಲಿ ಈ ಮಾತನ್ನು ನಮ್ಮ ವೇದಾಂತವೂ ಸಹ ಅಂಗೀಕರಿಸುತ್ತದೆ. ಏಕೆಂದರೆ ಬ್ರಹ್ಮಕ್ಕೆ ಭಿನ್ನವಾದ ಸಕಲ ಪದಾರ್ಥಗಳೂ ಮಿಥ್ಯೆ ಎಂಬುದೇ ವೇದಾಂತದ ಅಭಿಪ್ರಾಯ. ಹೀಗೆನ್ನದೆ ಅವನು ಇಂದ್ರಿಯಗಳು ಮಾತ್ರ ಸತ್ಯ, ಅವುಗಳ ಜ್ಞಾನ ವ್ಯವಸ್ಥೆಯು ಮಾತ್ರ ಮಿಥ್ಯೆ ಎಂದು ಹೇಳುವ ಪಕ್ಷದಲ್ಲಿ ಅದು ಒಪ್ಪುವ ಮಾತಲ್ಲ. ಏಕೆಂದರೆ, ಒಂದು ಬ್ರಹ್ಮಜ್ಞಾನವನ್ನು ಬಿಟ್ಟು ಇತರೆ ಯಾವ ಜ್ಞಾನದಿಂದಲೂ ಯಾವುದು ಬಾಧಿತವಾಗುವುದಿಲ್ಲವೋ ಅದಕ್ಕೆ ವ್ಯಾವಹಾರಿಕ ಸತ್ತಾ ಎನ್ನುತ್ತಾರೆ. ಶರೀರ, ಇಂದ್ರಿಯಾದಿ ಜಗತ್ತು ಬ್ರಹ್ಮ ಜ್ಞಾನದ ಹೊರತು ಮತ್ತಾವ ಜ್ಞಾನದಿಂದಲೂ ಬಾಧೆಯಾಗುವುದಿಲ್ಲ. ಆದುದರಿಂದಲೇ ಅದು ವ್ಯಾವಹಾರಿಕ ಸತ್ತಾ ಎನಿಸುತ್ತದೆ. ಆ ವ್ಯಾವಹಾರಿಕ ಸತ್ತೆಗೆ ಸಂಬಂಧಪಟ್ಟ ವೇದಾಂತ ವಿಚಾರವೂ ಸಹ ಬ್ರಹ್ಮ ಜ್ಞಾನವನ್ನು ಬಿಟ್ಟು ಅನ್ಯ ಜ್ಞಾನದಿಂದ ಬಾಧಿತವಾಗಲಾರದು. ಆದುದರಿಂದ ಅದೂ ಸಹ

ವ್ಯಾವಹಾರಿಕ ಸತ್ತೆಯೇ. ಹೀಗಿರುವಾಗ ಇಂದ್ರಿಯಾದಿ ಜಗತ್ತು ಮಾತ್ರ ಸತ್ಯ, ವೇದಾಂತ ವಿಚಾರವು ಮಿಥ್ಯ ಎಂಬ ಮಾತು ವಿಚಾರಶೀಲ ಪುರುಷರಿಗೆ ಹಾಸ್ಯಾಸ್ಪದವಾಗಿದೆ

ಮತ್ತೊಂದು ಪಕ್ಷ :

ಒಂದು ಬ್ರಹ್ಮಜ್ಞಾನದಿಂದ ಮಾತ್ರ ಬಾಧಿತವಾಗುವುದನ್ನು ವ್ಯಾವಹಾರಿಕ ಸತ್ತಾ ಎನ್ನುತ್ತಾರೆ. ವೇದಾಂತ ವಿಚಾರವಾದರೋ ಮತ್ತೊಂದು ವಿಚಾರದಿಂದಲೂ ಬಾಧಿತವಾಗುವುದು ಕಂಡುಬರುತ್ತದೆ ಆದುದರಿಂದ ಅದು ಸತ್ಯವಲ್ಲ, ಮಿಥ್ಯೆ ಎಂಬ ಪಕ್ಷದಲ್ಲಿ ಇದು ಸರಿಯಲ್ಲ. ಏಕೆಂದರೆ ವೇದಾಂತ ವಿಚಾರವು ಶೃತಿಯಿಂದಲೂ, ಯುಕ್ತಿಯಿಂದಲೂ, ಸರ್ವಜ್ಞರ ಅಂದರೆ ಬ್ರಹ್ಮಜ್ಞಾನಿಗಳ ಅನುಭವದಿಂದಲೂ ಅಬಾಧಿತವಾಗಿದೆ. ಅಂದರೆ ಅಬಾಧಿತ ಪದಾರ್ಥಗಳು ಎರಡು ಇರುತ್ತವೆಂದು ಅರ್ಥವಲ್ಲ. ಬ್ರಹ್ಮವು ನಿರಪೇಕ್ಷಕ ಅಬಾಧಿತ ವೇದಾಂತ ವಿಚಾರವು ಸಾಪೇಕ್ಷ ಅಬಾಧಿತ ಎಂದು ತಿಳಿಯಬೇಕು.

ಇಲ್ಲಿಯವರೆಗೆ ಬ್ರಹ್ಮವು ಶ್ರೋತ್ರೇಂದ್ರಿಯ ನೇತ್ರೇಂದ್ರಿಯಗಳಿಗೆ ವಿಷಯವಲ್ಲವೆಂದು ಹೇಳಿ, ಇನ್ನು ಮುಂದೆ ತ್ವಗಾದಿ ಇಂದ್ರಿಯಗಳಿಗೂ ಸಹ ವಿಷಯವಲ್ಲವೆಂದು ಹೇಳುತ್ತಾರೆ.

ತ್ವಗೇಂದ್ರಿಯವು ಸ್ಪರ್ಶವನ್ನೂ, ಸ್ಪರ್ಶಕ್ಕೆ ಆಶ್ರಯವಾದ ಪದಾರ್ಥವನ್ನೂ ವಿಷಯೀಕರಿಸುತ್ತದೆ. ಬ್ರಹ್ಮವು ಸ್ಪರ್ಶವೂ ಅಲ್ಲ, ಸ್ಪರ್ಶಕ್ಕೆ ಆಶ್ರಯವಾದ ಪದಾರ್ಥವೂ ಅಲ್ಲ. ಆದುದರಿಂದ ಬ್ರಹ್ಮವು ತ್ವಗೇಂದ್ರಿಯಕ್ಕೆ ವಿಷಯವಲ್ಲ.

ಇದರಂತೆ ರಸನದಿಂದ ರಸದ, ಘ್ರಾಣದಿಂದ ಗಂಧದ, ಶ್ರೋತ್ರವಿಂದ ಶಬ್ದದ ಜ್ಞಾನವಾಗುತ್ತದೆ. ಬ್ರಹ್ಮವಾದರೋ ರಸ, ಶಬ್ದ, ಗಂಧಗಳಿಗಿಂತ ವಿಲಕ್ಷಣವಾಗಿದೆ. ಆದುದರಿಂದ ಬ್ರಹ್ಮವು ರಸನಾದಿಗಳಿಗೆ ವಿಷಯವಲ್ಲ.

ಈ ರೀತಿ ಬ್ರಹ್ಮವು ಜ್ಞಾನೇಂದ್ರಿಯಗಳಿಗೂ ವಿಷಯವಲ್ಲವೆಂಧು ಹೇಳಿ ಇನ್ನು ಮುಂದೆ ಕರ್ಮೇಂದ್ರಿಯಗಳಿಗೂ ವಿಷಯವಲ್ಲವೆಂದು ಹೇಳಿರುತ್ತಾರೆ.

ಕರ್ಮೇಂದ್ರಿಯಗಳು ಜ್ಞಾನಕ್ಕೆ ಸಾಧನಗಳಲ್ಲ. ಅವು ವಚನಾದಿ ಕ್ರಿಯೆಗಳಿಗೆ ಸಾಧನಗಳಾಗಿವೆ. ಆದುದರಿಂದ ಅವುಗಳಿಂದ ಘಟ ಪಟ ಮೊದಲಾದ ವಿಷಯಗಳ ಜ್ಞಾನವೂ ಸಹ ಸಂಭವಿಸಲಾರದು. ಘಟ ಪಟಾದಿ ದೃಶ್ಯ ಪದಾರ್ಥಗಳ ಜ್ಞಾನವು ಸಂಭವಿಸಲಾರದು ಎಂದ ಮೇಲೆ ಅವುಗಳಿಗೆ ಬ್ರಹ್ಮಜ್ಞಾನವು ಹೇಗೆ ಆಗುತ್ತದೆ?

ಹಿಂದೆ ಬ್ರಹ್ಮಜ್ಞಾನವು ಪ್ರತ್ಯಕ್ಷವಲ್ಲವೆಂದು ಮಾಡಿದ ಆಕ್ಷೇಪಣೆಯನ್ನು ಈಗ ಉಪಸಂಹರಿಸುತ್ತಾರೆ. ಮೇಲೆ ಹೇಳಿದಂತೆ ಯಾವ ಇಂದ್ರಿಯ್ಯಗಳಿಂದಲೂ ಬ್ರಹ್ಮಜ್ಞಾನವು ಉಂಟಾಗಲಾರದು. ಮತ್ತು ಇಂದ್ರಿಯ ಜನ್ಯ ಜ್ಞಾನವನ್ನೇ ಪ್ರತ್ಯಕ್ಷ ಅಂದರೆ ಅಪರೋಕ್ಷವೆನ್ನುತ್ತಾರೆ. ಆದುದರಿಂದ ಬ್ರಹ್ಮ ವಿಷಯದಲ್ಲಿ ಅಪರೋಕ್ಷ ಜ್ಞಾನವು ಘಟಿಸಲಾರದು. ಬ್ರಹ್ಮ ಜ್ಞಾನವು ಶಬ್ದಗಳಿಂದ ಉಂಟಾಗುತ್ತದೆ ಎಂದು ಹೇಳಿದರೆ ಶಬ್ದಗಳಿಂದುಂಟಾದ ಜ್ಞಾನವು ಪರೋಕ್ಷ ಜ್ಞಾನವಾಗುತ್ತದೆ. ಈ ನಿಯಮದಂತೆ ಶಬ್ದದಿಂದ ಉಂಟಾದ ಬ್ರಹ್ಮಜ್ಞಾನವು ಪರೋಕ್ಷ ಎಂದು ತಿಳಿಯಬೇಕು.

ಸಂಬಂಧ – ಮುಂದಿನ ದೋಹಾದಲ್ಲಿ ಈ ಶಂಕೆಗೆ ಸಮಾಧಾನವನ್ನು ಹೇಳಿದೆ.

### ಶ್ರೀ ಗುರುವಾಚ

ದೋಹಾ – ಇಂದ್ರಿಯ ಬಿನ ಪ್ರತ್ಯಚ್ಛ ನಹಿ, ಸಿಸ್ಯ ಯಹ ನಿಯಮ ನ ಜಾನ।
ಬಿನ ಇಂದ್ರಿಯ ಪ್ರತ್ಯಚ್ಛಾ ಹ್ವೈ, ಜ್ಯೈಸ್ಯೆ ಸುಖದುಃಖ
ಜ್ಞಾನ ॥ ೧೧೮ ॥

ಈ ದೋಹಾದಲ್ಲಿ ಪರೋಕ್ಷ, ಅಪರೋಕ್ಷ ಜ್ಞಾನವು ವಿಭಾಗ ಮಾಡಲ್ಪಟ್ಟಿದೆ.

ತಾತ್ಪರ್ಯ – ಹೇ ಶಿಷ್ಯನೇ, ಇಂದ್ರಿಯಗಳಿಂದಲೇ ಪ್ರತ್ಯಕ್ಷ ಜ್ಞಾನವಾಗುತ್ತದೆಂಬ ನಿಯಮವೇನೂ ಇಲ್ಲ ಸುಖದುಃಖದ ಪ್ರತ್ಯಕ್ಷ ಜ್ಞಾನವು ಇಂದ್ರಿಯಗಳಿಲ್ಲದೇ ಆಗುತ್ತದೆ. ಅದರಂತೆ ಬ್ರಹ್ಮದ ಪ್ರತ್ಯಕ್ಷ ಜ್ಞಾನವೂ ಸಹ ಇಂದ್ರಿಯಗಳಿಲ್ಲದೆ ಆಗಬಹುದು

ವಿವರಣೆ – "ಇಂದ್ರಿಯ ಸಂಬಂಧವಿಲ್ಲದೆ ಪ್ರತ್ಯಕ್ಷ ಜ್ಞಾನವಾಗಲಾರದು" ಎಂಬುದು ಪೂರ್ವ ಪಕ್ಷಿಯ ಅಭಿಪ್ರಾಯ. ಈ ನಿಯಮವು ಸರ್ವತ್ರ ವರ್ತಿಸುವುದಿಲ್ಲ ಇದನ್ನು ಪ್ರತ್ಯಕ್ಷ ಅನುಭವದಿಂದ ತಿಳಿದುಕೊಳ್ಳಬಹುದು. ಸುಖ ದುಃಖಗಳ ಜ್ಞಾನವು ಇಂದ್ರಿಯ ಜನ್ಯವಲ್ಲದಿದ್ದರೂ ಪ್ರತ್ಯಕ್ಷ ವಾಗಿದೆ ಆದುದರಿಂದ ಇಂದ್ರಿಯಗಳಿಂದ ಉಂಟಾದ ಜ್ಞಾನವು ಪ್ರತ್ಯಕ್ಷ ಜ್ಞಾನಕ್ಕೆ ಹೇತುವೆಂಬ ನಿಯಮವೇನೂ ಇಲ್ಲ. ಹಾಗಾದರೆ ಸರ್ವತ್ರ ವರ್ತಿಸುವ ನಿಯಮವೇನೆಂದರೆ – ವಿಷಯಕ್ಕೂ, ವೃತ್ತಿಗೂ ಉಂಟಾಗುವ ಸಂಬಂಧದಿಂದ ವಿಷಯಾಕಾರ ವೃತ್ತಿಯಾದರೆ ಅದಕ್ಕೆ ಪ್ರತ್ಯಕ್ಷ ಜ್ಞಾನವೆನ್ನುತ್ತಾರೆ.

ಮತ್ತೊಂದು ದೃಷ್ಟಿಯಿಂದ ನೋಡಿದರೆ ವಿಷಯ ಚೈತನ್ಯಕ್ಕೂ, ವೃತ್ತಿ ಚೈತನ್ಯಕ್ಕೂ ಅಭೇದವಾಗುವುದರಿಂದ ಪ್ರತ್ಯಕ್ಷ ಜ್ಞಾನವಾಗುತ್ತದೆ ಇದು ಪ್ರತ್ಯಕ್ಷ ಜ್ಞಾನದ ಲಕ್ಷಣ.

ಈ ವಿಷಯ ಚೈತನ್ಯಕ್ಕೂ, ವೃತ್ತಿ ಚೈತನ್ಯಕ್ಕೂ ಆಗುವ ಅಭೇದವು ಕೆಲವು ಸ್ಥಳಗಳಲ್ಲಿ ಇಂದ್ರಿಯಗಳಿಂದಲೂ, ಕೆಲವು ಸ್ಥಳಗಳಲ್ಲಿ ಶಬ್ದಗಳಿಂದಲೂ, ಕೆಲವು ಸ್ಥಳಗಳಲ್ಲಿ ಇಂದ್ರಿಯಗಳೇ ಮೊದಲಾದ ಬಾಹ್ಯ ನಿಮಿತ್ಯಗಳು ಇಲ್ಲದೆ ಶರೀರದ ಒಳಗೆ ಉತ್ಪನ್ನವಾದ ಕೇವಲ ವೃತ್ತಿಯಿಂದಲೂ ಆಗಬಹುದು ಈ ಎಲ್ಲಾ ಸ್ಥಳಗಳಲ್ಲಿಯೂ ಆಗುವ ಜ್ಞಾನವು ಪ್ರತ್ಯಕ್ಷ ಜ್ಞಾನವೆಂದು ತಿಳಿಯಬೇಕು

ಪ್ರಶ್ನೆ – ಚೈತನ್ಯಕ್ಕೆ ಸ್ವರೂಪತಃ ಎಲ್ಲಿಯೂ ಭೇದವಿಲ್ಲ. ಅದು ಅಖಂಡವಾಗಿ ಒಂದೇ ಆಗಿರುತ್ತದೆ. ಆ ರೀತಿ ಭೇದವಿಲ್ಲದೆ ಚೈತನ್ಯವು ವಿಷಯ ಮತ್ತು ವೃತ್ತಿಗಳ ಸಂಬಂಧದಿಂದ ಅಭೇದವಾಗುವುದು ಹೇಗೆ ?

ಉತ್ತರ – ಚೈತನ್ಯಕ್ಕೆ ಸ್ವರೂಪತಃ ಭೇದವಿಲ್ಲದಿದ್ದರೂ ವಿಷಯರೂಪ ಮತ್ತು ವೃತ್ತಿರೂಪ ಉಪಾಧಿಗಳಿಂದ ಭೇದವು ಉಂಟಾದಂತೆ ತೋರುತ್ತದೆ. ಉಪಾಧಿಗಳು ಬೇರೆ ಬೇರೆ ದೇಶಗಳಲ್ಲಿ ಇರುವಾಗ ಉಪಾಧಿಯುಳ್ಳ ಚೈತನ್ಯಕ್ಕೂ ಸಹ ಭೇದವನ್ನು ಹೇಳಬಹುದು. ವೃತ್ತಿಯು ವಿಷಯಾಕಾರ

ವಾದಾಗ ಎರಡು ವೃತ್ತಿಗಳು ಒಂದೇ ದೇಶದಲ್ಲಿ ಕೂಡುವುದರಿಂದ ಉಪಾಧಿ ವಂತವಾದ ವಿಷಯ ಚೈತನ್ಯಕ್ಕೂ, ವೃತ್ತಿ ಚೈತನ್ಯಕ್ಕೂ ಅಭೇದವು ಹೇಳಲ್ಪಟ್ಟಿದೆ ಆ ಅಭೇದವನ್ನೇ ಪ್ರತ್ಯಕ್ಷ ಜ್ಞಾನವೆನ್ನುತ್ತಾರೆ. ಅದನ್ನೇ ಅಪರೋಕ್ಷ ಜ್ಞಾನವೆಂತಲೂ, ಸಾಕ್ಷಾತ್ಕಾರವೆಂತಲೂ ಕರೆಯುತ್ತಾರೆ.

ಈ ಪ್ರತ್ಯಕ್ಷ ಜ್ಞಾನ ಲಕ್ಷಣವು ಇಂದ್ರಿಯ ಜನ್ಯವಾದ ಬಾಹ್ಯ ಘಟಾದಿಗಳ ಪ್ರತ್ಯಕ್ಷ ಜ್ಞಾನದಲ್ಲಿಯೂ, ಮತ್ತು ಮಹಾವಾಕ್ಯ ಜನ್ಯವಾದ ಬ್ರಹ್ಮದ ಪ್ರತ್ಯಕ್ಷ ಜ್ಞಾನದಲ್ಲಿಯೂ ಮತ್ತು ಹೊರಗಿನ ನಿಮಿತ್ತವಿಲ್ಲದೆ ಅಂತರ್ ದೇಶದಲ್ಲಿಯೇ ಉತ್ಪನ್ನವಾದ ಸುಖ ದುಃಖಗಳ ಪ್ರತ್ಯಕ್ಷ ಜ್ಞಾನದಲ್ಲಿಯೂ ಮತ್ತು ಮಾಯಾ ವೃತ್ತಿರೂಪವಾದ ಈಶ್ವರ ಜ್ಞಾನದಲ್ಲಿಯೂ ಮತ್ತು ಅವಿದ್ಯಾ ವೃತ್ತಿರೂಪವಾದ ರಜ್ಜು ಸರ್ಪಾದಿ ಭ್ರಾಂತಿ ಜ್ಞಾನದಲ್ಲಿಯೂ ಅನುಗತವಾಗಿದೆ

ವಿಷಯದೊಂದಿಗೆ ಆಗುವ ವೃತ್ತಿ ಸಂಬಂಧವು ಕೆಲವು ಸ್ಥಳಗಳಲ್ಲಿ ಇಂದ್ರಿಯಗಳಿಂದಲೂ, ಕೆಲವು ಸ್ಥಳಗಳಲ್ಲಿ ಶಬ್ದದಿಂದಲೂ ಆಗುತ್ತದೆ.

ಉದಾಹರಣೆ – "ದಶಮಸ್ತ್ವಮಸಿ" ಅಂದರೆ "ದಶಮನು ನೀನು". ಈ ಶಬ್ದದಿಂದ ಅಂತಃಕರಣ ವೃತ್ತಿಯು ದಶಮನಾದ ತನಗೂ ಸಂಬಂಧವಾಗುವುದರಿಂದ ವೃತ್ತಿಯು ದಶಮಾಕಾರವಾದಾಗ ಶಬ್ದ ಜನ್ಯವಾದ ದಶಮನ ಜ್ಞಾನಕ್ಕೆ ಪ್ರತ್ಯಕ್ಷವೆನ್ನುತ್ತಾರೆ.

ಇದರಂತೆ ಪ್ರಮಾತನಲ್ಲಿ ಸುಖ ದುಃಖಗಳಾಗುವುವು ಆ ಸುಖ ದುಃಖಗಳಿಗೂ ವೃತ್ತಿಗೂ ಸಂಬಂಧವಾಗಿ ವೃತ್ತಿಯು ಸುಖ ದುಃಖಾಕಾರವಾದಾಗ ಉಂಟಾಗುವ ಸುಖ ದುಃಖಾದಿಗಳ ಜ್ಞಾನವೂ ನಹ ಪ್ರತ್ಯಕ್ಷ ಜ್ಞಾನವೆನಿಸುತ್ತದೆ ಇದಲ್ಲದೆ ಪೂರ್ವೋತ್ಪನ್ನವಾದ ಸುಖ ದುಃಖಗಳು ನಷ್ಟವಾದ ಮೇಲೆ ಮತ್ತೆ ಪುರುಷನಿಗೆ ಸುಖದುಃಖಗಳ ಸ್ಮರಣೆಯಾದಾಗ ವೃತ್ತಿಯು ಸುಖ ದುಃಖಾಕಾರವಾಗುತ್ತದೆ. ಆದರೂ ವೃತ್ತಿಗೆ ಹಿಂದೆ ಉಂಟಾದ ಸುಖದುಃಖಗಳೊಂದಿಗೆ ಸಂಬಂಧ ಉಂಟಾಗುವುದಿಲ್ಲ. ಆದುದರಿಂದ ಆ ಜ್ಞಾನವು ಪ್ರತ್ಯಕ್ಷ ಜ್ಞಾನವಲ್ಲ; ಸ್ಮೃತಿ ರೂಪವಾಗಿದೆ. ಆದುದರಿಂದ ಅದು ಪರೋಕ್ಷವೇ

ಅಂತಃಕರಣ ಧರ್ಮಗಳಾದ ಸುಖ ದುಃಖಗಳು ಅಂತಃಕರಣ ವೃತ್ತಿಗೆ ವಿಷಯವಲ್ಲ, ಪ್ರಮಾತನಿಗೂ ವಿಷಯವಲ್ಲ. ಆದುದರಿಂದ ಅವು ಸಾಕ್ಷೀ ಭಾಸ್ಯಗಳಾಗಿವೆ ಹೀಗಿದ್ದಾಗ್ಯೂ ಸುಖ ದುಃಖಗಳ ಆಕಾರವಾದ ಅಂತಃ ಕರಣ ವೃತ್ತಿಯಿಂದ ಸಾಕ್ಷಿಯು ಸುಖ ದುಃಖಗಳನ್ನು ಪ್ರಕಾಶ ಮಾಡುತ್ತದೆ. ವೃತ್ತಿ ಇಲ್ಲದೆ ಪ್ರಕಾಶವು ಸಂಭವಿಸುವುದಿಲ್ಲ.

ಸಾಕ್ಷೀ ಭಾಸ್ಯ ಪದಾರ್ಥಗಳನ್ನು ಸಾಕ್ಷಿಯು ವೃತ್ತಿಯಿಂದಲೇ ಪ್ರಕಾಶ ಮಾಡುವುದು.

ಉದಾಹರಣೆ – ಶುಕ್ತಿ ರಜತವು ಸಾಕ್ಷೀ ಭಾಸ್ಯ. ಅದು ಶುಕ್ತಿಯಲ್ಲಿ ತೋರಿದ ರಜತವನ್ನು ಅವಿದ್ಯಾ ವೃತ್ತಿಯಿಂದ ಪ್ರಕಾಶ ಮಾಡುವುದು. ಆ ಸಂದರ್ಭದಲ್ಲಿ ಅವಿದ್ಯಾ ವೃತ್ತಿಯು ಸಾಕ್ಷಿಗೆ ಸಹಾಯವಾಗಿದೆ ಸುಖ ದುಃಖಗಳೂ ಸಹ ಸಾಕ್ಷೀ ಭಾಸ್ಯಗಳೇ.

ಅಲ್ಲಿ ಸಾಕ್ಷಿಯು ಸುಖ ದುಃಖಗಳನ್ನು ಅಂತಃಕರಣದ ವೃತ್ತಿ ಸಹಾಯ ದಿಂದ ಪ್ರಕಾಶ ಮಾಡುವುದು. ಆದುದರಿಂದ ಅಂತಃಕರಣ ವೃತ್ತಿಯು ಸಾಕ್ಷಿಗೆ ಸಹಾಯವಾಗಿದೆ ಎಂದು ಹೇಳಲ್ಪಡುತ್ತದೆ. ಅದರಂತೆ ಸಾಕ್ಷೀ ಭಾಸ್ಯ ಪ್ರಸಂಗದಲ್ಲಿ ಸಾಕ್ಷಿಯು ಆಯಾ ವೃತ್ತಿಗಳ ಸಹಾಯದಿಂದ ಪದಾರ್ಥಗಳನ್ನು ಪ್ರಕಾಶ ಮಾಡುತ್ತದೆ.

ವೃತ್ತಿಯು ಇಂದ್ರಿಯಾದಿ ಬಾಹ್ಯ ಸಾಧನಗಳಿಂದ ಉಂಟಾದಾಗ ವೃತ್ತಿಗೆ ತೋರಿದ ವಿಷಯವನ್ನು ಸಾಕ್ಷೀ ಭಾಸ್ಯವೆನ್ನಕೂಡದು. ಅದು ಪ್ರಮಾತೃ ಭಾಸ್ಯ. ಸುಖದುಃಖಗಳು ಪ್ರಮಾತೃ ಭಾಸ್ಯವಲ್ಲ. ಏಕೆಂದರೆ ಸುಖದುಃಖಗಳನ್ನು ವಿಷಯೀಕರಿಸುವ ವೃತ್ತಿಗೆ ಬಾಹ್ಯೇಂದ್ರಿಯಗಳು ಹೇತು ವಲ್ಲ. ಸುಖದುಃಖಗಳು ಉತ್ಪನ್ನವಾದಾಗ ಹೊರಗಿನ ಸಾಧನಗಳ ಅಪೇಕ್ಷೆ ಇಲ್ಲದೆ ಅಂತಃಕರಣ ವೃತ್ತಿಯು ಸುಖದುಃಖಗಳ ಆಕಾರವಾಗುತ್ತದೆ. ಆ ವೃತ್ತಿಯಲ್ಲಿ ಆರೂಢವಾಗಿರುವ ಸಾಕ್ಷಿಯು ಸುಖದುಃಖಗಳನ್ನು ಪ್ರಕಾಶ ಮಾಡುತ್ತದೆ. ಈ ಕಾರಣದಿಂದಲೇ ಸುಖದುಃಖಗಳು ಸಾಕ್ಷೀ ಭಾಸ್ಯಗಳೆಂದು ಸಿದ್ಧವಾಗುತ್ತದೆ

ಈ ಸಾಕ್ಷೀ ಭಾಸ್ಯ ಜ್ಞಾನವು ಪರೋಕ್ಷ, ಅಪರೋಕ್ಷವೆಂದು ಎರಡು ವಿಧ. ಎಲ್ಲಿ ವಿಷಯಗಳನ್ನು ಕುರಿತು "ಆ", "ಅದು", "ಅವನು" ಎಂಬ

ಸರ್ವನಾಮ ಪ್ರಯೋಗವಾಗುವುದೋ ಅಲ್ಲಿ ಉಂಟಾಗುವ ಜ್ಞಾನವು ಪರೋಕ್ಷ ಮತ್ತು ಎಲ್ಲಿ ವಿಷಯಗಳನ್ನು ಕುರಿತು "ಈ", ''ಇದು'', "ನೀನು", ''ನಾನು" ಎಂಬ ಸರ್ವನಾಮ ಪ್ರಯೋಗವಾಗುವುದೋ ಅಲ್ಲಿ ಜ್ಞಾನವು ಅಪರೋಕ್ಷವಾಗುವುದು.

ಉದಾಹರಣೆ – ಸುಖದುಃಖಗಳು ಸನ್ನಿಹಿತವಾದುದರಿಂದ "ಈ" ಎಂದು ಪ್ರಯೋಗವಾಗುವುದರಿಂದ ಸುಖ ದುಃಖಗಳು ಅಪರೋಕ್ಷಗಳೆಂದು ಹೇಳಿಸಿ ಕೊಳ್ಳುತ್ತವೆ.

ಇನ್ನು ಮುಂದೆ ಬ್ರಹ್ಮಜ್ಞಾನವೂ ಸಹ ಪ್ರತ್ಯಕ್ಷ ಅಥವಾ ಅಪರೋಕ್ಷ ಎಂಬುದು ನಿರೂಪಿಸಲ್ಪಡುತ್ತದೆ.

೧. ಹೊರಗಿನ ಘಟಾದಿಗಳೊಂದಿಗೆ ಅಂತಃಕರಣ ವೃತ್ತಿಯ ಸಂಬಂಧವು ನೇತ್ರಾದಿ ಇಂದ್ರಿಯಗಳ ದ್ವಾರ ಆಗುತ್ತದೆ. ಆದುದರಿಂದ ಘಟಾದಿಗಳು ಪ್ರತ್ಯಕ್ಷವೆಂದು ಹೇಳಿಸಿಕೊಳ್ಳುತ್ತವೆ.

೨. ಸುಖ ದುಃಖಾದಿಗಳ ಜ್ಞಾನ ಪ್ರಸಂಗದಲ್ಲಿ ವೃತ್ತಿಯು ಹೊರಗೆ ಹೋಗದೆ ಅಂತಃಕರಣದಲ್ಲಿಯೇ ಸುಖದುಃಖಗಳೊಂದಿಗೆ ಸಂಬಂಧವನ್ನು ಪಡೆದುಕೊಳ್ಳುತ್ತದೆ. ಆದುದರಿಂದ ಸುಖದುಃಖಾದಿಗಳ ಜ್ಞಾನವೂ ಸಹ ಪ್ರತ್ಯಕ್ಷವೆನಿಸುತ್ತದೆ.

೩ ''ನೀನು ದಶಮನು" ಎಂಬ ಶಬ್ದದಿಂದ ಪ್ರೇರಿತವಾದ ದಶಮನ ಜ್ಞಾನವೂ ಸಹ ಪ್ರತ್ಯಕ್ಷವೇ.

ಈ ಪ್ರಕಾರವಾಗಿ ಬ್ರಹ್ಮಾಕಾರವಾದ ಅಂತಃಕರಣ ವೃತ್ತಿಯು ಹೊರಗೆ ಹೋಗದೆ ಶರೀರದ ಒಳಗೆ ಬ್ರಹ್ಮದೊಂದಿಗೆ ಸಂಬಂಧವನ್ನು ಪಡೆದುಕೊಳ್ಳುತ್ತದೆ. ಆಗ ಉಂಟಾದ ಬ್ರಹ್ಮಜ್ಞಾನವು ಸುಖ ದುಃಖ ಜ್ಞಾನದಂತೆ ಪ್ರತ್ಯಕ್ಷವೇ ಎಂದು ತಿಳಿಯಬೇಕು.

ಉದಾಹರಣೆ – ನೇತ್ರದ ಮೇಲೆ ಬೆರಳನ್ನು ಇಟ್ಟುಕೊಂಡಾಗ ಆ ಸ್ವರೂಪಾವರಣದಿಂದ ಆಚ್ಛಾದನವಾಗಿ ಬ್ರಹ್ಮಾಂಡ ವ್ಯಾಪ್ತಿಯಾದ ಸೂರ್ಯ ಪ್ರಕಾಶವು ಕಂಡು ಬರುವುದಿಲ್ಲ. ಆ ಬೆರಳನ್ನು ತೆಗೆದಾಗ ಅನಾಯಾಸವಾಗಿ ಬ್ರಹ್ಮಾಂಡದಲ್ಲಿ ತುಂಬಿದ ಸೂರ್ಯ ಪ್ರಕಾಶವು ಕಂಡುಬರುವುದು.

ಅದರಂತೆ ಸಾಕ್ಷಿಯಾದ ಆತ್ಮನ ಉಪಾಧಿಯಾದ ಅಂತಃಕರಣವು ಆತ್ಮನನ್ನು ಆಚ್ಛಾದಿಸುವುದರಿಂದ ಅಂದರೆ ಆವರಿಸುವುದರಿಂದ ಈ ಅಲ್ಪಾವರಣದಿಂದಲೇ ಸರ್ವತ್ರ ಪರಿಪೂರ್ಣವಾದ ಬ್ರಹ್ಮವು ಕಂಡುಬರುವುದಿಲ್ಲ. ಆತ್ಮವಿಚಾರದಿಂದ ಆ ಆವರಣವು ಭಂಗವಾದರೆ ಅಥವಾ ಬ್ರಹ್ಮಾಕಾರ ವೃತ್ತಿಯಿಂದ ಅದು ಭಂಗವಾದರೆ ಅನಾಯಾಸವಾಗಿ ಸರ್ವತ್ರ ಪರಿಪೂರ್ಣ ಬ್ರಹ್ಮವು ಕಂಡುಬರುತ್ತದೆ ಹೀಗಾಗುವ ಸಮಕಾಲದಲ್ಲಿಯೇ ಗೃಹಗತ ಆಕಾಶದ ಅಸಂಗತಾದಿ ಜ್ಞಾನದಿಂದ ಮಹಾಕಾಶವೂ ಸಹ ಅಸಂಗವೇ ಎಂಬ ಜ್ಞಾನ ಉಂಟಾಗುವಂತೆ, ಸರ್ವತ್ರ ಪರಿಪೂರ್ಣ ಬ್ರಹ್ಮದೊಂದಿಗೆ ಅಂತಃಕರಣ ಸ್ಥಿತವಾದ ಆತ್ಮದ ಅಭೇದವು ತಿಳಿದು ಬರುತ್ತದೆ

ಸುಖದುಃಖಾಕಾರ ವೃತ್ತಿಯಲ್ಲಿ ಹೊರಗಿನ ಸಾಧನಗಳ ಅಪೇಕ್ಷೆ ಇಲ್ಲದುದರಿಂದ ಆ ಜ್ಞಾನವು ಸಾಕ್ಷೀ ಭಾಸ್ಯವೆನಿಸುತ್ತದೆ ಅದರಂತೆ ಬ್ರಹ್ಮಜ್ಞಾನವು ಸಾಕ್ಷೀ ಭಾಸ್ಯವಲ್ಲ ಬ್ರಹ್ಮಜ್ಞಾನಕ್ಕೆ ಬ್ರಹ್ಮಾಕಾರ ವೃತ್ತಿಯುಂಟಾಗಲು ಗುರು ಮುಖದಿಂದ ಹೊರಟ ವೇದ ವಚನಗಳಿಗೂ ಶ್ರೋತ್ರವಿಗೂ (ಕಿವಿಗೂ) ಸಂಬಂಧ ರೂಪವಾದ ಹೊರಗಿನ ಸಾಧನೆಯು ಬೇಕಾಗುತ್ತದೆ

ಬ್ರಹ್ಮವು ಸಾಕ್ಷೀ ಭಾಸ್ಯವಲ್ಲ ಅದರಂತೆ ಅದು ಪ್ರಮಾತೃ ಭಾಸ್ಯವೂ ಅಲ್ಲ. ಅದು ಮತ್ತೊಂದು ದೀಪದ ಅಪೇಕ್ಷೆ ಇಲ್ಲದೆ ಕೇವಲ ನೇತ್ರಕ್ಕೆ ವಿಷಯವಾದ ದೀಪದಂತೆ "ಅಹಂ ಬ್ರಹ್ಮಾಸ್ಮಿ" ಎಂಬ ಆಕಾರವುಳ್ಳ ಕೇವಲ ಅಂತಃಕರಣ ವೃತ್ತಿಗೆ ವಿಷಯವಾಗಿದೆ ಬ್ರಹ್ಮಾಕಾರ ವೃತ್ತಿಯಲ್ಲಿ ಚಿದಾಭಾಸನಿದ್ದರೂ ಬ್ರಹ್ಮವು ಆ ಚಿದಾಭಾಸನಿಗೆ ವಿಷಯವಲ್ಲ. ಆದುದರಿಂದ ಬ್ರಹ್ಮವು ಪ್ರಮಾತೃ ಭಾಸ್ಯವೂ ಅಲ್ಲ. ತನ್ನ ಪ್ರಕಾಶದಲ್ಲಿ ಅನ್ಯ ಪ್ರಕಾಶದ ಅಪೇಕ್ಷೆ ಇಲ್ಲದೆ ಸರ್ವವನ್ನೂ ಪ್ರಕಾಶಿಸುತ್ತ ಸ್ವಯಂ ಪ್ರಕಾಶವಾಗಿರುವುದೇ ಬ್ರಹ್ಮ.

ಪ್ರಶ್ನೆ – ಬ್ರಹ್ಮ ಪ್ರಕಾಶದಲ್ಲಿ ವೃತ್ತಿಯು ಹೇಗೆ ಸಹಾಯ ಮಾಡುತ್ತದೆ?

ಉತ್ತರ – ವಸ್ತುಗಳನ್ನು ಸಾಬೂನು ಸ್ವಚ್ಛಮಾಡಿದಂತೆ ಬ್ರಹ್ಮಾಕಾರ ವೃತ್ತಿಯು ಬ್ರಹ್ಮವನ್ನು ಆವರಿಸಿದ ಮೂಲಾವಿದ್ಯೆಯನ್ನು ಹೋಗಲಾಡಿಸು

ತ್ತದೆ ಇದೇ ವೃತ್ತಿಯಲ್ಲಿರುವ ಪ್ರಭಾವ ಇದನ್ನು ಬಿಟ್ಟರೆ ವೃತ್ತಿಗೆ ಬೇರೆ ಏನು ಪ್ರಯೋಜನವೂ ಇಲ್ಲ

ಪ್ರಶ್ನೆ – ಬ್ರಹ್ಮ ಪ್ರಕಾಶವು ವೃತ್ತಿಯಿಂದ ಆಗುತ್ತದೆಂಬ ವಿಷಯವು ತಿಳಿದುಬಂದಿತು ಇನ್ನು "ಅಹಂ ಬ್ರಹ್ಮಾಽಸ್ಮಿ" ಎಂಬ ವೃತ್ತಿರೂಪ ತತ್ತ್ವಜ್ಞಾನವು ಹೇಗೆ ಪ್ರಕಾಶವಾಗುತ್ತದೆ ?

ಉತ್ತರ – ಅದು ಬಾಹ್ಯ ಸಹಾಯದ ಅಪೇಕ್ಷ ಇಲ್ಲದೆ ಸಾಕ್ಷಿಯಿಂದ ಪ್ರಕಾಶವಾಗುತ್ತದೆ ಆದುದರಿಂದ "ಅಹಂ ಬ್ರಹ್ಮಾಽಸ್ಮಿ" ಎಂಬ ವೃತ್ತಿ ರೂಪ ತತ್ತ್ವಜ್ಞಾನವು ಸಾಕ್ಷೀ ಭಾಸ್ಯವಾಗಿರುತ್ತದೆ.

ಎಲ್ಲೆಲ್ಲಿ ವಿಷಯದೊಂದಿಗೆ ಸಂಬಂಧವಡುವುದೋ ಅಲ್ಲಲ್ಲಿ ಆಗುವ ಜ್ಞಾನವು ಪ್ರತ್ಯಕ್ಷವೆಂದು ಹೇಳಿಸಿಕೊಳ್ಳುತ್ತದೆ ಈ ನ್ಯಾಯದಂತೆ "ಅಹಂ ಬ್ರಹ್ಮಾಸ್ಮಿ" ಎಂಬ ವೃತ್ತಿಗೆ ವಿಷಯವಾದ ಬ್ರಹ್ಮದೊಂದಿಗೆ ಸಂಬಂಧವಾಗುವುದರಿಂದ ಬ್ರಹ್ಮಜ್ಞಾನವೂ ನಹ ಪ್ರತ್ಯಕ್ಷವೇ

ಪ್ರಶ್ನೆ – ಪ್ರತ್ಯಕ್ಷ ಎಂದರೇನು ?

ಉತ್ತರ – ಹೊಗೆಯನ್ನು ನೋಡಿ ಅಗ್ನಿ ಜ್ಞಾನ ಉಂಟಾದಾಗ ಹೊಗೆ ಜ್ಞಾನವು ಪ್ರತ್ಯಕ್ಷ ಅಗ್ನಿ ಜ್ಞಾನವು ಪ್ರತ್ಯಕ್ಷವಲ್ಲ. ಏಕೆಂದರೆ ನೇತ್ರ ದ್ವಾರ ಅಂತಃಕರಣ ವೃತ್ತಿಗೂ ಹೊಗೆಗೂ ಸಂಬಂಧವುಂಟು ಆದುದರಿಂದ ಹೊಗೆ ಜ್ಞಾನವು ಪ್ರತ್ಯಕ್ಷ. ಅಗ್ನಿ ಜ್ಞಾನದ ಪ್ರಸಂಗದಲ್ಲಿ ಅನುಮಾನದಿಂದ ಅಂತಃಕರಣ ವೃತ್ತಿಯು ಅಗ್ನಿಯ ಆಕಾರವನ್ನು ಧರಿಸುವುದು ಹೀಗಾದರೂ ಅಗ್ನಿಗೂ ವೃತ್ತಿಗೂ ಸಂಬಂಧವಿಲ್ಲದುದರಿಂದ ಅಗ್ನಿ ಜ್ಞಾನವು ಪ್ರತ್ಯಕ್ಷ ವಲ್ಲ ಎಲ್ಲಿ ವೃತ್ತಿಗೂ ವಿಷಯಕ್ಕೂ ಸಂಬಂಧವುಂಟಾಗುವುದೋ ಅಲ್ಲಿ ಉಂಟಾಗುವ ಜ್ಞಾನವು ಪ್ರತ್ಯಕ್ಷ ಜ್ಞಾನ ಎಲ್ಲಿ ವೃತ್ತಿಗೂ ವಿಷಯಕ್ಕೂ ಸಂಬಂಧಪಡದೆ ವಿಷಯವು ಹೊರಗೆ ದೂರದಲ್ಲಿರುವುದೋ ಇಲ್ಲವೇ ಭೂತ ಕಾಲದಲ್ಲಿರುವುದೋ, ಇಲ್ಲವೇ ಭವಿಷ್ಯತ್‌ನಲ್ಲಿ ಇರುವುದೋ ಅಲ್ಲಿ ಅನುಮಾನ ಪ್ರಮಾಣದಿಂದ ಇಲ್ಲವೇ "ಅಸ್ತಿ" ಮೊದಲಾದ ಬೋಧಕ ಶಬ್ದಗಳಿಂದ ವಿಷಯಾಕಾರ ವೃತ್ತಿಯು ಅಂತರ್ಯದಲ್ಲಿಯೇ ಉಂಟಾದರೆ ಆ ಜ್ಞಾನವು ಪರೋಕ್ಷವೆನಿಸಿಕೊಳ್ಳುತ್ತದೆ.

ಈ ರೀತಿಯಾಗಿ ಜ್ಞಾನ ಪ್ರಸಂಗಗಳನ್ನೆಲ್ಲಾ ವಿಚಾರಿಸಿ ನೋಡಿದರೆ

ಇಂದ್ರಿಯ ಜನ್ಯ ಜ್ಞಾನವೇ ಪ್ರತ್ಯಕ್ಷವೆಂಬ ನಿಯಮವಿಲ್ಲ ಸುಖ ದುಃಖ ಜ್ಞಾನವು ಇಂದ್ರಿಯ ಜನ್ಯವಲ್ಲದಿದ್ದರೂ ಪ್ರತ್ಯಕ್ಷವಾದಂತೆ, ಗುರು ಮುಖ ದ್ವಾರ ಶ್ರವಣ ಮಾಡಿದ ಮಹಾ ವಾಕ್ಯ ರೂಪ ಶಬ್ದದಿಂದ ಉಂಟಾದ ಜ್ಞಾನವೂ ಸಹ ಪ್ರತ್ಯಕ್ಷವೆನಿಸುತ್ತದೆ

ಸಂಬಂಧ – ಮುಂದಿನ ಎರಡು ದೋಹಾಗಳಲ್ಲಿ ಈ ವಿಷಯವನ್ನು ಉಪಸಂಹಾರ ಮಾಡುತ್ತಾರೆ.

ದೋಹಾ – ಗುರುಕೀ ಅಸ ಉಪದೇಸ ಸುನಿ, ತತ್ವದೃಷ್ಟಿ ಬುದ್ಧಿಮಂತ ।
ಬ್ರಹ್ಮರೂಪಲಖಿ ಆತಮಾ, ಕಿಯೋ ಭೇದಭ್ರಮ ಅಂತ ॥೧೧೯॥

"ಅಹಂಬ್ರಹ್ಮ" ಯಾ ವೃತ್ತಿಮೈ, ನಿರಾವರನ ಹ್ವೈ ಭಾನ ।
ದಾದೂ ಆದು ರೂಪಸೋ, ಯೂ ಹಮಲಿಯೋ ಪಿಚ್ಛಾನ
॥ ೧೨೦ ॥

ತಾತ್ಪರ್ಯ – ಈ ಉಪದೇಶವನ್ನು ಕೇಳಿ ಬುದ್ಧಿವಂತನಾದ ತತ್ತ್ವ ದೃಷ್ಟಿಯು ತನ್ನನ್ನು ಪರಬ್ರಹ್ಮ ಸ್ವರೂಪನೆಂದು ತಿಳಿದು ಭೇದ ಬುದ್ಧಿ ಎಂಬ ಭ್ರಮೆಯನ್ನು ನಾಶಮಾಡಿಕೊಂಡನು. ''ಅಹಂ ಬ್ರಹ್ಮಾಸ್ಮಿ" ಎಂಬ ವೃತ್ತಿಯಲ್ಲಿ ಆವರಣ ರಹಿತವಾದ ವಿಷಯವೆಂದು ಹೇಳಿಸಿಕೊಳ್ಳುವ ವಸ್ತುವೇ ಸರ್ವರಿಗೂ ಆದಿರೂಪ ದಾದೂ ಗುರು ಬ್ರಹ್ಮವೆಂದು ತಿಳಿಯಲ್ಪಟ್ಟಿದೆ

## ನಾಲ್ಕನೇ ತರಂಗದ ಸಾರಾಂಶ

ದಾನ ಶೂರನಾದ ಕರ್ಣ ಮಹಾರಾಜನು ನಿಜವಾಗಿ ಕುಂತಿ ಕುಮಾರನಾಗಿದ್ದರೂ ಅಜ್ಞಾನದಿಂದ ಜನರು ತನ್ನನ್ನು ರಾಧಾಪುತ್ರನೆಂಬುದನ್ನು ಕೇಳಿ ತಾನು ''ರಾಧಾ ಪುತ್ರನೇ" ಎಂದು ಅಂದುಕೊಂಡಿದ್ದನು. ಒಂದು ಸಾರಿ ಶ್ರೀ ಕೃಷ್ಣನು "ನೀನು ಸೂರ್ಯನ ವೀರ್ಯದಿಂದ ಕುಂತಿಯ ಜಠರದಲ್ಲಿ ಹುಟ್ಟಿದ ಕ್ಷತ್ರಿಯನು" ಎಂದು ಹೇಳಿದ್ದನ್ನು ಕೇಳಿ ಕರ್ಣನು ತಾನು ರಾಧಾಪುತ್ರನೆಂಬ ಭಾವವನ್ನು ಹೊಡೆದು ಕುಂತೀ ಪುತ್ರನೆಂದು ತಿಳಿದುಕೊಂಡನು. ಅವನು ಎಲ್ಲಿಯವರೆಗೆ ತನ್ನನ್ನು ರಾಧಾಪುತ್ರನೆಂದು ತಿಳಿದು

ಕೊಂಡನು ಅವನು ಎಲ್ಲಿಯವರೆಗೆ ತನ್ನನ್ನು ರಾಧಾಪುತ್ರನೆಂದು ತಿಳಿದು ಕೊಂಡಿದ್ದನೋ ಅಲ್ಲಿಯವರೆಗೆ ತಾನು ನೀಚ ಕುಲಸ್ಥನೆಂದು ತಿಳಿದು ಖಿನ್ನ ಮನಸ್ಕನಾಗಿರುತ್ತಿದ್ದನು ತಾನು ಕುಂತೀಪುತ್ರನೆಂದು ತಿಳಿದ ಮೇಲೆ ತಾನು ಸತ್ಕುಲಸ್ಥನೆಂದು ತಿಳಿದು ಪ್ರಸನ್ನಚಿತ್ತನಾದನು ಅವನು ರಾಧಾಪುತ್ರ ನೆಂಬ ಭಾವವನ್ನು ಬಿಟ್ಟು ಕುಂತೀಪುತ್ರನೆಂದು ತಿಳಿಯುವುದರಲ್ಲಿ ಅವನಿಗೆ ಯಾವ ಆಯಾಸವೂ ಆಗಲಿಲ್ಲವಲ್ಲವೇ ? ಅವನಿಗೆ ರಾಧಾಪುತ್ರನೆಂದು ತಿಳಿದ ಕಾಲದಲ್ಲಿ ಇದ್ದ ಶರೀರ ಪ್ರಾಣಾದಿ ಸಂಘಾತವೇ ಕುಂತೀಪುತ್ರನೆಂದು ತಿಳಿದ ಕಾಲದಲ್ಲಿಯೂ ಸಹ ಇತ್ತು. ಬದಲಾವಣೆ ಏನೂ ಇಲ್ಲ. ಈ ರೀತಿ ಬದಲಾ ವಣೆ ಇಲ್ಲದಿದ್ದರೂ ತಾನು ಕುಂತೀಪುತ್ರನೆಂದು ಮಹದಾನಂದಭರಿತನಾದನು.

ನಾನು ಬ್ರಾಹ್ಮಣನು, ಕ್ಷತ್ರಿಯನು, ವೈಶ್ಯನು, ಶೂದ್ರನು ಎಂಬ ಭಾವನೆಯು ಮಹದಾನಂದಕ್ಕೆ ಕಾರಣವಾಗಲಾರದು ನಾನು ಬ್ರಾಹ್ಮಣ ನೆಂದು ಅಂದುಕೊಳ್ಳುವವರೆಗೂ ಭಿಕ್ಷೆ ಮಾಡುವ ಚಿಂತೆ ಇದ್ದೇ ಇದೆ. ನಾನು ಕ್ಷತ್ರಿಯನು ಎಂದು ಅಂದುಕೊಳ್ಳುವವರೆಗೂ ಪ್ರಜಾಪಾಲನಾದಿ ಚಿಂತೆ ಇದ್ದೇ ಇದೆ. ನಾನು ವೈಶ್ಯನೆಂದು ಅಂದುಕೊಳ್ಳುವವರೆಗೂ ವಾಣಿಜ್ಯಾದಿ ಗಳ ಚಿಂತೆ ಇದ್ದೇ ಇರುತ್ತದೆ ನಾನು ಶೂದ್ರನೆಂದು ತಿಳಿದುಕೊಂಡಿರು ವವರೆಗೂ ಸೇವಾದಿಗಳ ಚಿಂತೆ ಇದ್ದೇ ಇರುತ್ತದೆ. ನಾನು ಸಾಧು, ಸಂನ್ಯಾಸಿ ಎಂದು ತಿಳಿದುಕೊಂಡಿರುವವರೆಗೂ ಪೂಜಾದಿಗಳನ್ನು ಮಾಡಿಸಿಕೊಳ್ಳಬೇಕೆಂಬ ಚಿಂತೆ ಇದ್ದೇ ಇರುತ್ತದೆ. ಇದರಲ್ಲಿ ಯಾವ ಚಿಂತೆ ಇದ್ದವನೂ ನಿಶ್ಚಿಂತೆ ಯಿಂದ ಇರಲಾರನು "ನಾನು ಬ್ರಹ್ಮವು" ಎಂಬ ಚಿಂತೆಯು ಮಾತ್ರ ನಿಶ್ಚಿಂತೆಯನ್ನು ಉಂಟುಮಾಡುತ್ತದೆ. "ನಾನು ಬ್ರಹ್ಮವು" ಎಂದು ತಿಳಿದು ಕೊಳ್ಳುವುದರಲ್ಲಿ ಯಾವ ಆಯಾಸವೂ ಇಲ್ಲ. ಸಹಸ್ರ ತಾಪಗಳಲ್ಲಿ ಕಾಲಹರಣ ಮಾಡುವುದಕ್ಕಿಂತ ನಾನು ಬ್ರಹ್ಮವೆಂದು ತಿಳಿದು ತತ್ಕಾಲ ಪರಮಾನಂದವನ್ನು ಅನುಭವಿಸಿ "ಧನ್ಯೋಽಹಂ", "ಧನ್ಯೋಽಹಂ" ಎನ್ನುತ್ತಾ ನಿರಂಕುಶದಿಂದ ಸಂಸಾರದಲ್ಲಿ ವರ್ತಿಸಬೇಕೆಂಬುದೇ ನಾಲ್ಕನೇ ತರಂಗದ ಸಾರಾಂಶ.

ಇತಿ ಶ್ರೀ ಸಾಧು ಶ್ರೋತ್ರೀಯ ಬ್ರಹ್ಮನಿಷ್ಠ ಶ್ರೀ ನಿಶ್ಚಲದಾಸ ಕೃತ **ವಿಚಾರ** ಸಾಗರ ಗ್ರಂಥದಲ್ಲಿ ಉತ್ತಮಾಧಿಕಾರಿ ಬೋಧೆ ಎಂಬ ಚತುರ್ಥ ತರಂಗಕ್ಕೆ ಶ್ರೋತ್ರೀಯ ಬ್ರಹ್ಮನಿಷ್ಠ ಸ್ವಾಮಿ ಶ್ರೀ ಶ್ರೀ ಶ್ರೀ ಶಂಕರಾನಂದಜೀ ಯವರ ವ್ಯಾಖ್ಯಾನ ಸಹಿತ ಚತುರ್ಥ ತರಂಗ ಸಮಾಪ್ತ.

## ಮಂಗಳ

ಓಂ ಮಂಗಳಂ ನಿಶ್ಚಲೇಂದ್ರಾಯ ಸಚ್ಚಿದಾನಂದ ರೂಪಿಣೆ ।
ಸರ್ವಭಕ್ತ ಶರಣ್ಯಾಯ ಸಾಧು ರೂಪಾಯ ಮಂಗಳಂ ॥

ಓಂ ಸರ್ವೇಷಾಂ ಸ್ವಸ್ತಿರ್ಭವತು
ಓಂ ಸರ್ವೇಷಾಂ ಶಾಂತಿರ್ಭವತು
ಓಂ ಸರ್ವೇಷಾಂ ಪೂರ್ಣಂಭವತು
ಓಂ ಶಾಂತಿಃ ಶಾಂತಿಃ ಶಾಂತಿಃ

ಓಂ ತತ್ಸತ್ ಪರಬ್ರಹ್ಮಣೇ ನಮಃ

# ದೃಷ್ಟಾಂತ

## ರಜ್ಜು ಸರ್ಪ ನ್ಯಾಯ

ನಾಲ್ಕನೇ ತರಂಗದ ೪೭ ಮತ್ತು ೪೮ನೇ ದೋಹಾಗಳಲ್ಲಿ ಪ್ರಪಂಚವು ಮಿಥ್ಯೆ ಎಂದು ಹೇಳುವಾಗ "ರಜ್ಜು ಸರ್ಪ" ದೃಷ್ಟಾಂತವನ್ನು ಕೊಟ್ಟಿರುತ್ತಾರೆ. ರಜ್ಜು ಸರ್ಪ ದೃಷ್ಟಾಂತದ ಅರ್ಥವು ಬಹಳ ಜನರಿಗೆ ಸರಿಯಾಗಿ ತಿಳಿಯುವು ದಿಲ್ಲ ಆದುದರಿಂದ ಅದನ್ನು ಕುರಿತು ಸಂಕ್ಷೇಪವಾಗಿ ಒಂದೆರಡು ಮಾತು ಗಳು ಇಲ್ಲಿ ಹೇಳಲ್ಪಟ್ಟಿವೆ.

ಒಬ್ಬ ಗೃಹಸ್ಥನ ಮನೆಯ ಪಕ್ಕದಲ್ಲಿ ಒಂದು ಸೇದುವ ಬಾವಿ ಇತ್ತು. ಅಲ್ಲಿಗೆ ನೀರಿಗಾಗಿ ಆ ಗ್ರಾಮವಾಸಿಗಳು ಅನೇಕರು ನಿತ್ಯವೂ ಬರುತ್ತಿದ್ದರು. ಒಂದು ದಿವಸ ಮಂದ ಅಂಧಕಾರದಲ್ಲಿ ಒಬ್ಬ ವೃದ್ಧಳು ಕೊಡವನ್ನು ತೆಗೆದು ಕೊಂಡು ನೀರಿಗಾಗಿ ಬಾವಿಯ ಹತ್ತಿರ ಬರುತ್ತಲೇ "ಸರ್ಪ ! ಸರ್ಪ ! ಅಮ್ಮಾ, ಎಷ್ಟು ದೊಡ್ಡ ಸರ್ಪ !" ಎಂದು ಗಟ್ಟಿಯಾಗಿ ಕೂಗಿಕೊಂಡು ಕೊಡದೊಂದಿಗೆ ಮೂರ್ಛಿತಳಾಗಿ ಬಿದ್ದುಬಿಟ್ಟಳು. ಆ ವೃದ್ಧಳ ಕೂಗನ್ನು ಕೇಳಿ ಅಕ್ಕ ಪಕ್ಕ ದವರು ಓಡುತ್ತ ಬಂದು ಭಯದಿಂದ ಕೂಡಿದ ಅಂತಃಕರಣದಿಂದ ದೂರ ದಲ್ಲಿರುವ ಸರ್ಪವನ್ನು ನೋಡಿದರು. ಕೆಲವರು ಬಿದ್ದ ವೃದ್ಧಳನ್ನು ಮೇಲಕ್ಕೆತ್ತಿ ಶೈತ್ಯೋಪಚಾರವನ್ನು ಮಾಡಲಾರಂಭಿಸಿದರು. ಅವರಲ್ಲಿ ಒಬ್ಬನು ದೂರ ದಲ್ಲಿ ನಿಂತು "ಛೂ, ಛೂ'' ಎಂದು ಮಂತ್ರವನ್ನು ಉಚ್ಚರಿಸಹತ್ತಿದನು. ಮತ್ತೊಬ್ಬನು ಒಂದು ಬಂದೂಕವನ್ನು ತಂದು ಅದರಲ್ಲಿ ತೋಟ ತುಂಬಿ ದೂರದಲ್ಲಿ ನಿಂತು ಹೊಡೆಯಹತ್ತಿದನು. ಮಗದೊಬ್ಬ ಧೈರ್ಯವಂತನು ಕೈಯಲ್ಲಿ ಒಂದು ದೊಡ್ಡ ದಂಡವನ್ನು ತೆಗೆದುಕೊಂಡು ಹೊಡೆಯಲು

ಪ್ರಯತ್ನಿಸಿದನು. ಇನ್ನೊಬ್ಬನು ಒರೆಯಿಂದ ಕತ್ತಿಯನ್ನು ಹಿರಿದು ಅದನ್ನು ಕತ್ತರಿಸಬೇಕೆಂದು ಓಡಿಬಂದನು ಮತ್ತೊಬ್ಬನು ತಲೆಯ ಮೇಲೆ ದೊಡ್ಡ ಕಲ್ಲನ್ನು ಹೊತ್ತುಕೊಂಡು ಸರ್ಪದ ಮೇಲೆ ಹಾಕುತ್ತೇನೆಂದು ಬಂದನು ಇನ್ನೊಬ್ಬ ಭಯಗ್ರಸ್ಥನು ಒಂದು ಮರದ ಮೇಲೆ ಕೂತು ಬಿಲ್ಲಿಗೆ ಬಾಣವನ್ನು ಏರಿಸಿ ಅದನ್ನು ಹೊಡೆಯಲಾರಂಭಿಸಿದನು ಹಾ ವಾ ಡಿ ಗ ರ ವ ನಾ ದ ಮತ್ತೊಬ್ಬನು ನಾಗಸ್ವರ ಊದಹತ್ತಿದನು ಈ ರೀತಿ ಎಲ್ಲರೂ ತಮ್ಮ ತಮ್ಮ ಶಕ್ತ್ಯಾನುಸಾರ ಆ ಸರ್ಪವನ್ನು ನಾಶಮಾಡಲು ಪ್ರಯತ್ನಿಸಿದರು

ಈ ಗಲಾಟೆಯನ್ನು ಕೇಳಿ ಎದುರಿನ ಮನೆಯಲ್ಲಿರುವ ಧೈರ್ಯವಂತ ಳಾದ ವೃದ್ಧಳು ದೀಪಾರಾಧನೆ ಮಾಡಿಕೊಂಡು ಮೆಲ್ಲಮೆಲ್ಲನೆ ಆ ಹಾವಿನ ಸಮೀಪಕ್ಕೆ ಬಂದಳು. ಹಾವಿನ ಮೇಲೆ ದೀಪದ ಪ್ರಕಾಶವು ಬೀಳುತ್ತಲೇ ಎಲ್ಲರೂ "ಹಗ್ಗ, ಹಗ್ಗ"ವೆಂದು ನಗಲಾರಂಭಿಸಿದರು! ಆ ಸಮಯದಲ್ಲಿ ಪಕ್ಕದ ಮನೆಯ ಸೇವಕನೊಬ್ಬನು ಅಲ್ಲಿಗೆ ಬಂದು ಪಕಪಕನೆ ನಗುತ್ತ ಹಗ್ಗ ವನ್ನು ಸುತ್ತಿ ನಾನು ಅಲ್ಲಿಯೇ ಇಟ್ಟು ಮರೆತು ಮನೆಗೆ ಹೋಗಿದ್ದೆನೆಂದು ಹೇಳಿದನು ಆ ಮರೆತು ಹೋದ ಹಗ್ಗವೇ ಹಾವಾಗಿ ಅವರೆಲ್ಲರಿಗೂ ಕಂಡಿತು

ಈ ಕಥೆಯಲ್ಲಿ ರಜ್ಜು ಸ್ಥಾನದಲ್ಲಿ ಭ್ರಾಂತಿ ಬಲದಿಂದ ಹುಟ್ಟಿದ ಸರ್ಪದ ನಾಶಕ್ಕಾಗಿ ಅನೇಕ ಜನರು ಅನೇಕ ಉಪಾಯಗಳನ್ನು ಮಾಡಿದರೂ ಅವು ನಿರರ್ಥಕವಾದವುಗಳು. ವೃದ್ಧಳು ದೀಪವನ್ನು ತರುತ್ತಲೇ ತತ್ಕಾಲ ಸರ್ಪವು ನಾಶವಾಗಿ ರಜ್ಜುವಿನ ದರ್ಶನದಿಂದ ಎಲ್ಲರಿಗೂ ಆಶ್ಚರ್ಯವೂ, ಆನಂದವೂ ಉಂಟಾಯಿತು.

## ದ್ರಾಷ್ಟಾಂತ

ಈ ಪ್ರಕಾರವಾಗಿ ಸಂಸಾರವು ಒಂದು ಮಹಾ ಸರ್ಪವಾಗಿದೆ. ಈ ಸಂಸಾರ ರೂಪದಲ್ಲಿರುವ ಸರ್ಪವು ಬ್ರಹ್ಮರೂಪ ಅಧಿಷ್ಠಾನದಲ್ಲಿ ಮೂಲಾ ವಿದ್ಯೆ ಎಂಬ ಭ್ರಾಂತಿ ಬಲದಿಂದ ಉತ್ಪನ್ನವಾಗಿರುತ್ತದೆ. ಈ ಸಂಸಾರ ಸರ್ಪದ ನಿವೃತ್ತಿಗಾಗಿ ಅನೇಕ ಜನರು ಅನೇಕ ಉಪಾಯ ಮಾಡುತ್ತಾರೆ.

ಕೆಲವರು ತೀರ್ಥಾಟನ, ಕೆಲವರು ಧೂಮ್ರಪಾನ, ಕೆಲವರು ಜಪ, ಕೆಲವರು ತಪ, ಕೆಲವರು ಧ್ಯಾನ, ಕೆಲವರು ಪ್ರಾಣಾಯಾಮ, ಕೆಲವರು ಕರ್ಮಾನುಷ್ಠಾನ, ಕೆಲವರು ಭಜನೆ, ಕೆಲವರು ಪೂಜೆ ಮಾಡುತ್ತಿದ್ದರೂ ಈ ಉಪಾಯಗಳಿಂದ ಸಂಸಾರ ಸರ್ಪವು ನಾಶವಾಗದೆ ಮತ್ತಷ್ಟು ದೃಢವಾಗುತ್ತದೆ. ಜ್ಞಾನವೃದ್ಧನಾದ ಮಹಾಪುರುಷನು ಶಮಾದಿ ಸಾಧನಗಳಿಂದ ಶುದ್ಧವೂ, ಅಚಲವೂ ಆದ ಅಂತಃಕರಣವೆಂಬ ಪ್ರಣತಿಯಲ್ಲಿ "ಅಹಂಬ್ರಹ್ಮಾಽಸ್ಮಿ" ಎಂಬ ದೀಪವನ್ನು ಪ್ರಜ್ವಲಿಸುವಂತೆ ಮಾಡಿದಾಗ ಸಂಸಾರ ಸರ್ಪವು ಬಾಧೆಯಾಗಿ ಸಚ್ಚಿದಾನಂದ ಬ್ರಹ್ಮರೂಪ ರಜ್ಜು ದರ್ಶನದಿಂದ ಆನಂದವನ್ನು ಅನುಭವಿಸುತ್ತಾನೆ.

## ದೃಷ್ಟಾಂತ ಮಹಿಮೆ

ರಜ್ಜು ಸರ್ಪ ದೃಷ್ಟಾಂತವು ವೇದಾಂತ ಶಾಸ್ತ್ರದಲ್ಲಿ ಪ್ರಾಣಕ್ಕೆ ಸಮಾನವಾದುದು. ಪ್ರಾಣವಿಲ್ಲದ ಶರೀರವು ನಿರರ್ಥಕವಾಗುವಂತೆ ರಜ್ಜು ಸರ್ಪ ದೃಷ್ಟಾಂತದ ಸಹಾಯವಿಲ್ಲದಿದ್ದರೆ ವೇದಾಂತ ಶಾಸ್ತ್ರವು ದುರ್ಬೋಧವಾದುದರಿಂದ ನಿರರ್ಥಕವೆಂದೇ ತಿಳಿಯಬೇಕು. ಇಲ್ಲವೇ ರಜ್ಜು ಸರ್ಪ ದೃಷ್ಟಾಂತವು ವೇದಾಂತ ಶಾಸ್ತ್ರದಲ್ಲಿ ಗುತ್ತಿಗೆದಾರನಂತಿದೆ. ಗುತ್ತಿಗೆದಾರನು ಬೇಕಾದ ಪದಾರ್ಥಗಳನ್ನು ಆಯಾ ಕಾಲದಲ್ಲಿ ಕೊಡುವಂತೆ ರಜ್ಜು ಸರ್ಪ ದೃಷ್ಟಾಂತವೂ ಸಹ ಆಯಾ ಪ್ರಸಂಗದಲ್ಲಿ ವೇದಾಂತ ಶಾಸ್ತ್ರದ ಅರ್ಥ ನಿರ್ವಾಹವನ್ನು ಮಾಡುತ್ತದೆ. ಆದುದರಿಂದ ರಜ್ಜು ಸರ್ಪ ದೃಷ್ಟಾಂತದ ಸಂಗತಿಯು ಸ್ಪಷ್ಟವಾಗುವುದು ಬಹಳ ಅಗತ್ಯವಾಗಿದೆ. ಆದು ಇಲ್ಲಿ ಶಕ್ತ್ಯಾನುಸಾರ ಸಂಕ್ಷೇಪವಾಗಿ ವಿವರಿಸಲ್ಪಟ್ಟಿದೆ.

ಓಂ ತತ್ಸತ್ ಪರಬ್ರಹ್ಮಾರ್ಪಣಮಸ್ತು॥

**ಓಂ ಶಾಂತಿಃ ಶಾಂತಿಃ ಶಾಂತಿಃ**

ಓಂ

ನಮೋ ಭಗವತೇ ಶಂಕರಾನಂದಾಯ

# ಶ್ರೀ ವಿಚಾರ ಸಾಗರ ಐದನೇ ತರಂಗ

ಗುರು-ವೇದ ಮೊದಲಾದುವುಗಳಲ್ಲಿ ವ್ಯಾವಹಾರಿಕತೆಯ ಪ್ರತಿಪಾದನೆ ಹಾಗೂ ಮಧ್ಯಮ ಅಧಿಕಾರಿಯ ಸಾಧನ ನಿರೂಪಣ.

" ವೇದ ಗುರುಗಳು ಸತ್ಯವಾಗಿದ್ದರೂ, ಮಿಥ್ಯೆಯಾಗಿದ್ದರೂ
ಅದ್ವೈತ ಸಿದ್ಧಿಯಾಗಲಾರದು. "

ಹಿಂದೆ ನಾಲ್ಕನೆ ತರಂಗದಲ್ಲಿ "ಗುರುಮುಖದಿಂದ ಶ್ರವಣ ಮಾಡಿದ ವೇದ ವಾಕ್ಯಗಳಿಂದಲೇ ಅದ್ವೈತ ಬ್ರಹ್ಮದ ಸಾಕ್ಷಾತ್ಕಾರವಾಗುತ್ತದೆ" ಎಂದು ಹೇಳಿದ್ದನ್ನು ಕೇಳಿ ಎರಡನೇ ಅದೃಷ್ಟಿ ಎಂಬ ಶಿಷ್ಯನು ಶಂಕಿಸುವುದೇನೆಂದರೆ ವೇದ ಮತ್ತು ಗುರುಗಳು ಸತ್ಯವಾಗಿದ್ದರೆ ಅದ್ವೈತದ ಹಾನಿಯೂ, ಅಸತ್ಯವಾಗಿದ್ದರೆ ಪುರುಷಾರ್ಥದ ಪ್ರಾಪ್ತಿಯೂ ಆಗಲಾರದು. ಎರಡು ಪ್ರಕಾರದಿಂದಲೂ ವೇದ ಗುರುಗಳ ದ್ವಾರಾ ಅದ್ವೈತ ಜ್ಞಾನವುಂಟಾಗಲಾರದು.

## ಅದೃಷ್ಟಿರುವಾಚ

ದೋಹಾ – ವೇದ ಗುರು ಜೊ ಮಿಥ್ಯಾ ಕಹಿಯೇ,
ತಿನತೈ ಭವ–ದುಃಖ ನಸ್ಯೊ ನ ಚಾಹಿಯೆ ।
ಜೈಸೆ ಮಿಥ್ಯಾ ಮರುಥಲ ಕೊ ಜಲ,
ಪ್ಯಾಸ ನಾಸ ಕೊ ನಹಿ ತಾ ಮೈ ಬಲ ॥ ೧ ॥

ಸತ್ಯ ವೇದ-ಗುರು ಕಹ್ಯೆ ತು ದ್ವೈತ-
ಭಯೋಗಯೊ ಸಿದ್ಧಾಂತ ಅದ್ವೈತ ।
ಯುಂ ಸಂಕರಮತ ಪೇಖಿ ಅಸುದ್ಧಾ,
ತಜ್ಯೋ, ಸಕಲ ಮಧ್ವಾದಿ ಪ್ರಬುದ್ಧಾ ॥ ೨ ॥

ಯಹ ಸಂಕಾ ಭಗವನ್ ಮುಹಿ ಉಪಜೈ,
ಉತ್ತರ ದೇಹು ದಯಾಲ ಕುಪಿಜೈ ।
ಗುರುಬೋಲೆ ಸಿಷಕೀ ಸುನಿಬಾನೀ
ಸಂಕರಕೊ ಮತ ಪರಮ ಪ್ರಮಾನೀ ॥ ೩ ॥

ತಾತ್ಪರ್ಯ – ವೇದ ಗುರುಗಳು ಸತ್ಯವೆಂಬ ಪಕ್ಷದಲ್ಲಿ ಅದ್ವೈತ ಹಾನಿಯು ತಪ್ಪಿದ್ದಲ್ಲ. ಯಾಕೆಂಧರೆ ಪರಮಾತ್ಮ ಒಂದು ಸತ್ಯ. ವೇದ ಗುರುಗಳು ಮತ್ತೊಂದು ಸತ್ಯ. ಈ ರೀತಿಯಾಗಿ ಎರಡು ಸತ್ಯ ಪದಾರ್ಥ ಗಳಾದರೆ ಅದ್ವೈತಕ್ಕೆ ಹಾನಿ ಬರಲಿಲ್ಲವೇ ? ಇನ್ನು ವೇದ ಗುರುಗಳು ಮಿಥ್ಯೆ ಯಾದರೆ ಮಿಥ್ಯೆಯಾದ ಮೃಗಜಲದಿಂದ ನೀರಡಿಕೆಯು ನಾಶವಾಗದಂತೆ ಮಿಥ್ಯಾ ವೇದ-ಗುರುಗಳಿಂದ ಸಂಸಾರ ಬಂಧವು ನಾಶವಾಗಲಾರದು ಎಂಬ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು ಶಿಷ್ಯನು ಪ್ರಶ್ನೆಮಾಡುತ್ತಾನೆ.

ಹೇ ಗುರುಗಳೇ ! ಈ ಕಾರಣದಿಂದ ಪ್ರಬುದ್ಧರಾದ ಮಧ್ವಾಚಾರ್ಯ ಮೊದಲಾದವರು ಅಶುದ್ಧವಾದ ಶಂಕರ ಮತವಾದ ಅದ್ವೈತವನ್ನು ತ್ಯಜಿಸಿ ದಂತೆ ಕಾಣುತ್ತದೆ. ಹೇ ಭಗವನ್ ! ಈ ಶಂಕೆಯು ನನಗೆ ಉಂಟಾಗಿದೆ. ದಯಮಾಡಿ ನನ್ನ ಶಂಕೆಯು ನಿವಾರಣೆಯಾಗುವಂತೆ ಉತ್ತರವನ್ನು ಹೇಳಿ ನನ್ನನ್ನು ಧನ್ಯನನ್ನಾಗಿ ಮಾಡಿರಿ.

ಶಿಷ್ಯನ ಆಕ್ಷೇಪಣೆಯನ್ನು ಕೇಳಿ, ಶಂಕರ ಮತವೇ ಪರಮ ಪ್ರಮಾಣ ವೆಂದೂ, ಮಧ್ವಾದಿಗಳ ಮತವು ಭೇದ ಪ್ರತಿಪಾದಕವಾದುದರಿಂದ ಅಪ್ರಮಾಣ ವಾಗಿದೆಯೆಂದೂ ಹೇಳುತ್ತಾರೆ. ಹೇಗೆಂದರೆ :

ದೋಹಾ – ಚಾರಿಯಾರ ಮಧ್ವಾದಿಕ ಜೆ ಹೈ,
ವೇದ–ವಿರುದ್ಧ ಕಹತ ಸಬ ತೆ ಹೈಂ ।
ಯಾಮೈ ವ್ಯಾಸ–ವಚನ ಸುನಿ ಲೀಜೈ,
ಸಂಕರ–ಮತಹಿ ಪ್ರಮಾನ ಕರೀಜೈ ॥ ೪ ॥

ಅರ್ಥ – ಮಧ್ವಾಚಾರ್ಯ ಮೊದಲಾದ ನಾಲ್ಕು ಜನ ಆಚಾರ್ಯರು ಅಂದರೆ ಶ್ರೀ ರಾಮಾನುಜಾಚಾರ್ಯ, ಶ್ರೀ ಮಧ್ವಾಚಾರ್ಯ, ಶ್ರೀ ವಲ್ಲಭಾಚಾರ್ಯ, ಶ್ರೀ ನಿಂಬರ್ಕಾಚಾರ್ಯರು ಇವರೆಲ್ಲರೂ ವೇದ ವಿರುದ್ಧವಾಗಿಯೇ ಪ್ರತಿಪಾದಿಸಿದ್ದಾರೆ ಈ ವಿಷಯದಲ್ಲಿ ಶ್ರೀ ವ್ಯಾಸಭಗವಂತನ ಉಕ್ತಿಯನ್ನು ಕೇಳಿದರೆ ಶ್ರೀ ಶಂಕರಾಚಾರ್ಯರ ಮತವೇ ಪ್ರಮಾಣವೆಂದು ಸಿದ್ಧವಾಗುತ್ತದೆ.

ಶ್ರೀ ವೇದವ್ಯಾಸರು ವಾಯು-ಕೂರ್ಮಾದಿ ಪುರಾಣಗಳಲ್ಲಿ ಹೀಗೆ ಹೇಳಿದ್ದಾರೆ :

ದೋಹಾ – ಕಲಿಮೆ ವೇದ–ಅರ್ಥ ಬಹು ಕರಿಹೈ,
ಶ್ರೀ ಸಂಕರ ಸಿವ ತಬ ಅವತಾರಿ ಹೈ ।
ಜೈನ–ಬುದ್ಧ–ಮತ ಮೂಲ ಉಖಾರೈ,
ಗಂಗಾತೈ ಪ್ರಭು–ಮೂರ್ತಿ ನಿಕಾರೈ ॥ ೫ ॥

ಅರ್ಥ – ಕಲಿಯುಗದಲ್ಲಿ ಅನೇಕ ಜನ ವಾದಿಗಳು ಉತ್ಪನ್ನರಾಗಿ ವೇದಾರ್ಥವನ್ನು ಅನೇಕ ವಿಧವಾಗಿ ಪ್ರತಿಪಾದಿಸಿ, ಜಿಜ್ಞಾಸುಗಳಿಗೆ ದಾರಿ ಕಾಣದ ಪ್ರಸಂಗ ಬಂದಾಗ ಶ್ರೀ ಕೈಲಾಸಪತಿ ಶಂಕರ ಪರಮಾತ್ಮನು ಶ್ರೀ ಶಂಕರಾಚಾರ್ಯನೆಂಬ ನಾಮದಿಂದ ಅವತರಿಸಿ, ಬದರಿನಾಥ ಭಗವಂತನ ಮೂರ್ತಿಯನ್ನು ದೇವನದಿಯಾದ ಗಂಗೆಯಿಂದ ತೆಗೆದು ಪೂರ್ವಸ್ಥಾನದಲ್ಲಿ ಸ್ಥಾಪಿಸಿ, ಮತ್ತು ಜೈನ ಬೌದ್ಧ ಮೊದಲಾದ ದ್ವೈತಮತಗಳನ್ನು ಖಂಡಿಸಿ, ವೇದಗಳ ಯಥಾರ್ಥ ಜ್ಞಾನವನ್ನು ಪ್ರತಿಪಾದಿಸಿದ್ದಾರೆ ಎಂಬ ವ್ಯಾಸ ವಚನದಿಂದ ಶ್ರೀ ಶಂಕರ ಮತವೇ ಪ್ರಮಾಣ, ಮಧ್ವಾದಿಗಳ ಮತವು ಅಪ್ರಮಾಣವೆಂದು ಸ್ಪಷ್ಟವಾಗುತ್ತದೆ.

ದೋಹಾ – ಜೈಸೆ ಭಾನು-ಉದಯ ಉಜಿಯಾರೋ,
ದೂರೀಕರೆ ಜಗಮ್ಯೆಂ ಅಂಧಿಯಾರೋ ।
ಸಬೈವಸ್ತು ಜ್ಯೋಂ-ಕೀ-ತ್ಯಂ ಭ್ಯಾಸೈ
ಸಂಸೈ ಔರ ವಿಪರ್ಯಯ ನಾಸೈ ॥ ೬ ॥

ಅರ್ಥ – ಶ್ರೀ ಶಂಕರರ ಮತವನ್ನು ಅನುಸರಿಸುವುದರಿಂದ, ಜಗತ್ತನ್ನು ವ್ಯಾಪಿಸಿದ ಅಂಧಕಾರವು ಸೂರ್ಯೋದಯವಾದ ಕೂಡಲೇ ನಾಶವಾಗಿ ಸರ್ವ ಪದಾರ್ಥಗಳು ಯಥಾರ್ಥವಾಗಿ ಕಾಣುವಂತೆ, ಪ್ರಮಾಣಗತ ಪ್ರಮೇಯಗತ ಎಂಬ ಸಂಶಯಗಳೂ, ವಿಪರೀತ ಬುದ್ಧಿಯೆಂಬ ವಿಪರ್ಯಯವೂ ನಾಶವಾಗುತ್ತವೆ

ದೋಹಾ – ವೇದ-ಅರ್ಥಮೆ ತ್ಯಂ ಅಜ್ಞಾನಾ,
ನಸಿ ಹೈ ಶ್ರೀ ಸಂಕರ-ವ್ಯಾಖ್ಯಾನಾ ।
ಕರಿ ಹೈ ತೆ ಉಪದೇಶ ಯಥಾರಥ,
ನಾಸಹಿ ಸಂಶಯ ಅರು ಅಯಾಥಾರಥ ॥ ೭ ॥

ಅರ್ಥ – ವೇದಗಳ ಅರ್ಥದ ವಿಷಯದಲ್ಲಿ ಇರುವ ಅಜ್ಞಾನವು ಶ್ರೀ ಶಂಕರಭಾಷ್ಯದಿಂದ ದೂರವಾಗುವುದು ಮತ್ತು ಯಥಾರ್ಥವಾದ ಅರ್ಥವು ಸುಸ್ಪಷ್ಟವಾಗುವುದು ಸಂಶಯವೇ ಆಗಲಿ, ಭ್ರಾಂತಿ ಜ್ಞಾನವೇ ಆಗಲಿ ಹೇಳಹೆಸರಿಲ್ಲದಂತೆ ಆಗುವುದು.

ಯದ್ಯಪಿ ಉಪನಿಷತ್ತು, ಭಗವದ್ಗೀತಾ, ಬ್ರಹ್ಮಸೂತ್ರಗಳೆಂಬ ಪ್ರಸ್ಥಾನತ್ರಯಕ್ಕೆ ಶ್ರೀ ಮಧ್ವಾಚಾರ್ಯ ಮೊದಲಾದವರು ಬಲವಂತವಾಗಿ ಅರ್ಥವನ್ನು ತಮ್ಮ ಮನಸ್ಸಿಗೆ ಬಂದಂತೆ ಜಿಗ್ಗಾಡಿ, ಸ್ವಮತಾನುಸಾರವಾಗಿ ವ್ಯಾಖ್ಯಾನ ಮಾಡಿದ್ದಾರೆ. ತಥಾಪಿ ಶ್ರೀ ವೇದವ್ಯಾಸರ ವಚನದಿಂದ ಶ್ರೀ ಶಂಕರ ಕೃತ ವ್ಯಾಖ್ಯಾನವೇ ಸಮೀಚೀನವಾಗಿದೆ ಎಂದು ಕಂಡುಬರುತ್ತದೆ.

ದೋಹಾ – ಔರ ಜು ವೇದ-ಅರ್ಥಕು ಕರಿ ಹೈ,
ತೆ ಸರ ವೃಥಾ ಪರಿಶ್ರಮ ಧರಿ ಹೈ ।
ಯಉ ಪುರಾನ ಮೈ ವ್ಯಾಸ ಕಹಿ ಹೈ,
ಸಂಕರ-ಮತ ಮೈಮಾನ ಯಹಿ ಹೈ ॥ ೮ ॥

ಅರ್ಥ – ಶ್ರೀ ಶಂಕರಾಚಾರ್ಯರ ನಂತರ ಯಾರು ತಮ್ಮ ಸ್ವಬುದ್ಧಿಯಿಂದ ವೇದಕ್ಕೆ ಅರ್ಥವನ್ನು ಮಾಡುತ್ತಾರೋ, ಅವರ ಶ್ರಮವು ನಿಷ್ಫಲವೆಂದು ತಿಳಿಯಬೇಕು – ಎಂದು ಶ್ರೀ ವ್ಯಾಸ ಮಹರ್ಷಿಗಳು ತಮ್ಮ ಅನೇಕ ಪುರಾಣ ಗ್ರಂಥಗಳಲ್ಲಿ ಹೇಳಿದ್ದಾರೆ. ಈ ಕಾರಣದಿಂದಲೂ ಶ್ರೀ ಶಂಕರರ ಅದ್ವೈತ ಮತವು ಶ್ರೇಷ್ಠವೆಂದು ತಿಳಿಯಬೇಕು.

ದೋಹಾ – ಮಧ್ವಾದಿಕಕೊ ಮತ ನ ಪ್ರಮಾನೀ,
ಯಹ ಹಮ ವ್ಯಾಸ-ವಚನ ತೈ ಜಾನೀ ।
ಔರ ಪ್ರಮಾನ ಕಹು ಸೊ ಸುನೀಯೆ,
ವಾಲ್ಮೀಕಿ ರಿಷಿ ಮುಖ್ಯ ಜು ಗಿನೀಯೆ ॥ ೯ ॥

ಅರ್ಥ – ಶ್ರೀ ವ್ಯಾಸ ಮಹರ್ಷಿಗಳ ಈ ವಚನದಿಂದ ಮಧ್ವ ಮೊದಲಾದ ದ್ವೈತಾಚಾರ್ಯರ ಮತಗಳು ಪ್ರಮಾಣವಲ್ಲವೆಂದು ಸಿದ್ಧವಾದಂತಾಯಿತು. ಇನ್ನು ಇದರಂತೆ ಶ್ರೀ ವಾಲ್ಮೀಕಿ ಋಷಿಯು ಮಾಡಿದ ಗ್ರಂಥದಿಂದಲೂ ಇದೇ ವಿಷಯವು ನಿರ್ಣಯವಾಗುತ್ತದೆ.

ದೋಹಾ – ತಿನ ಮುನಿ ಕಿಯೊ ಗ್ರಂಥ ವಾಸಿಷ್ಟಾ,
ತಾಮೈ ಮತ ಅದ್ವೈತ ಸ್ಪಷ್ಟಾ ।
ಶ್ರೀ ಸಂಕರ ಅದ್ವೈತಹಿ ಗಾನ್ಯೊ,
ತಿನಕೊ ಮತ ಯಹ ಹೇತು ಪ್ರಮಾನ್ಯೊ ॥ ೧೦ ॥

ಅರ್ಥ – ಆದಿ ಕವಿಯೂ ಸರ್ವಜ್ಞನೂ ಆದ ವಾಲ್ಮೀಕಿ ಮಹರ್ಷಿಯಿಂದ ಉತ್ತರ ರಾಮಾಯಣ ವಾಸಿಷ್ಟವೆಂಬ ಗ್ರಂಥವು ರಚಿಸಲ್ಪಟ್ಟಿದೆ. ಆ

ಗ್ರಂಥದಲ್ಲಿ ಅದ್ವೈತ ಮತದಲ್ಲಿ ಪ್ರಧಾನವಾದ ದೃಷ್ಟಿಸೃಷ್ಟಿವಾದವೇ ಅನೇಕ ಇತಿಹಾಸ ರೂಪವಾಗಿ ಪ್ರತಿಪಾದಿಸಲ್ಪಟ್ಟಿದೆ

" ಭೇದವಾದವು ಅಪ್ರಮಾಣ್ಯ "

ದೋಹಾ – ವಾಲಮೀಕ–ರಿಷಿ–ವಚನ–ವಿರುದ್ಧಂ ।
ಭೇದವಾದ ಲಖಿ ಸಕಲ ಅಸುದ್ಧಂ ॥ ೧೧ ॥

ಅರ್ಥ – ಹೇ ಶಿಷ್ಯನೆ ! ಈ ವಿಧವಾಗಿ ವಾಲ್ಮೀಕಿ ಋಷಿಗಳ ವಚನಾನುಸಾರವಾಗಿಯೂ ಅದ್ವೈತ ಮತವೇ ಪ್ರಮಾಣ, ವಾಲ್ಮೀಕಿ ಋಷಿಗಳ ವಚನಕ್ಕೆ ವಿರುದ್ಧವಾದ ಭೇದ ಮತವು ಅಪ್ರಮಾಣವೆಂದು ತಿಳಿ.

ಮೇಲ್ಕಂಡ ಹನ್ನೊಂದು ಪದ್ಯಗಳಿಂದ ಹೊರಟ ಭಾವಾರ್ಥವೇನೆಂದರೆ, ಶ್ರೀ ವೇದವ್ಯಾಸ ಮಹರ್ಷಿಗಳು ತಮ್ಮ ಕೂರ್ಮ–ವಾಯು ಇತ್ಯಾದಿ ಪುರಾಣಗಳಲ್ಲಿ ''ಕಲಿಕಾಲದಲ್ಲಿ ಜನರು ವೇದಾರ್ಥವನ್ನು ಅನೇಕ ವಿಧವಾಗಿ ಮಾಡಿದಾಗ ಪರಮ ಕೃಪಾಳುವಾದ ಪರಶಿವನು ಶ್ರೀ ಶಂಕರಾಚಾರ್ಯ ರೂಪದಿಂದ ಅವತರಿಸಿ, ಶ್ರೀ ಬದರೀನಾಥನ ಮೂರ್ತಿಯನ್ನು ದೇವನದಿಯಾದ ಭಾಗೀರಥಿಯಿಂದ ತೆಗೆದು ಸ್ವಸ್ಥಾನವಾದ ಬದರಿಕಾಶ್ರಮದಲ್ಲಿ ಸ್ಥಾಪಿಸಿ, ಜೈನ ಬುದ್ಧ ಮೊದಲಾದ ದ್ವೈತ ಮತಗಳನ್ನು ಖಂಡಿಸಿ ವೇದಗಳಿಗೆ ಯಥಾರ್ಥವಾದ ಅರ್ಥವನ್ನು ಮಾಡುವನು'' ಎಂದು ಹೇಳಿರುವರು. ಈ ಶ್ರೀ ವೇದವ್ಯಾಸರ ವಚನದಿಂದ ಶ್ರೀ ಶಂಕರ ಮತವೇ ಪರಮ ಪ್ರಮಾಣವೆಂದು ಸ್ಪಷ್ಟವಾಗುತ್ತದೆ ಮತ್ತು ಅದೇ ಶ್ರೀ ವೇದವ್ಯಾಸ ಮಹರ್ಷಿಗಳ ವಚನದಿಂದ ಶ್ರೀ ಮಧ್ವಾಚಾರ್ಯರೇ ಮೊದಲಾದವರ ಭೇದ ಮತವು ಅಪ್ರಮಾಣವೆಂದು ತಿಳಿದು ಬರುತ್ತದೆ ಮತ್ತು ಉಪನಿಷತ್ತು, ಗೀತಾ, ಬ್ರಹ್ಮಸೂತ್ರ ಇವು ಪ್ರಸ್ಥಾನತ್ರಯವೆಂದು ಹೇಳಿಸಿಕೊಳ್ಳುತ್ತವೆ. ಈ ಪ್ರಸ್ಥಾನತ್ರಯಕ್ಕೆ ಶ್ರೀ ಮಧ್ವಾಚಾರ್ಯರೇ ಮೊದಲಾದ ಆಚಾರ್ಯರು ತಮ್ಮ ತಮ್ಮ ಬುದ್ಧ್ಯನುಸಾರವಾಗಿ ತಮ್ಮ ತಮ್ಮ ಮತಕ್ಕೆ ಅನುಕೂಲವಾಗುವಂತೆ ಅರ್ಥ ಮಾಡಿರುತ್ತಾರೆ. ಶ್ರೀ ವೇದವ್ಯಾಸ ಮಹರ್ಷಿಗಳ ವಚನಾನುಸಾರ ಶ್ರೀ ಶಂಕರಕೃತ ಅದ್ವೈತ ಮತವೇ ಯಥಾರ್ಥವೆಂದು ಬೋಧವಾಗುತ್ತದೆ.

ಮತ್ತೊಂದು ವಿಷಯ : ಸರ್ವಜ್ಞರೂ ಆದಿಕವಿಗಳೂ ಆದ ಶ್ರೀ ವಾಲ್ಮೀಕಿ ಋಷಿಗಳು ಉತ್ತರ ರಾಮಾಯಣ ವಾಸಿಷ್ಟವೆಂಬ ಗ್ರಂಥವನ್ನು ರಚಿಸಿರುವರು. ಅದರಲ್ಲಿ ಅದ್ವೈತ ಶಾಸ್ತ್ರದಲ್ಲಿ ಪ್ರಧಾನವಾದ ದೃಷ್ಟಿ-ಸೃಷ್ಟಿ ವಾದವನ್ನು ಅನೇಕ ಇತಿಹಾಸಗಳಿಂದ ಪ್ರತಿಪಾದನ ಮಾಡಿರುತ್ತಾರೆ ಈ ಶ್ರೀ ವಾಲ್ಮೀಕಿ ಋಷಿಗಳ ಅಭಿಪ್ರಾಯದಂತೆ ಅದ್ವೈತ ಮತವು ಪ್ರಮಾಣ ವೆಂತಲೂ, ಆದಕ್ಕೆ ವಿರುದ್ಧವಾದ ದ್ವೈತ ಮತಗಳೆಲ್ಲವೂ ಅಪ್ರಮಾಣವೆಂತಲೂ ಸ್ಪಷ್ಟವಾಗುತ್ತದೆ

ಈ ಪ್ರಕಾರ ಸರ್ವಜ್ಞರೂ ಮುನಿಗಳೂ ಋಷಿಗಳೂ ಆದವರ ವಚನ ದಂತೆ ದ್ವೈತ ಮತವು ಅಪ್ರಮಾಣವಾಗಿದೆ ಮತ್ತು ಯುಕ್ತಿಯಿಂದಲೂ ಸಹ ಭೇದವಾದವು ವಿರುದ್ಧವಾಗಿದೆ ಎಂಬ ವಿಷಯವನ್ನು ಖಂಡನ-ಖಂಡಖಾದ್ಯ ಎಂಬ ಗ್ರಂಥದಲ್ಲಿ ಶ್ರೀ ಹರ್ಷ ಮೊದಲಾದವರು ಇದೇ ರೀತಿ ಪ್ರತಿಪಾದನ ಮಾಡಿರುತ್ತಾರೆ. ಅವರು ಮಾಡಿದ ಯುಕ್ತಿಗಳು ಕಠಿಣವಾದವುಗಳಾದ್ದರಿಂದ ಇಲ್ಲಿ ಉಲ್ಲೇಖಿಸಿರುವುದಿಲ್ಲ. ಅಗತ್ಯವಿದ್ದವರು ಅಲ್ಲಿಯೇ ನೋಡಿಕೊಳ್ಳ ಬಹುದು.

" ಭೇದವಾದದ ತಿರಸ್ಕಾರ "

ಸಂಬಂಧ – ಮುನಿ ವಚನಗಳಿಗೆ ವಿರೋಧದಿಂದ ಭೇದ ಮತದಲ್ಲಿ ಜೈನ ಮತದಂತೆ ಅಪ್ರಮಾಣ್ಯ ನಿಶ್ಚಯವಾದ ಮೇಲೆ ಆಸ್ತಿಕರಾದ ಅಧಿಕಾರಿ ಗಳಿಗೆ ಯುಕ್ತಿಯಿಂದ ಖಂಡನ ಮಾಡುವುದರಲ್ಲಿ ಅಪೇಕ್ಷೆಯಿಲ್ಲ ಎಂಬ ವಿಷಯವು ಕೆಳಗಿನ ಮೂರು ಚೌಪಾಯಿಗಳಿಂದ ಪ್ರತಿಪಾದನೆ ಮಾಡಲ್ಪಡು ತ್ತದೆ.

ದೋಹಾ – ಕಿಯೊ ಗ್ರಂಥ ಶ್ರೀಹರ್ಷ ಜು ಖಂಡನ,
ಖಂಡನ–ಭೇದ ಏಕತಾ–ಮಂಡನ ।
ಲಿಖ್ಯೊ ಯಹಾಂ ಯಹ ಬಹು ವಿಸ್ತಾರಾ,
ಭೇದವಾದ ನಹೀ ಯುಕ್ತಿ ಸಹಾರಾ ॥ ೧೨ ॥

ಅರ್ಥ – ಶ್ರೀ ಹರ್ಷನೆಂಬ ಪಂಡಿತನು ತಾನು ರಚಿಸಿದ ಖಂಡನ-ಖಂಡ ಖಾದ್ಯವೆಂಬ ಗ್ರಂಥದಲ್ಲಿ ದ್ವೈತ ಮತ ಖಂಡನವನ್ನೂ, ಅದ್ವೈತ ಮತ ಮಂಡನವನ್ನೂ ಬಹಳ ವಿಸ್ತಾರವಾಗಿ ಮಾಡಿದ್ದಾನೆ ಅವನಿಗೆ ಭೇದವಾದಿ ಗಳ ಯುಕ್ತಿಯು ಸಹಿಸಲಿಲ್ಲ

ಪ್ರಶ್ನೆ – ಶ್ರೀ ಹರ್ಷ ಪಂಡಿತನೆಂದರೆ ಯಾರು ?

ಉತ್ತರ – ಇವನ ಪೂರ್ಣ ಹೆಸರು ಶ್ರೀ ಹರ್ಷಮಿಶ್ರಾಚಾರ್ಯ ಇವನು ಸರಸ್ವತಿ ಅನುಗ್ರಹಕ್ಕೆ ಪಾತ್ರನಾದವನು. ಇವನು ಅಂದಾಜು ಈಗ ಎಂಟು ನೂರು ವರ್ಷಕ್ಕಿಂತ ಪೂರ್ವದಲ್ಲಿ ಪಂಡಿತ ವೃಷಭನೆಂಬ ಬಿರುದುಳ್ಳವನಾಗಿ ದ್ದನು. ಇವನು ಕನ್ನೋಜ ಪ್ರಾಂತದ ಮಹಾರಾಜನಾದ ಜಯಚಂದನ ಸಭಾಪಂಡಿತನಾಗಿದ್ದನು. ಇವನು ೮–೯ ಗ್ರಂಥಗಳನ್ನು ರಚಿಸಿದ್ದಾನೆಂದು ತಿಳಿಯುತ್ತದೆ. ಇವುಗಳಲ್ಲಿ ವೇದಾಂತ ವಿಷಯಕ್ಕೆ ಸಂಬಂಧಪಟ್ಟ ಗ್ರಂಥವು ಖಂಡನ–ಖಂಡಖಾದ್ಯ. ಇದರಲ್ಲಿ ಪ್ರಬಲ ಯುಕ್ತಿಗಳಿಂದ ಭೇದವಾದ ವನ್ನು ಧಿಕ್ಕರಿಸಿದ್ದಾನೆ.

ದೋಹಾ – ಔರ ಭೇದ–ಧಿಕ್ಕಾರ–ಗ್ರಂಥಾ,
ತಹಂ ಭೇದ–ಖಂಡನ–ಕೊ ಪಂಥಾ ।
ಕಠಿನ ದುರೂಹ ತರ್ಕ ಹೈ ತೆ ಅತಿ,
ನಹಿ ಪೈರಿಹಿ ಸಿಷ ತಿನಮ್ಹೈ ತೆ ಮತಿ ॥ ೧೩ ॥

ಅರ್ಥ – ಭೇದ ಧಿಕ್ಕಾರವೆಂಬ ಗ್ರಂಥದಲ್ಲಿಯ ಭೇದ ಖಂಡನೆಗಳ ಪಂಥವು ಅತಿ ಕಠಿಣವಾದದ್ದು. ತಿಳಿಯಲು ಅಸಾಧ್ಯವಾದದ್ದು. ಆದ್ದರಿಂದ ಶಿಷ್ಯನೆ ! ನಿನ್ನ ಬುದ್ಧಿಯು ಅದನ್ನು ನಿಶ್ಚಯಿಸಲಾರದು.

ಪ್ರಶ್ನೆ – ಮೇಲಿನ ಪದ್ಯದಲ್ಲಿ ಬಂದಿರುವ "ದುರೂಹ ತರ್ಕ"ವೆಂಬ ಪದಕ್ಕೆ ಅರ್ಥವೇನು ?

ಉತ್ತರ – ಯಾವನ ಬುದ್ಧಿಯಲ್ಲಿ ಬಹು ಶ್ರಮದಿಂದ ಕಲ್ಪನೆ ಉಂಟಾ ಗುವುದೋ ಅಂಥ ಪ್ರತಿವಾದಿಯ ಅನಿಷ್ಟ ಸಂಪಾದನ ರೂಪ ತರ್ಕ ಯುಕ್ತಿಗೆ ದುರೂಹ ತರ್ಕವೆನ್ನುತ್ತಾರೆ.

**ದೋಹಾ – ಯಾತೈ ಕಹೀ ನ ತೇ ತುಹಿ ಉಕ್ತಿ,**
ಕರ್‍ಯೈ ಜು ಭೇದಹಿ ಖಂಡನಯುಕ್ತಿ ।
ಅಪ್ರಮಾನ ಮತ ಲಖ್ಯೋ ಜಬ,
ಖಂಡನ ಮೈ ಯುಕ್ತಿ ನ ಚಹಿಯತ ತಬ ॥ ೧೪ ॥

ಅರ್ಥ – ಈ ಕಾರಣದಿಂದ ಆ ಉಕ್ತಿಯನ್ನು ನಿನಗೆ ಹೇಳಲಿಲ್ಲ ಭೇದ ಖಂಡನದಲ್ಲಿ ಭೇದ ಮತವು ಅಪ್ರಮಾಣವೆಂದು ಯುಕ್ತಿ ಯುಕ್ತವಾಗಿ ಸಿದ್ಧವಾದ ಮೇಲೆ ಖಂಡನೆ ಮಾಡುವ ಯುಕ್ತಿಗಳ ಅಗತ್ಯವೇಕೆ ?

ಇನ್ನು ಮುಂದೆ ಪರಮ ಪ್ರಮಾಣವಾದ ವೇದವಚನದಿಂದಲೂ ಭೇದ ಮತವು ಅಪ್ರಮಾಣವೆಂದು ಪ್ರತಿಪಾದಿಸಲ್ಪಡುತ್ತದೆ.

ದೋಹಾ – ಭೇದ ಪ್ರತೀತಿ ಮಹಾ ದುಖದಾತಾ,
ಯಮ ಕರಸ್ಯೈ ಯಹ ಕೇರತ ತಾತಾ ।
ಯಾತೈ ಭೇದವಾದ ಚಿತ ತ್ಯಾಗಹು,
ಇಕ ಅದ್ವೈತವಾದ ಅನುರಾಗಹು ॥ ೧೫ ॥

ಅರ್ಥ – "ಭೇದ ಪ್ರತೀತಿಯು ಮಹಾ ದುಃಖಕ್ಕೆ ಕಾರಣ"ವೆಂದು ಕಠೋಪನಿಷತ್ತಿನಲ್ಲಿ ಯಮಧರ್ಮರಾಯನು ಅಧಿಕಾರಿಯಾದ ನಚಿಕೇತನಿಗೆ ಬೋಧಿಸಿದ್ದಾನೆ ಆದ್ದರಿಂದ ಭೇದವಾದವನ್ನು ಮನಸಾ ತ್ಯಜಿಸಿ ಅದ್ವೈತವಾದದಲ್ಲಿ ಪ್ರೀತಿಯುಳ್ಳವನಾಗು

ಶ್ರುತಿಯಾಂ ಕಹತೀ ಹೈ – "ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವಪಶ್ಯತಿ" । "ದ್ವಿತೀಯಾದ್ ವೈಭಯಂ ಭವತಿ" "ಅನ್ಯೋಽಸಾವನ್ಯೋಽಹಮಸ್ಮೀತಿ" "ನ ಸವೇದಯಥಾಪಶುರೇವ ಸ ದೇವಾನಾಮ್"।

— ಶೃತಿ ವಚನಗಳು —

೧. "ಮೃತ್ಯೋಃ ಸ ಮೃತ್ಯು ಮಾಪ್ನೋತಿ, ಯ ಇಹ ನಾನೇವ ಪಶ್ಯತಿ".

ಅರ್ಥ – ಯಾವನು ಏಕನಾದ ಪರಮಾತ್ಮನಲ್ಲಿ ನಾನತ್ವವನ್ನು ನೋಡುವನೋ ಅವನು ಮೃತ್ಯುವಿನಿಂದ ಮೃತ್ಯುವನ್ನು ಪಡೆಯುತ್ತಾನೆ.

೨. "ದ್ವಿತೀಯಾದ್ವೈ ಭಯಂ ಭವತಿ."

ಎಲ್ಲಿ ಎರಡೆಂಬ ಬುದ್ಧಿ ಇರುವುದೋ ಅಲ್ಲಿ ಭಯವು ತಪ್ಪಿದ್ದಲ್ಲ.

೩. "ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ ಯಥಾ ಪಶುರೇವ ಸ ದೇವಾನಾಮ್."

ಜ್ಞೇಯ ಇಲ್ಲವೆ ಧ್ಯೇಯವಾದ ಪರಮಾತ್ಮನನ್ನು ತನಗಿಂತ ಭಿನ್ನವೆಂದು ಯಾವನು ತಿಳಿಯುತ್ತಾನೋ, ಅವನು ದೇವಪಶುವೆಂದು ತಿಳಿಯಬೇಕು. ಅಂದರೆ ಯಕ್ಷ-ಭೂತ ಮೊದಲಾದ ಕ್ಷುದ್ರ ದೇವತೆಗಳಿಗೆ ಬಲಿಕೊಡುವುದಕ್ಕಾಗಿ ಪಶುವನ್ನು ತೆಗೆದುಕೊಂಡು ಹೋಗುವಾಗ ಆ ಪಶುವಿಗೆ ಅಭ್ಯಂಗನ ಸ್ನಾನವನ್ನು ಮಾಡಿಸಿ, ಅದಕ್ಕೆ ಮೃಷ್ಟಾನ್ನವನ್ನು ತಿನ್ನಿಸಿ, ಅದರ ಕೊರಳಲ್ಲಿ ಹೂವಿನ ಮಾಲಿಯನ್ನು ಹಾಕಿ, ಅದರ ಹಣೆಯಲ್ಲಿ ಕುಂಕುಮವನ್ನು ಅಂಟಿಸಿ, ಮಂಗಳವಾದ್ಯ ಸಮಾರಂಭದೊಂದಿಗೆ ತೆಗೆದುಕೊಂಡು ಹೋಗುತ್ತಾರೆ ಈ ತನ್ನ ಸಮಾರಂಭವನ್ನು ನೋಡಿ ಮೂಢ ಪಶುವು ತನ್ನ ಮನಸ್ಸಿನಲ್ಲಿ "ಈ ದಿನ ನನ್ನ ಮದುವೆ" ಎಂದು ಅಂದುಕೊಳ್ಳುತ್ತದೆಯೋ ವಿನಹ ಈ ದಿನ ನನ್ನ ಕಂಠ ಛೇದನವಾಗುತ್ತದೆಂದು ತಿಳಿಯುವುದಿಲ್ಲ. ಇಂಥಾ ಮೂಢ ಪಶುವನ್ನು ದೇವಪಶುವೆನ್ನುತ್ತಾರೆ.

ದೋಹಾ – ಜೋ ದ್ವಿತೀಯಕುಂ ಮತಿಮೈ ಧಾರೈ,
ಭಯ ತಾಕುಂ ಯಹ ವೇದಪುಕಾರೈ ।
ಜ್ಞೇಯ-ಧ್ಯೇಯ ಮೋತೈ ಕಛುಔರಾ,
ಲಖೈ ಸು ಪಶು ಯಹ ವೇದ-ಢಂಡೋರಾ ॥ ೧೬ ॥

ಅರ್ಥ – ಯಾವನು ಭೇದವಾದವನ್ನು ಮನಸ್ಸಿನಲ್ಲಿ ಧಾರಣೆ ಮಾಡುವನೋ, ಅವನಿಗೆ ಭಯವು ತಪ್ಪಿದ್ದಲ್ಲವೆಂತಲೂ, ತನಗಿಂತ ಜ್ಞೇಯ ಧ್ಯೇಯಗಳು ಅನ್ಯವಾಗಿರುವವೆಂದು ತಿಳಿದವನು ನಿಶ್ಚಯವಾಗಿ ದೇವಪಶುವೆಂತಲೂ ತಿಳಿ. ಇದೇ ಮೇಲಿನ ಶೃತಿಗಳ ಅರ್ಥ.

ದೋಹಾ – ಸಿಯು ಯಾತೈ ಮಧ್ವಾದಿಕ ಬಾನೀ,
ಸುನೀ ಸು ಬಿಸರಹ ಅತಿ ದುಖದಾನೀ ।
ದ್ವೈತ ವಚನ ತಬ ಹಿಯುಮೈ ಜೌಲಾ,
ಹ್ವೈ ಸಾಖಾತ್ ಅದ್ವೈತ ನ ತೌಲಾ ॥ ೧೭ ॥

ಅರ್ಥ – ಈ ಕಾರಣದಿಂದ ಎಲೈ ಶಿಷ್ಯನೇ ? ಮಧ್ವಾದಿಗಳ ದ್ವೈತ ವಚನವನ್ನು ಕೇಳಿದ ಕೂಡಲೆ ಮರೆತುಬಿಡು ಅವು ದುಃಖಜನ್ಯವಾದವುಗಳು ಎಲ್ಲಿಯುವರೆಗೆ ನಿನ್ನ ಹೃದಯುದಲ್ಲಿ ದ್ವೈತ ವಚನಗಳಿಂದ ಹುಟ್ಟಿದ ದ್ವೈತ ಭಾವವಿರುವುದೋ, ಆ ಪರ್ಯಂತ ಅದ್ವೈತ ಸಾಕ್ಷಾತ್ಕಾರವು ಆಗಲಾರದು.

ದೋಹಾ – ದ್ವೈತ-ವಚನಕೊ ಸ್ಮರನ ಜು ಹೋವೆ,
ಹ್ವೈ ಸಾಖಾತ್ ತೂ ತಾಹಿ ವಿಗೌವೈ ।
ಪೂರ್ವ ಸ್ಮೃತಿ ಸಾಖಾತ್ ವಿನಾಸತ,
ಸುನ ಇಕ ಅಸ ತೇಹಿ ಕಥಾ ಪ್ರಕಾಸತ ॥೧೮॥

ಅರ್ಥ – ದ್ವೈತ ವಚನಗಳ ಸ್ಮರಣ ಮಾತ್ರದಿಂದ ನಿನಗೆ ಪೂರ್ವದಲ್ಲಿ ಉಂಟಾದ ಸಾಕ್ಷಾತ್ಕಾರವು ನಾಶವಾಗುವುದು, ಪೂರ್ವ ಸ್ಮೃತಿಯೂ ಸಹ ಸಾಕ್ಷಾತ್ ನಾಶವಾಗುವುದು ಎಂಬ ವಿಷಯುವನ್ನು ಕುರಿತು ನಿನಗೆ ಮನದಟ್ಟಾಗುವಂತೆ ಒಂದು ಕಥೆಯುನ್ನು ಹೇಳುತ್ತೇನೆ ಸಾವಧಾನವಾಗಿ ಕೇಳು. ಈ ಕಥೆಯು ಶ್ರೀ ಸರ್ವಜ್ಞಾತ್ಮ ಮುನಿಗಳಿಂದ ರಚಿತವಾದ ಸಂಕ್ಷೇಪ ಶಾರೀರಕ ಎಂಬ ಗ್ರಂಥದಲ್ಲಿ ವಿಸ್ತಾರವಾಗಿ ಪ್ರತಿಪಾದಿಸಲ್ಪಟ್ಟಿದೆ.

— ಭರ್ಚ ಮಂತ್ರಿಯ ಕಥೆ —

ದೋಹಾ – ರಾಜಾ ಕೊ ಇಕ ಭರ್ಚ ಮಂತ್ರಿ,
ರಾಜ-ಕಾಜ ಸಬ ತಾಕೆ ಮಂತ್ರೀ ।
ಔರ ಮುಸಾಹಿಬ ಮಂತ್ರಿ ಜೇತೆ,
ಕರೈ ಈರಷಾ ತಾಸು ತೆ ತೆ ॥೧೯॥

ಅರ್ಥ – ಒಬ್ಬಾನೊಬ್ಬ ರಾಜನಲ್ಲಿ ಭರ್ಚುಜ ಎಂಬ ಮಂತ್ರಿ ಇದ್ದನು. ರಾಜ್ಯದ ಕಾರಭಾರವೆಲ್ಲ ಅವನ ಅಧೀನವಾಗಿತ್ತು. ಈ ಕಾರಣದಿಂದ ಉಳಿದ ಮುತ್ಸದ್ದಿಗಳು ಅವನೊಡನೆ ದ್ವೇಷ ಮಾಡುತ್ತಿದ್ದರು

ದೋಹಾ – ಕರೀನ ಸಕತ ಭರ್ಚುಜ ಕೀ ಹಾನಾ,
ಮಹಾರಾಜ ನಿಜ ಜಿಯ ಪ್ರಿಯ ಜಾನಾ ।
ತಬ ಸಬ ಮಿಲಿ ರಚ್ಯೋ ಉಪಾಯಾ,
ಧರ ದೌರೆ ದಂಗಾ ಮಚವಾಯಾ ॥ ೨೦ ॥

ಅರ್ಥ – ಭರ್ಚುವು ರಾಜನಿಗೆ ಅತ್ಯಂತ ಪ್ರಿಯನಾದುದರಿಂದ ಅವನಿಗೆ ಹಾನಿಯನ್ನು ಮಾಡಲು ಅವರೆಲ್ಲರೂ ಅಸಮರ್ಥರಾಗಿದ್ದರು. ಅವರು ರಾಜನಿಗೆ ಅವನ ಮೇಲಿರುವ ವಿಶ್ವಾಸವನ್ನು ಕೆಡಿಸುವುದಕ್ಕಾಗಿ ರಾಜ್ಯದಲ್ಲಿ ದೊಂಬಿಯನ್ನು ಎಬ್ಬಿಸಿದರು.

ಮೇಲಿನ ಮೂರು ದೋಹಾಗಳ ಸಾರಾಂಶವೇನೆಂದರೆ

ಹಿಂದಿನ ಕಾಲದಲ್ಲಿ ಒಬ್ಬಾನೊಬ್ಬ ರಾಜನಲ್ಲಿ ಭರ್ಚುವೆಂಬ ಮಂತ್ರಿಯಿದ್ದನು ಅವನು ರಾಜನಿಗೆ ಅತ್ಯಂತ ಪ್ರಿಯನೂ, ಸಕಲ ಗುಣ ಸಂಪನ್ನನೂ, ಶೌರ್ಯ ಧೈರ್ಯ ಗಾಂಭೀರ್ಯ ಔದಾರ್ಯಾದಿ ಸದ್ಗುಣಗಳಿಂದ ಕೂಡಿದವನೂ ಆಗಿದ್ದನು ಅವನಲ್ಲಿ ಒಂದು ದುಷ್ಟ ಗುಣವಿದ್ದದ್ದರಿಂದ ಸಣ್ಣವರನ್ನೂ ದೊಡ್ಡವರನ್ನೂ ಸಕಲ ರಾಜಪುರುಷರನ್ನೂ ತುಚ್ಛವಾಗಿ ನೋಡುತ್ತಾ, ಅವರನ್ನು ಅನೇಕ ವಿಧವಾಗಿ ಪೀಡಿಸುತ್ತಾ ಗೋಳಾಡಿಸುತ್ತಿದ್ದನು. ಅವನು ರಾಜನಿಗೆ ಅತ್ಯಂತ ಪ್ರಿಯನಾದುದರಿಂದ ಅವರು ಅವನನ್ನು ನಿಗ್ರಹಿಸಲೂ, ತಮ್ಮನ್ನು ರಕ್ಷಿಸಿಕೊಳ್ಳಲೂ ಅಸಮರ್ಥರಾಗಿದ್ದರು ಹೀಗಿರುವಾಗ ಅಧಿಕಾರಿಗಳಾದ ಸರ್ವರೂ ಒಂದೆಡೆ ಸೇರಿ ಭರ್ಚುವನ್ನು ಅಣಗಿಸಲು ಉಪಾಯವನ್ನು ಅನ್ವೇಷಣ ಮಾಡುತ್ತಿದ್ದರು. ಒಂದು ದಿನ ರಾಜಪುರುಷರೆಲ್ಲ ಸೇರಿ ಆಲೋಚಿಸಿ, ತಾವು ಕಾಣದಂತಿದ್ದು ಇತರೆಯವರ ಮುಖಾಂತರ ರಾಜ್ಯದಲ್ಲಿ ಕ್ಷೋಭೆ ಅಂದರೆ ದೊಂಬಿಯುಂಟಾಗುವಂತೆ ಮಾಡಿದರು.

ದೋಹಾ – ಸೊ ಸುನಿ ರಾಜಹಿ ಕರೀ ಕಚಹರೀ,
ಲಿಯೆ ಬುಲಾಯ ಮುಸಾಹಿಬ ಜಹರಿ ।
ತಿನಸೊ ಕಹ್ಯೊ ವೇಗ ಚಢಿ ಜಾವಹು,
ದೌರತ ಧಾರಿ ಸು ಧೂಮ ನಸಾವಹು ॥ ೨೧ ॥

ಅರ್ಥ – ಈ ದೊಂಬಿಗಾರರ ವಾರ್ತೆಯನ್ನು ಕೇಳಿ ರಾಜನು ಯಾವತ್ತೂ ಸರದಾರರನ್ನು ಕರೆಯಿಸಿ, ನೀವೆಲ್ಲರೂ ಒಗ್ಗಟ್ಟಾಗಿ ಹೋಗಿ ಆ ದಂಗೆಯನ್ನು ಅಡಗಿಸಿರಿ ಎಂದು ಹೇಳಿದನು.

ದೋಹಾ – ತಬ ಸಬ ಮಿಲಿ ಉತ್ತರ ಯಹ ದೀನಾ,
ಸದಾ ಏಕ ಭರ್ತುಹಿ ತುವು ಚಾನಾ।
ಮರನ ಲಿಯೆ ಅಬ ಹಮಹೀ ಪಠಾವತು,
ಭರ್ತುಕು ಕಹು ಕ್ಯೊ ನ ಚಢಾವತು ॥ ೨೨ ॥

ಅರ್ಥ – ಆಗ ಅವರೆಲ್ಲರೂ ಕೂಡಿ, ನೀವು ಸರ್ವದಾ ಭರ್ತುವಿನ ಸ್ತುತಿಯನ್ನೇ ಮಾಡುತ್ತಿರುತ್ತೀರಿ. ಪ್ರಾಣ ಸಂಕಟ ಬಂದಾಗ ಮಾತ್ರ ನಮ್ಮನ್ನು ಕಳುಹಿಸುತ್ತೀರಿ ಈಗ ಅವನನ್ನೇ ಈ ದೊಂಬಿಯನ್ನು ಮುರಿಯಲು ಏಕೆ ಕಳುಹಿಸಬಾರದು?

ಮೇಲಿನ ಎರಡು ದೋಹಾಗಳ ಸಾರಾಂಶ :

ಆ ಕ್ಷೋಭೆಯ ವಾರ್ತೆಯನ್ನು ಕೇಳಿ ರಾಜನು ಸರ್ವ ಅಧಿಕಾರಿಗಳನ್ನೂ ಕರೆಯಿಸಿ, “ನೀವು ಹೋಗಿ ಆ ಕ್ಷೋಭೆಯನ್ನು ನಿಲ್ಲಿಸಿ; ಕ್ಷೋಭೆಯನ್ನುಂಟು ಮಾಡುವವರನ್ನು ಬಂಧಿಸಿ ತೆಗೆದುಕೊಂಡು ಬನ್ನಿ” ಎಂದು ಆಜ್ಞಾಪಿಸಿದನು ಈ ರಾಜಾಜ್ಞೆಯನ್ನು ಕೇಳಿ, ಮೊದಲೇ ಯೋಚಿಸಿ ಸಿದ್ಧರಾಗಿದ್ದ ಅಧಿಕಾರಿಗಳು “ಹೇ ರಾಜನೇ ! ರಾಜ್ಯಕ್ಕೆ ಸಂಬಂಧಪಟ್ಟ ಸಣ್ಣ ದೊಡ್ಡ ಕಾರ್ಯಗಳು ಇತರೆಯವರ ಅಭಿಪ್ರಾಯದ ಅಪೇಕ್ಷೆಯಿಲ್ಲದೆ ಕೇವಲ ಭರ್ತುವಿನ ಅಭಿಪ್ರಾಯದಿಂದಲೇ ನಡೆದುಹೋಗುತ್ತವೆ , ರಾಜ್ಯಭಾರದ ವಿಷಯದಲ್ಲಿ ನಾವೆಲ್ಲರೂ ಪ್ರೇತಕ್ಕೆ ಸಮಾನರಾಗಿರುತ್ತೇವೆ ಆದರೆ ಇಂಥ ಮರಣ ಪ್ರಸಂಗ ಬಂದಾಗ

ನಮಗೆ ಆಜ್ಞಾಪಿಸುತ್ತೀರಿ ಭರ್ಚುವು ಶೂರನಲ್ಲವೆ? ಅವನು ಕೈಯಲ್ಲಿ ಸ್ತ್ರೀಯರಂತೆ ಬಳೆಯನ್ನು ತೊಟ್ಟುಕೊಂಡಿರುವನೆ?" ಎಂದು ಬಿನ್ನವಿಸಿಕೊಂಡರು

ದೋಹಾ – ತಬ ಬೋಲ್ಯೋ ಭರ್ಚು ಕರಜೋರಿ,
ಮಹಾರಾಜ ಸುನು ಬಿನತೀ ಮೋರೀ ।
ಆಜ್ಞಾ ಹೊಯ ಮೋಹೀ ಯಹ ಠೌರೀ,
ಮಾರು ಸಕಲ ಧಾರೀ ಜೊ ದೌರೀ ॥ ೨೩ ॥

ಅರ್ಥ – ಆಗ ಭರ್ಚುವು ಕೈ ಜೋಡಿಸಿಕೊಂಡು "ಹೇ ರಾಜನ್! ನನ್ನ ಮಾತನ್ನು ಕೇಳಿರಿ, ನನಗೆ ಈ ಬಂಡಾಯವನ್ನು ಮುರಿಯಲು ಆಜ್ಞೆಯಾದರೆ ತಕ್ಷಣ ಅದನ್ನು ಶಾಂತಮಾಡಿ ಬರುವೆನು" ಎಂದನು.

ದೋಹಾ – ತಬ ಭರ್ಚು ಕು ಬೋಲ್ಯೋ ರಾಜಾ,
ತುಮ ಚಢಿ ಜಾಹು ಸವಾರಹು ಕಾಜಾ ।
ತೆ ಜಾ ತಹಿ ಭರ್ಚು ಸಬ ಮಾರೆ,
ಬನಕ ಕೃಷೀಬಲ ಕಿಯೆ ಸುಖಾರೆ ॥ ೨೪ ॥

ಅರ್ಥ – ಹೀಗೆಂದು ಬಿನ್ನವಿಸಿದ ಭರ್ಚು ಮಂತ್ರಿಯ ವಾಕ್ಯವನ್ನು ಕೇಳಿ ರಾಜನು ಹಾಗೆಯೇ ಆಗಲಿ ಎಂದು ಆಜ್ಞಾಪಿಸಿದನು. ಆ ಕೂಡಲೇ ಭರ್ಚುವು ಹೋಗಿ ಆ ದಂಗೆಯನ್ನು ಮುರಿದು ಒಕ್ಕಲಿಗರಿಗೂ ವ್ಯಾಪಾರಸ್ಥರಿಗೂ ಸುಖವನ್ನುಂಟುಮಾಡಿದನು.

ಮೇಲಿನ ಎರಡು ದೋಹಾಗಳ ಸಾರಾಂಶ :

ರಾಜಾಧಿಕಾರಿಗಳ ಮಾತನ್ನು ಕೇಳಿ ರಾಜನು ಸುಮ್ಮನಾದನು. ಆಗ ಸಮೀಪದಲ್ಲಿಯೇ ಕುಳಿತಿದ್ದ ಭರ್ಚುವು ಅವರ ಮಾತುಗಳನ್ನು ಕೇಳಿ, ತಕ್ಷಣ ಎದ್ದು ನಿಂತು ಅಂಜಲೀಬದ್ಧನಾಗಿ "ಹೇ ರಾಜನೇ! ನಾನು ಇಲ್ಲಿಯೇ ಇರುವಾಗ ಈ ಸಣ್ಣ ಕಾರ್ಯಕ್ಕೆ ಇತರರನ್ನು ಆಜ್ಞಾಪಿಸಲು ಕಾರಣವೇನು?

ನನಗೇ ಆಜ್ಞಾಪಿಸಿದ್ದಾದರೆ ನಾನು ಈಗಲೇ ಹೋಗಿ ಎಲ್ಲಾ ಕ್ಷೋಭೆಯನ್ನೂ ಶಾಂತಿ ಮಾಡಿ ಅಪರಾಧಿಗಳನ್ನು ಹಿಡಿದು ಕಟ್ಟಿ ತರುವೆನು" ಎಂದು ಪ್ರಾರ್ಥಿಸಿದನು. ಅದನ್ನು ಕೇಳಿ ರಾಜನು ಸಂತೋಷದಿಂದ ಸನ್ಮಾನಿಸಲಾಗಿ ಭರ್ಚುವು ತನ್ನ ಸೇನೆಯನ್ನು ಒಟ್ಟುಗೂಡಿಸಿ, ತನ್ನ ಶೌರ್ಯ ಚಾತುರ್ಯ ದಿಂದ ಕ್ಷೋಭೆಯನ್ನೆಲ್ಲಾ ಅಡಗಿಸಿ, ಆ ಪ್ರಾಂತದಲ್ಲಿ ವಾಸಮಾಡುವ ಒಕ್ಕಲಿಗರಿಗೂ ವ್ಯಾಪಾರಸ್ಥರಿಗೂ ಸುಖವನ್ನುಂಟುಮಾಡಿ ತನ್ನ ನಗರಕ್ಕೆ ಹಿಂದಿರುಗಿದನು.

ದೋಹಾ – ಭರ್ಚು ವಿಜಯ ಸುನ್ಯೋ ತಿನ ಸಬಹಿ,
ರಾಜಾ ಪೈ ಬಾಖ್ಯೋ ಯಹ ತಬಹಿ ।
"ಭರ್ಚು ಮರ್‍ಯೋ ನ ಸುಧಾರೋ ಕಾಜಾ"
ಮಿಥ್ಯಾ ವಚನ ಸುನತ ಹೀ ರಾಜಾ ॥ ೨೫ ॥

ಅರ್ಥ – ಈ ಪ್ರಕಾರ ಭರ್ಚುವಿನ ವಿಷಯವನ್ನು ಕೇಳಿ ಮಾತ್ಸರ್ಯ ಬುದ್ಧಿಯುಳ್ಳ ರಾಜಾಧಿಕಾರಿಗಳೆಲ್ಲರೂ ಸೇರಿ ರಾಜನ ಬಳಿಗೆ ಬಂದು "ಹೇ ಮಹಾರಾಜಾ ! ಆ ದಂಗೆಯನ್ನು ಮುರಿಯುವುದು ಭರ್ಚುವಿನಿಂದ ಆಗದೆ ಅವನು ಅದರಲ್ಲಿ ಸತ್ತುಹೋದನು" ಎಂದು ಸುಳ್ಳು ಹೇಳಿದರು.

ದೋಹಾ – ಔರ ಪ್ರಧಾನ ಮುಸಾಹಿಬ ಕೀನೋ,
ಛತ್ರರು ಪೀನಸ ಪಂಖಾ ದೀನೋ ।
ಬಂದೋಬಸ್ತ ತಿನಕೀನೇ ಅಪನಹು,
ಸುನ್ಯೈ ನ ರಾಜಾ ಭರ್ಚು ಸುಪನಹು ॥ ೨೬ ॥

ಅರ್ಥ – ಆ ಮೇಲೆ ಎಲ್ಲರೂ ಕೂಡಿ ಸಮಾಲೋಚನೆಯನ್ನು ಮಾಡಿ, ಮತ್ತೊಬ್ಬ ಉಪಮಂತ್ರಿಯನ್ನು ಭರ್ಚುವಿನ ಸ್ಥಾನದಲ್ಲಿ ನಿಯಮಿಸಿ, ಭರ್ಚುವಿನ ಮರಣದ ನಿಜವಾದ ಸಂಗತಿಯು ರಾಜನಿಗೆ ಕನಸಿನಲ್ಲಿಯೂ ಸಹ ತಿಳಿಯದಂತೆ ವ್ಯವಸ್ಥೆ ಮಾಡಿದರು.

ಮೇಲಿನ ಎರಡು ದೋಹಾಗಳ ಸಾರಾಂಶ

ನಂತರ ಕೆಲವು ದಿನಗಳ ಮೇಲೆ ರಾಜಾಧಿಕಾರಿಗಳೆಲ್ಲ ಸೇರಿ ಭರ್ಚುವು ನತ್ತುಹೋದನೆಂಬ ಸುಳ್ಳು ವಾರ್ತೆಯನ್ನು ರಾಜನಿಗೆ ನಿವೇದಿಸಿದರು. ಅದನ್ನು ಕೇಳಿ ರಾಜನು ಭರ್ಚುವು ತನಗೆ ಪರಮ ಪ್ರಿಯನಾದುದರಿಂದ ಅತಿಯಾಗಿ ಶೋಕಿಸಲು ರಾಜನೊಂದಿಗೆ ಮಿಕ್ಕ ಅಧಿಕಾರಿಗಳೂ ಅಳುವಂತೆ ನಟಿಸಿದರು ನಂತರ ರಾಜನನ್ನು ಅನೇಕ ಪ್ರಕಾರವಾಗಿ ಸಮಾಧಾನ ಮಾಡಿದ ಮೇಲೆ ಉಪಮಂತ್ರಿಗಳಲ್ಲಿ ಒಬ್ಬರನ್ನು ಆ ಸ್ಥಾನಕ್ಕೆ ನಿಯಮಿಸಿದರು ಆದರೂ ಸರ್ವ ರಾಜಪುರುಷರಿಗೂ ಭರ್ಚುವಿಗೆ ಒಂದು ವೇಳೆ ರಾಜ ದರ್ಶನವಾದರೆ ಅವನು ನಮ್ಮನ್ನೆಲ್ಲ ಒಂದೇ ಕ್ಷಣದಲ್ಲಿ ನಾಶಮಾಡುವನೆಂಬ ಭಯವು ಇದ್ದೇ ಇತ್ತು.

ದೋಹಾ – ಸಬ ವೃತ್ತಾಂತ ಭರ್ಚು ತಬ ಸುನಿಕೆ,
ರೂಪ ತಪಸ್ವಿ ಧರ್ಯೋ ಯಹ ಗುನಿಕೆ ।
ರಾಜಾ ಪೈ ಮುಹಿಂ ಜಾನ ನ ದೈ ಹೈಂ,
ಗಯೆದ್ವಾರ ಲಗ ಪ್ರಾನಹು ಲೈ ಹೈಂ ॥ ೨೭ ॥

ಅರ್ಥ – ಈ ಎಲ್ಲಾ ವೃತ್ತಾಂತವು ಭರ್ಚುವಿಗೆ ತಿಳಿಯಿತು. ಆಗ ಅವನು – ನಾನು ಈಗ ರಾಜ ಸನ್ನಿಧಿಗೆ ಹೋದರೆ ಅವರು ನನ್ನನ್ನು ಕೊಲ್ಲದೆ ಇರಲಾರರು ; ಆದುದರಿಂದ ತಪಸ್ವಿಯಾಗಬೇಕೆಂದು ಯೋಚಿಸಿದನು.

ದೋಹಾ – ಅಬಲಗ ಸಬಹೀ ಪದಾರಥ ಭೋಗ್ಯೈ,
ದೇಹರು ಇಂದ್ರಿಯ ರಹೆ ಆರೋಗ್ಯೈ ।
ತಿಯ ಜೊ ಚಾರಿ ಚತುರ್ಪದ ಸೋಹತ,
ಚ್ಯಾರೀ ಪೂಲ ಫಲ ಖಗ ಮನಮೋಹತ ॥ ೨೮ ॥

ಅರ್ಥ – ಇಲ್ಲಿಯವರೆಗೆ ಸರ್ವ ಭೋಗಗಳನ್ನೂ ಅನುಭವಿಸಿದೆನು. ದೇಹ ಹಾಗೂ ಇಂದ್ರಿಯಗಳು ರೋಗರಹಿತವಾಗಿದ್ದವು. ಸುಂದರವಾದ

ಗೃಹದಲ್ಲಿ ಗೃಹಪತ್ನಿಯು ಶೋಭಿಸುತ್ತಿದ್ದಳು ಮನಸ್ಸು ಸಂಸಾರದಲ್ಲಿಯೇ ಮೋಹವುಳ್ಳದ್ದಾಗಿತ್ತು.

ಮೇಲಿನ ಎರಡು ದೋಹಾಗಳಲ್ಲಿಯ ಸಾರಾಂಶ :

ನಂತರ ಒಂದು ದಿವಸ ರಾಜನು ಸಭೆಯಲ್ಲಿ ಇದ್ದಾಗ ರಾಜಾಧಿಕಾರಿಗಳು ತಮ್ಮ ತಮ್ಮಲ್ಲಿ ಮಾತನಾಡಲಾರಂಭಿಸಿದರು . ಇದು ಅನ್ಯಾಯ ! ಭರ್ಚುವು ಎಂಥಾ ಉತ್ತಮನೂ ಸದ್ಗುಣಶಾಲಿಯೂ ಆಗಿದ್ದನಲ್ಲವೆ ! ಅವನ ಪೂರ್ವ ಜನ್ಮದ ಪಾಪದ ಬಲವು ಹೇಳಲಾಗುವುದಿಲ್ಲ. ಅವನಿಗೆ ಈಗ ಉಂಟಾದ ದುರ್ಗತಿಯನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ಅಯ್ಯೋ ಶಿವ ! ಶಿವ ! ಈ ಉದ್ಗಾರವನ್ನು ಕೇಳಿ ರಾಜನು ಮನಸ್ಸಿನಲ್ಲಿ ಖೇದಪಟ್ಟು ಏನಾಯಿತು ? ಎಂದು ಕೇಳಲು, ಅವರಲ್ಲಿ ಒಬ್ಬನು "ಭರ್ಚುವು ಬ್ರಹ್ಮರಾಕ್ಷಸನಾಗಿ, ಸರ್ವಾಂಗ ದಲ್ಲಿ ವಿಭೂತಿಯನ್ನು ಧರಿಸಿ ಅರಣ್ಯದಲ್ಲಿ ಸಂಚರಿಸುತ್ತಿದ್ದಾನೆ ಯಾರಾದರೂ ಎದುರಿಗೆ ಬಂದರೆ ಮೃದು-ಮಧುರ ಮಾತುಗಳಿಂದ ಅವರನ್ನು ಹತ್ತಿರ ಬರ ಮಾಡಿಕೊಂಡು ಕೊಂದುಬಿಡುತ್ತಾನೆ" ಎಂದು ಹೇಳಿದನು.

ಮತ್ತೊಬ್ಬನು "ಏನು ಹೇಳಲಿ ! ಮೊನ್ನೆ ಮೊನ್ನೆ ನಮ್ಮ ಮಾವನು ತನ್ನ ಗ್ರಾಮದಿಂದ ಬರುತ್ತಾ ಅಲ್ಲೊಂದು ಮರದ ಕೆಳಗೆ ಕೂತಿದ್ದ ಭರ್ಚು ವನ್ನು ನೋಡಿ ಬೆದರುತ್ತಾ ಓಡಿ ಓಡಿ ಬಂದು ಮನೆಯನ್ನು ಸೇರಿಕೊಂಡನು ! ಅವನಿಗೆ ಇದುವರೆಗೆ ಜ್ವರವೇ ಬಿಡಲಿಲ್ಲ'' ಅಂದನು.

ಇನ್ನೊಬ್ಬನು "ಭರ್ಚುವು ನನ್ನ ಸ್ವಪ್ನದಲ್ಲಿ ಒಂದೆರಡು ಸಾರಿ ಬಂದನು! ಅದು ನೆನಪಿಗೆ ಬಂದರೆ ನನಗೆ ಈಗಲೂ ಭಯವಾಗುತ್ತದೆ" ಎಂದನು ಈ ಪ್ರಕಾರ ಅನೇಕ ಜನರಿಂದ ಅನೇಕ ದುರ್ಭಾಷಣೆಗಳನ್ನು ಕೇಳಿ ಕೇಳಿ ಅವು ಸತ್ಯವೆಂದು ತಿಳಿದು, ರಾಜನಿಗೆ ಭರ್ಚುವಿನ ವಿಷಯದಲ್ಲಿ ಪ್ರೇತತ್ವಬುದ್ಧಿ ಸ್ಥಿರವಾಗಿ ಬೇರೂರಿತು

ಭರ್ಚುವು ಶತ್ರು ಸಂಹಾರವನ್ನು ಮಾಡಿ, ಅಪರಾಧಿಗಳನ್ನು ಬಂಧಿಸಿ ಹಿಡಿದುಕೊಂಡು, ಅತ್ಯಂತ ಹರ್ಷದಿಂದ ರಾಜ ದರ್ಶನಕ್ಕೆ ಬರುತ್ತಿದ್ದನು

ಆಗ ರಾಜಾಧಿಕಾರಿಗಳೆಲ್ಲರೂ ನೇರಿ, ದ್ವಾರಪಾಲಕರನ್ನು ಲಂಚ ದ್ವಾರಾ ತಮ್ಮ ವಶ ಮಾಡಿಕೊಂಡು, ರಾಜನಲ್ಲಿಗೆ ಭರ್ತೃವಿನ ಪ್ರವೇಶವಾಗದಂತೆ ಮಾಡಿದರು ಅಷ್ಟೇ ಅಲ್ಲ, ಭರ್ತೃವು ಜೀವದಿಂದ ಬಂದ ಸಮಾಚಾರವು ರಾಜನಿಗೆ ತಿಳಿಯದಂತೆ ಕಟ್ಟು ಮಾಡಿದರು ಭರ್ತೃವು ರಾಜನ ದರ್ಶನಕ್ಕಾಗಿ ಮಾಡಬೇಕಾದ ಸರ್ವ ಪ್ರಯತ್ನಗಳನ್ನೂ ಮಾಡಿ ನಿಷ್ಫಲನಾದನು ಇದೆಲ್ಲಾ ರಾಜಾಧಿಕಾರಿಗಳ ಕುತಂತ್ರವೆಂದು ತಿಳಿದು ತನ್ನಲ್ಲಿ ತಾನು ಪರಿತಪಿಸುತ್ತಿದ್ದನು

ದೋಹಾ – ಕರಿಕರ ಊರು ಮೃಗ ಖುರು ಪುರಜ,
ಕೆಹರೀ ಸೀಕಟ ಮಾನ ।
ಲೋಯನ ಟಿಪಲ ತುರಂಗ ಸ್ಯೆ,
ಬರನ್ಯೆ ಪರಮ ಸುಜಾನ ॥ ೫ ॥

ಅರ್ಥ – ಆನೆಯ ಶುಂಡದಂತೆ ತೊಡೆಗಳುಳ್ಳವಳೂ, ಸಿಂಹಕ್ಕೆ ಸಮವಾದ ಕಟಿಯುಳ್ಳವಳೂ, ಹರಿಣ ನೇತ್ರದಂತೆ ನೇತ್ರವುಳ್ಳವಳೂ ಎಂದು ವರ್ಣನೆ ಮಾಡಿದ್ದಾರೆ

ಈ ಚೌಪಾಯಿಯಿಂದ ಆರಂಭ ಮಾಡಿಕೊಂಡು ೩೪ನೇ ಪದ್ಯದವರೆಗೆ ಕಾವ್ಯ ಗ್ರಂಥಗಳ ರೀತಿಯಂತೆ ಸ್ತ್ರೀಯಳ ಅಂಗಗಳನ್ನು ವರ್ಣನೆ ಮಾಡುವುದರ ಮೂಲಕ ಆರೋಪವನ್ನು ಮಾಡಿದೆ. ಇದು ದೋಷ ದೃಷ್ಟಿರೂಪ ಅಪವಾದದ ಅರ್ಥವೆಂದು ತಿಳಿಯಬೇಕು ಕಾರಣವೇನೆಂದರೆ, ಲಕ್ಷ್ಯ ಅಂದರೆ ಗುರಿಯಿಲ್ಲದೆ ಹೊಡೆದ ಬಾಣ ಪ್ರಹಾರವು ವ್ಯರ್ಥವಾಗುವಂತೆ ಆರೋಪವಿಲ್ಲದೆ ಅಪವಾದವುಂಟಾಗುವುದಿಲ್ಲ. ಈ ಕಾರಣದಿಂದ ಪ್ರಥಮ ವಿಷಯಾಸಕ್ತ ಪಾಮರ ಕವಿಗಳ ಕಥನದ ಅನುವಾದ ರೂಪ ಆರೋಪವನ್ನು ಮಾಡಿದೆ ಆ ಮೇಲೆ ಇದೇ ತರಂಗದ ೩೫ನೇ ಪದ್ಯದಿಂದ ಸ್ತ್ರೀಯರ ಅಂಗಗಳ ದೋಷ ದೃಷ್ಟಿ ರೂಪ ಅಪವಾದವು ಪ್ರತಿಪಾದಿಸಲ್ಪಡುತ್ತದೆ

ಇಲ್ಲಿ ಸ್ತ್ರೀಯರ ಅಂಗಗಳನ್ನು ವರ್ಣಿಸುವುದರಲ್ಲಿ ತಾತ್ಪರ್ಯವಿಲ್ಲ ಮತ್ತೇನೆಂದರೆ – ಇಂಥ ಉಪಮೆಗಳನ್ನು ಕೊಡತಕ್ಕ ವಿಷಯಲಂಪಟ ಕವಿಗಳ ಉಪಹಾಸ ಮಾಡುವುದರಲ್ಲಿ ತಾತ್ಪರ್ಯವಿದೆ ಎಂದು ತಿಳಿಯಬೇಕು

ದೋಹಾ – ಕಮಲವದನ ಅಲಸೀಕುಸುಮ,
ಚಿಬುಕ ಚಿನ್ಹ ಮತಿಧಾಮ ।
ತಿಲ ಪ್ರಸೂನಸೀ ನಾಸಿಕಾ,
ಚಂಪಕ ತನು ಅಭಿರಾಮ ॥ ೩೦ ॥

ಅರ್ಥ – ಕಮಲದಂತೆ ಮುಖವುಳ್ಳವಳೂ, ಅತಸೀಪುಷ್ಪ ಸಮಾನವಾದ ಕತ್ತು ಮತ್ತು ಚುಬುಕ ಅಂದರೆ ಗಡ್ಡವುಳ್ಳವಳೂ, ತಿ ಲ ಕು ಸು ಮ ದ ಸೌಭಾಗ್ಯವನ್ನು ಸೂರೆಗೊಂಡ ನಾಸಿಕದಿಂದ ಒಪ್ಪುವವಳೂ, ಸಂಪಿಗೆಯ ಬಣ್ಣದಂತೆ ದೇಹವುಳ್ಳವಳೂ –

ದೋಹಾ – ಬಿಂಬ ಅಧರ ದಾರಿಮ ದಸನ,
ಉರಜ ಬಿಲ್ಲಸೆ ಧೀರ ।
ಕೊಹರಸೀ ಏಡೀ ಕಹತ,
ಕೋವಿದ ಮತಿ ಗಂಭೀರ ॥ ೩೧ ॥

ಅರ್ಥ – ತೊಂಡೆಯ ಹಣ್ಣಿನಂತೆ ಕೆಂಪಾದ ತುಟಿಯುಳ್ಳವಳೂ, ದಾಳಿಂಬರ ಬೀಜದಂತೆ ಮನೋಹರವಾದ ದಂತಪಂಕ್ತಿಯುಳ್ಳವಳೂ, ಬಿಲ್ವ ಫಲದಂತೆ ಕೋಮಲವಾದ ಕುಚದ್ವಯವುಳ್ಳವಳೂ, ಉದಾರವೂ ಗಂಭೀರವೂ ಆದ ಬುದ್ಧಿಯುಳ್ಳವಳೂ –

ದೋಹಾ – ಹೈ ಮದಾಲಸೀ ಮಂದಗತಿ,
ಕಂಠ ಕಪೋತ ಸುಧಾರ ।
ಪಿಕಸೀ ಬಾನಿ ಅತಿ ಮಧುರ,
ಮೋರ ಪುಚ್ಛ ಸೈವಾರ ॥ ೩೨ ॥

ಅರ್ಥ – ಹಂಸ ಪಕ್ಷಿಯು ಗಮನದಂತೆ ನಡಿಗೆಯುಳ್ಳವಳೂ, ಕೋಗಿಲೆಯ ಕಂಠವನ್ನು ಅಲ್ಲಗಳೆಯುವ ಮೃದು ಮಧುರವಾದ ಕಂಠ ಸ್ವರವುಳ್ಳವಳೂ, ಶಾರಿಕೆಯ ನುಡಿಗಳ ಸೊಬಗುಳ್ಳ ಭಾಷಣವುಳ್ಳವಳೂ, ಮಯೂರ ಪುಚ್ಛದಂತೆ ಅತಿ ದೀರ್ಘವಾದ ಕೇಶಜಾಲವುಳ್ಳವಳೂ —

ದೋಹಾ – ಗಂಗ ಪಯೋನಿಧಿ ಕಬಹು ನ ತ್ಯಾಗತ,
ಜಾತೈ ರಸಿಕ ಸುಮನ ಅನುರಾಗತ ।
ವಿಧಿ ತಿಲೋತ್ತಮಾ ಅಪರ ಬನಾಈ,
ಹನ್ಯೋ ಸುಂದ ಜಿನ ಸೊ ನ ಸುಹಾಈ ॥ ೩೩ ॥

ಅರ್ಥ – ಈ ರೀತಿ ಸರ್ವ ಲಕ್ಷಣ ಲಕ್ಷಿತಳಾದ ತಿಲೋತ್ತಮೆ ಎಂಬ ಸುಂದರಿಯನ್ನು ಸೃಷ್ಟಿಕರ್ತನು ನಿರ್ಮಿಸಿರುವನು ಇಂಥ ಯುವತೀ ರತ್ನವನ್ನು ಕಂಡ ವಿಟರ ಅಥವಾ ಕಾಮುಕರ ಮನವು ಸಮುದ್ರವನ್ನು ಬಿಟ್ಟು ಅಗಲದ ಗಂಗಾನದಿಯಂತೆ ಚಂಚಲರಹಿತವಾಗುವುದು ಆದರೂ ಅಪೂರ್ವ ಲಾವಣ್ಯವತಿಯಾದ ಈ ತಿಲೋತ್ತಮೆಯು ಸುಂದೋಪ ಸುಂದರೆಂಬ ದೈತ್ಯರ ನಾಶಕ್ಕೆ ಕಾರಣಳಾದಳು. ಅಂದರೆ ತಿಲೋತ್ತಮೆಯು ರೂಪ ಯೌವನಾದಿಗಳಿಂದ ಕೂಡಿದ್ದರೂ, ಅನೇಕ ಸದ್ಗುಣಗಳನ್ನೊಳಗೊಂಡಿದ್ದರೂ, ಸುಂದೋಪ ಸುಂದರ ವಧೆಗೆ ಕಾರಣಳೆಂಬ ದೋಷಾರೋಪಣೆಯನ್ನು ಹೊರಬೇಕಾಯಿತು.

ಈ ಸುಂದೋಪ ಸುಂದರ ಕಥೆಯು ಮಹಾಭಾರತದಲ್ಲಿ ಬಂದಿದೆ. ಸುಂದ, ನಿಸುಂದರೆಂಬ ಹೆಸರಿನ ದೈತ್ಯ ಸಹೋದರರಿಬ್ಬರಿದ್ದರು. ಅವರು ಬ್ರಹ್ಮದೇವನನ್ನು ಕುರಿತು ತಪಸ್ಸು ಮಾಡಿ "ನಾವಿಬ್ಬರು ಸಹೋದರರು ನಮ್ಮ ನಮ್ಮೊಳಗೆ ಹೊಡೆದಾಡಿ ಒಬ್ಬನ ಕೈಯಿಂದ ಮತ್ತೊಬ್ಬನು ಮೃತನಾಗಬೇಕೇ ಹೊರತು ಅನ್ಯರಿಂದ ಮರಣ ಬರಬಾರದು" ಎಂದು ವರವನ್ನು ಪಡೆದು, ಮದೋನ್ಮತ್ತರಾಗಿ ಲೋಕದ ಜನರಿಗೆ ದುಃಖ ಕೊಡಹತ್ತಿದರು. ಆಗ ಸೃಷ್ಟಿಕರ್ತನಾದ ಬ್ರಹ್ಮದೇವನು ಆ ದೈತ್ಯ ಬಂಧುಗಳ ನಾಶಕ್ಕಾಗಿ ಜಗತ್ತಿನ ಸ್ತ್ರೀಯರೆಲ್ಲರಿಗಿಂತಲೂ ಅತಿ ಸುಂದರಳಾದ ತಿಲೋತ್ತಮೆಯೆಂಬ

ಅಪ್ಸರ ಸ್ತ್ರೀಯನ್ನು ನಿರ್ಮಿಸಿ ಭೂಮಿಗೆ ಆ ದೈತ್ಯರಿದ್ದ ಸ್ಥಳಕ್ಕೆ ಕಳುಹಿಸಿದನು. ಆ ಸುಂದರ ಸ್ತ್ರೀಯನ್ನು ನೋಡಿ ಆ ದೈತ್ಯರಿಬ್ಬರೂ ಮೋಹಿತರಾಗಿ "ನೀನು ನಮ್ಮಿಬ್ಬರನ್ನೂ ವರಿಸುವೆಯಾ ?'' ಎಂದು ಕೇಳಲು, ಅವಳು "ನಾನು ಒಬ್ಬ ನನ್ನೇ ವರಿಸುವೆನು , ಇಬ್ಬರನ್ನು ವರಿಸುವುದಿಲ್ಲ" ಎಂದು ಹೇಳಿ, ಒಬ್ಬೊಬ್ಬ ನನ್ನೇ ಏಕಾಂತದಲ್ಲಿ ಕರೆದು "ನೀನು ನಿನ್ನ ಸಹೋದರನನ್ನು ಕೊಲ್ಲು ; ನಾನು ನಿನ್ನನ್ನು ವರಿಸುವೆನು " ಎಂದು ಹೇಳುತ್ತಾ ಬರಲು, ಸ್ತ್ರೀ ವ್ಯಾಮೋಹದಿಂದ ಅವರಿಬ್ಬರೂ ತಮ್ಮ ತಮ್ಮೊಳಗೆ ಬಡಿದಾಡಿ ಸತ್ತರು ಈ ರೀತಿಯಾಗಿ ಲೋಕದಲ್ಲಿಯ ಸ್ತ್ರೀಯರು ಸುಂದರಿಯರಾಗಿದ್ದರೂ ಮತ್ತೊಬ್ಬರ ವಧೆಗೆ ಕಾರಣರಾಗುತ್ತಾರೆ.

॥ ಚೌಪಾಈ ॥

ಮಿಹಿಂದೀ ಜಾವಕ ಕರ ಪದ ರಾಗಾ ।
ತಿನಕೊ ಮೈ ಕಿಯ ನಿಮಿಷ ನ ತ್ಯಾಗಾ ॥
ಔರ ಭೋಗ ತಿನಕೆ ಉಪಕರನಾ ।
ಭೋಗೇ ಸಬ್ಬೈ ನಿಕಟ ಭೌ ಮರನಾ ॥ ॥ ೩೮ ॥

ಅರ್ಥ – ಕೋಮಲವಾದ ಕರಚರಣಗಳು ಯಾವಾಗಲೂ ಸುವರ್ಣ ಛಾಯೆಯನ್ನು ಧಿಕ್ಕರಿಸಿ ಶೋಭಿಸುತ್ತಿದ್ದುದರಿಂದ ನಾನು ನವಮೋಹ ನಾಂಗಿಯೂ, ಲಾವಣ್ಯದ ಗಣಿಯೂ ಆಗಿರುವ ನನ್ನ ಅರ್ಧಾಂಗಿಯನ್ನು ಅರೆ ಘಳಿಗೆಯಾದರೂ ಬಿಟ್ಟು ಇರಲಾರದೆ ಹೋದೆನು.

॥ ಚೌಪಾಈ ॥

ಅಹೋ ಮೂಢಕೊ ಮಮ ಸಮ ಜಗಮ್ಯೆ ।
ಭೌ ಲಂಪಟ ಅಬಲಗ ಮೈ ಭಗ ಮೈ ॥
ಗೀಲೊ ಮಲಿನ ಮೂತ್ರತೈ ನಿಸಿದಿನ ।
ಸ್ತ್ರವತಮಾಂಸಮಯಿ ರುಧಿರ ಜು ಛತಬಿನ್ ॥ ॥ ೩೫ ॥

ಅರ್ಥ – ಅಯ್ಯೋ, ನನ್ನ ಸಮಾನರಾದ ಮೂಢರು ಪ್ರಪಂಚದಲ್ಲಿ ಯಾರಿರುವರು ? ವ್ರಣವಿಲ್ಲದೆ ರಕ್ತ ಮಾಂಸವನ್ನು ಸುರಿಸುವ, ಅಸಹ್ಯವಾದ ಮಲಮೂತ್ರಗಳಿಂದ ತುಂಬದ ಈ ದೇಹದಲ್ಲಿ ಆಸಕ್ತನಾಗಿದ್ದೇನಲ್ಲಾ !

ಭರ್ತೃವಿನ ಅನುತಪ್ತ ಕಾಲದಲ್ಲಿ ಮಾಡುವ ವಿಚಾರ .

ಈ ರೀತಿಯಾಗಿ ಅನುತಾಪ ಕಾಲದಲ್ಲಿ ಭರ್ತೃವು ತನ್ನ ಮನಸ್ಸಿನಲ್ಲಿ ಅಂದುಕೊಳ್ಳುತ್ತಾನೆ "ಅಯ್ಯೋ, ನಾನು ಎಂಥ ಮೂರ್ಖನು ! ಈ ಹೊತ್ತಿನ ವರೆಗೂ ಈ ಮೂರ್ಖ ರಾಜನ ಸೇವೆಯನ್ನು ಮಾಡಿ ನನ್ನ ಕಾಲವನ್ನೆಲ್ಲಾ ವ್ಯರ್ಥವಾಗಿ ಕಳೆದುಕೊಂಡೆನು ಈ ರಾಜನ ಸೇವೆಯನ್ನು ಮಾಡುವುದಕ್ಕಿಂತ ಈಶ್ವರನ ಸೇವೆಯನ್ನು ಮಾಡಿದ್ದರೆ ಈ ವೇಳೆಗೆ ನಾನು ಮುಕ್ತನಾಗುತ್ತಿದ್ದೆನು ಹಾಗಾಗಿದ್ದರೆ ನನ್ನಂಥ ಭಾಗ್ಯವಂತನು ಯಾವನೂ ಇರುತ್ತಿರಲಿಲ್ಲ. ಇಲ್ಲಿಯ ವರೆಗೂ ನಾನು ಮಾಡಿದ ಸ್ತ್ರೀ ಪುತ್ರಾದಿಗಳ ಸೇವೆಯೂ ಸಹ ನಿಷ್ಪ್ರಯೋಜಕವೇ ಆಗಿದೆ ಶರೀರ ಪೋಷಣಾರ್ಥವಾಗಿ ಇದು ಅವಶ್ಯಕವೆಂದು ಹೇಳುವುದಾದರೆ, ಈಗ ನನಗೆ ಈ ಶರೀರವು ಸಾಕ್ಷಾತ್ ಶತ್ರುವೆಂದು ತೋರಿಬರುತ್ತದೆ ಈ ಶರೀರದ ಸಂಗದಿಂದ ನಾನು ಇದುವರೆಗೆ ಅನೇಕ ದುಃಖಗಳನ್ನು ಭೋಗಿಸಿದ್ದಾಯಿತು ಇದರಿಂದ ಈ ದುಷ್ಟ ಭೂಯಿಷ್ಟವಾದ ಶರೀರಕ್ಕೆ ಪೋಷಣೆ ಮಾಡುತ್ತಾ ಹೋದಂತೆಲ್ಲಾ ದೇಹಾಭಿಮಾನ ದ್ವಾರ ಈ ಶರೀರವು ದುಃಖದಾಯಕವಾಗುತ್ತದೆ ಕೃಷ್ಣ ಸರ್ಪಕ್ಕೆ ಹಾಲು ಕುಡಿಸಿದಂತೆಲ್ಲಾ ವಿಷವೇ ಬೆಳೆಯುತ್ತದೆಂಬುದನ್ನು ತಿಳಿಯಲಾರದೆ ಹೋದೆನು, ಎಂದು ಭರ್ತೃವು ತನ್ನ ಮನಸ್ಸಿನಲ್ಲಿ ಅನುತಾಪ ಪಡಹತ್ತಿದನು.

॥ ಚೌಪಾಈ ॥

ಚರ್ಮ ಲಪೇಟ್ಯೋ ಮಾಂಸ ಮಲೀನಾ ।
ಉಪರಿ ಪಾರ ಅಸುದ್ಧ ಅಲೀನಾ ॥
ಇನ ಮೈ ಕೌನ ಪದಾರಥ ಸುಂದರ ।
ಅತಿ ಅಪವಿತ್ರ ಗ್ಲಾನಿಕೋ ಮಂದಿರ ॥ ॥ ೩೭ ॥

ತಿಯಕೀ ಜಂಘ ಜಘನ್ಯ ಸದಾಹೀ ।
ರಂಭಾ ಕರಿಕರ ಉಪಮಿತ ಜಾಹೀ ॥
ಆದ್ರ್ರ ಮೂತಕೊ ಮನು ಪತನಾರೊ ।
ರುಧಿರ ಮಾಂಸ ತ್ವಕ ಅಸ್ಥಿ ಪಸಾರೊ ॥ ॥ ೩೭ ॥

ಲಗತ ಜೂ ನೀಕೆ ಸ್ಥೂಲ ನಿತಂಬಾ ।
ತಿನಕೆ ಮಧ್ಯ ಮಲಿನ ಮಲ ಬಿಂಬಾ ॥
ಕಟಿ ತಾಕೆ ತೆ ಅತಿದುರ್ಗಂಧಾ ।
ಹ್ವೈ ಆಸಕ್ತ ತಹಾ ಸೊ ಅಂಧಾ ॥ ॥ ೩೮ ॥

ಅಧರ ಜೊ ಥೂಕ ಲಾರನ್ಸೈ ಭೀಜತ ।
ತಜಿ ಗ್ಲಾನಿ ನಿಜ ಮುಖ ಮೈ ಧೀಜತ ॥
ದೃಷ್ಟಮುದಾ ನಾರೀ ಮದಿರಾ ಭಜಿ ।
ಸುದ್ಧ ಅಸುದ್ಧ ವಿವೇಕ ದಿಯೋ ತಜಿ ॥ ॥ ೩೯ ॥

ಕಹತ ನಾರಿಕೆ ಅಂಗ ಜು ನೀಕೆ ।
ಕರತ ಬಿಚಾರ ಲಗತ ಯೂ ಫೀಕೆ ॥
ಕಪಟ ಕೂಟಕೊ ಆಕರ ನಾರೀ ।
ಮೈ ಜಾನೀ ಅಬ ತಜನ ವಿಚಾರೀ ॥ ॥ ೪೦ ॥

ಮೇಲಿನ ಐದು ದೋಹಾಗಳಲ್ಲಿ ಸ್ತ್ರೀಯರ ನಿಂದೆಯು ಅತಿಯಾಗಿರುವುದರಿಂದ ಮತ್ತು ಈ ಗ್ರಂಥವು ಜಿಜ್ಞಾಸುಗಳಾದ ನರನಾರಿಯರ ಕೈಯಲ್ಲಿ ಸೇರುವುದರಿಂದ ಅವುಗಳ ಅರ್ಥವನ್ನು ಇಲ್ಲಿ ಬಿಟ್ಟಿರುತ್ತೇವೆ. ಬೇಕಾದವರು ಮೂಲ ಗ್ರಂಥದಲ್ಲಿಯೇ ನೋಡಿಕೊಳ್ಳಬಹುದು.

**ಭರ್ಚುವಿನ ವೈರಾಗ್ಯ ವರ್ಣನೆ :**

॥ ಚೌಪಾಈ ॥

ಕಲಾಕಂದ ದಧಿ ಪಾಯಸ ಫೇರಾ ।
ತಂದುಲ ಘೃತ ವ್ಯಂಜನ ಬಹುತೇರಾ ॥

ಔರ ವಿವಿಧ ಭೋಜನ ಜೇ ಕೀನೆ ।
ತಿನ ಸಬಕೆ ರಸನಾ ರಸ ಲೀನೆ ॥ ॥೪೧॥

ಅರ್ಥ – ಭರ್ತುವು ತನ್ನ ಮನಸ್ಸಿನಲ್ಲಿ ಪೇಡೆ, ಬರ್ಫಿ, ಮೊಸರು, ಪಾಯಸ, ಅನ್ನ, ತುಪ್ಪ ಮುಂತಾದ ಅನೇಕ ತರದ ವ್ಯಂಜನ ಪದಾರ್ಥಗಳನ್ನು ಈ ನಾಲಿಗೆಯಿಂದ ಸೇವನೆ ಮಾಡಿದರೂ ಇನ್ನೂ ತೃಪ್ತಿಯಾಗಲಿಲ್ಲವೆಂದು ಅಂದುಕೊಳ್ಳುತ್ತಾನೆ.

॥ ಚೌಪಾಈ ॥

ಅಬಲೌ ಭಈ ನತೃಪ್ತಿ ಜು ಯಾಕೂ ।
ಯಾತೈ ವೃಥಾ ಪೋಷಿಣಾ ತಾಕೂಂ ॥
ಛುಧಾ ವಿನಾಸಹಿ ಬನ ಫಲ ಕಂದಾ ।
ಹ್ವೈಕ್ಯೂ ಪರಾಧೀನ ಯಹ ಬಂದಾ ॥ ॥೪೨॥

ಅರ್ಥ – ಇಷ್ಟಾದರೂ ಈ ನಾಲಿಗೆಗೆ ತೃಪ್ತಿಯಾಗಲಿಲ್ಲ. ಇಲ್ಲಿಯವರೆಗೂ ಇದನ್ನು ಪೋಷಿಸಿದ್ದು ವ್ಯರ್ಥವಾಯಿತು. ಹಸಿವನ್ನು ತೀರಿಸಿಕೊಳ್ಳುವುದಕ್ಕಾಗಿ ಪಶುವಿನಂತೆ ತಿನ್ನಬಾರದ ಪದಾರ್ಥಗಳನ್ನೂ ಸಹ ತಿಂದೆನು. ಇಷ್ಟಾದರೂ ಇದರ ಬಾಧೆಯು ತಪ್ಪಲಿಲ್ಲ ಈಗ ನನಗೆ ನನ್ನ ತಪ್ಪು ತಿಳಿಯಿತು. ಇನ್ನು ಮೇಲೆ ಈ ರೀತಿಯಾಗಿ ದೇಹಕ್ಕೂ, ಇಂದ್ರಿಯಗಳಿಗೂ ವಶನಾಗದೆ ನನ್ನ ಮುಂದಿನ ದಾರಿಯನ್ನು ನಾನು ನೋಡಿಕೊಳ್ಳುವೆನು.

॥ ಚೌಪಾಈ ॥

ಗುಹಾ ಮಹಲ ಬನ ಬಾಗ ಘನೇರಾ ।
ಕ್ಯೂರಾಜಾಕೋ ಹ್ವೈ ಹೂಂ ಚೇರಾ ॥
ಸೈಜಸಿಲಾ ಅರು ನಿಜಭುಜ ತಕೀಯಾ ।
ನಿರ್ಝರ ಜಲ ಕರ ಪಾತ್ರ ನ ರುಕಿಯಾ ॥ ॥೪೩॥

ಅರ್ಥ – ಇನ್ನು ಮೇಲೆ ನನಗೆ ಗುಹೆಯೇ ಮಂದಿರ ಅರಣ್ಯವೇ ನಿವಾಸ ಸ್ಥಾನ. ಮಲಗಿಕೊಳ್ಳಲು ಶಿಲೆಯೇ ಹಾಸಿಗೆ ಸ್ವಂತ ಭುಜಗಳೇ ತಲೆದಿಂಬು ವನದಲ್ಲಿಯ ನಿರ್ಮಲೋದಕವನ್ನು ಕುಡಿಯುವುದಕ್ಕೆ ಹಸ್ತವೇ ಪಾತ್ರೆ ಇಂಥ ದೇವದತ್ತ ವಸ್ತುಗಳು ದೊರಕಿರಲು ರಾಜನ ಆಳಾಗಿ ದುಃಖಪಡುವುದೇಕೆ ?

ಮೇಲಿನ ದೋಹಾಗಳ ಸಾರಾಂಶ

ಭರ್ತೃವು ತನ್ನ ಮನಸ್ಸಿನಲ್ಲಿ ತಾನು ಇನ್ನು ಮೇಲಿನ ಕಾರ್ಯಕ್ರಮವನ್ನು ನಿಶ್ಚಯ ಮಾಡಿಕೊಳ್ಳುತ್ತಾನೆ. ಇನ್ನು ಮೇಲೆ ನಾನು ಈ ಅನಿಷ್ಟ ಶರೀರದ ಸೇವೆಯನ್ನು ಬಿಟ್ಟು, ಯಾವಾಗಲೂ ಮಹಾರಣ್ಯವನ್ನೇ ತೋಟವಾಗಿಯೂ, ಪರ್ವತ ಗುಹೆಯನ್ನೇ ಮಹಡಿಯನ್ನಾಗಿಯೂ, ಕಾಡಿನ ಪತ್ರಫಲಾದಿಗಳನ್ನೇ ಪಕ್ವಾನ್ನವಾಗಿಯೂ ತಿಳಿದು, ಹಸ್ತಪಾತ್ರೆಯಿಂದಲೇ ನದಿಯ ನೀರನ್ನು ಕುಡಿದು, ಶಿಲೆಯೆಂಬ ಹಾಸಿಗೆಯ ಮೇಲೆ ಮಲಗಿಕೊಂಡಾಗ ನನಗೆ ಎಂಥ ಸುಖವಾಗುವುದು ! ರಾಜನೇ ಮೊದಲಾಗಿ ಬ್ರಹ್ಮದೇವನವರೆಗೆ ಇರುವ ಸುಖವೂ ನನ್ನ ಸುಖಕ್ಕೆ ಸಮಾನವಾಗಲಾರದು

॥ ಚೌಪಾಈ ॥

ಬೈರೀ ಇಕಂತ ಹೋಯ ಸುಖಂದಾ ।
ಲಹಿಯೆ ಭರ್ತೃ ಪರಮಾನಂದಾ ॥
ಬಿನ ಏಕಾಂತ ನ ಆನಂದ ಕಬಹೂ ।
ಮಿಲೈ ಅಬ್ಧಿಲೌ ಪೃಥ್ವೀ ಸಬಹೂ ॥ ॥೪೪॥

ಅರ್ಥ – ಈ ಪ್ರಕಾರ ಭರ್ತೃವು ವಿಚಾರ ಮಾಡಿ ಸ್ವಚ್ಛಂಧ ವೃತ್ತಿಯಿಂದ ಏಕಾಂತದಲ್ಲಿ ಕುಳಿತುಕೊಳ್ಳಲು ಕೇವಲ ಪರಮಾನಂದವನ್ನು ಹೊಂದಿದನು. ಏಕಾಂತವಾಸವಿಲ್ಲದೆ ಕಾಲತ್ರಯದಲ್ಲಿಯೂ ಸಮುದ್ರಪರ್ಯಂತ ಪೃಥ್ವಿಯು ಸಿಕ್ಕರೂ ನಿರ್ವಿಷಯಾನಂದ ದೊರೆಯಲಾರದು.

ಇನ್ನು ಮೇಲೆ ೫೧ನೇ ದೋಹಾದವರೆಗೂ ರಾಜ ಪದವಿಯಿಂದ ಆರಂಭ

ವಾಗಿ ಬ್ರಹ್ಮ ಪದವಿಯವರೆಗೆ ಇರುವ ಸರ್ವ ಸುಖಗಳೂ ಏಕಾಂತದಿಂದಲೇ ಲಭಿಸುವುವು ಎಂಬ ವಿಷಯವು ಪ್ರತಿಪಾದಿಸಲ್ಪಡುತ್ತದೆ

ದೋಹಾ – ಪೃಥ್ವೀಪತೀ ನಿರೋಗಯುವ, ದೃಢ ಸ್ಥೂಲ ಬಲವಂತ ।
ವಿದ್ಯಾಯುತ ತಿಹಿ ಭೂಪಮೈ, ಮಾನುಷ ಸುಖಕೊ ಅಂತ ॥೪೫॥

ಅರ್ಥ – ೧ ಸಾರ್ವಭೌಮ ಪದವಿ, ೨. ಆರೋಗ್ಯ, ೩. ತಾರುಣ್ಯ, ೪. ರೋಗವಿಲ್ಲದ ಶರೀರ, ೫ ಸಾಮರ್ಥ್ಯ, ೬. ಯುಕ್ತಿ, ೭. ವಿದ್ಯೆ – ಇವೇ ಸಪ್ತ ಗುಣಗಳು ಇವೆಲ್ಲವೂ ಒಬ್ಬ ಮನುಷ್ಯನಲ್ಲಿದ್ದರೆ ಅದು ಮನುಷ್ಯಾನಂದ ವೆಂದು ಹೇಳಿಸಿಕೊಳ್ಳುತ್ತದೆ

ಚೌಪಾಈ – ಜೆ ಮಾನವ ಗಂಧರ್ವ ಕಹಾವತ ।
ತಾ ನೃಪತೈಂ ಸತಗುನ ಸುಖಪಾವತ ॥
ಹೋತ ದೇವ ಗಂಧರ್ವ ಜು ಔರಾ ।
ತಿನತೈ ತಹ ಸೌಗುನ ಸುಖ ಬ್ಯೋರಾ ॥೪೬॥

ಅರ್ಥ – ಮನುಷ್ಯ ಗಂಧರ್ವನೆನಿಸಿಕೊಂಡವನು ರಾಜನಿಗಿಂತ ನೂರು ಪಾಲು ಹೆಚ್ಚಾಗಿ ಆನಂದವನ್ನು ಹೊಂದುವನು ಮತ್ತು ಇವರಿಗಿಂತ ಬೇರೆ ಯಾದ ದೇವಗಂಧರ್ವರು ಮನುಷ್ಯ ಗಂಧರ್ವರಿಗಿಂತ ನೂರು ಪಾಲು ಹೆಚ್ಚಾಗಿ ಆನಂದವನ್ನು ಭೋಗಿಸುತ್ತಾರೆ.

ಚೌಪಾಈ – ಸುಖ ಗಂಧರ್ವ ದೇವಕೊ ಜೊ ಹೈ ।
ತಾ ತೈಂ ಸತಗುನ ಪಿತರನಕೊ ಹೈ ॥
ಪುನಿ ಅಜಾನ ದೇವನ ಮೈ ತಿನತೈ ।
ಸೌಗುನ ಕರ್ಮದೇವ ಮೈ ಜಿನತೈ ॥೪೭॥

ಅರ್ಥ – ದೇವ ಗಂಧರ್ವರಿಗಿಂತಲೂ ನೂರು ಪಾಲು ಅಧಿಕ ಸುಖವು ಪಿತೃ ದೇವತೆಗಳಿಗೆ ಉಂಟಾಗುವುದು ಇವರಿಗಿಂತಲೂ ನೂರು ಪಾಲು ಹೆಚ್ಚು ಆನಂದವು ಧರ್ಮ ದೇವತೆಗಳಿಗೆ ಉಂಟಾಗುತ್ತದೆ

ಚೌಪಾಈ – ಮುಖ್ಯ ದೇವ ಜೆ ಹೈ ಪುನಿ ತಿನಮೈ ।
ಕರ್ಮದೇವ ತೈ ಸೌಗುನ ಜಿನಮೈ ॥
ಜೋ ತ್ರಿಲೋಕಪತಿ ಇಂದ್ರ ಕಹೀಜೈ ।
ತಾಮೈ ಪುನಿ ಸೌಗುನ ಗಿನಿ ಲೀಜೈ ॥ ॥೪೮॥

ಅರ್ಥ – ಕರ್ಮ ದೇವತೆಗಳಿಗಿಂತಲೂ ಶತಗುಣ ಅಧಿಕವಾದ ಆನಂದವು ಮುಖ್ಯ ದೇವತೆಗಳಿಗೆ ಆಗುತ್ತದೆ ಮುಖ್ಯ ದೇವತೆಗಳಿಗಿಂತಲೂ ಶತಗುಣ ಅಧಿಕ ಆನಂದವು ದೇವರಾಜ ಇಂದ್ರನಿಗೆ ಆಗುತ್ತದೆ

ಚೌಪಾಈ – ಸಬ ದೇವನ ಕೊ ಗುರು ಬೃಹಸ್ಪತಿ ।
ಲಹೈ ಇಂದ್ರತೈ ಸತಗುನ ಸುಖಗತಿ ॥
ಜಾಕೋ ನಾಮ ಪ್ರಜಾಪತಿ ಬಾಖತ ।
ಗುರುತೈ ಸುಖ ಸೌಗುನ ಸೊ ರಾಖತ ॥ ॥೪೯॥

ಅರ್ಥ – ಸರ್ವ ದೇವತೆಗಳಿಗೂ ಗುರುವಾದ ಬೃಹಸ್ಪತಿಗೆ ಇಂದ್ರನಿಗಿಂತಲೂ ಶತಗುಣ ಅಧಿಕ ಆನಂದವು ಉಂಟಾಗುತ್ತದೆ ಬೃಹಸ್ಪತಿಗಿಂತಲೂ ಶತಗುಣ ಅಧಿಕ ಆನಂದವು ಪ್ರಜಾಪತಿಗೆ ಉಂಟಾಗುತ್ತದೆ.

ಚೌಪಾಈ – ತಾಹೂ ತೈ ಸೌಗುನ ಬ್ರಹ್ಮಹಿ ಸುಖ ।
ಲಹೈ ನ ರಂಚಕ ಸೊ ಕಬಹೂ ದುಖ ॥
ಇತನೈ ಯಾ ಕ್ರಮತೈ ಸುಖ ಪಾವತ ।
ತೈತಿರೀಯ ಶ್ರುತಿ ಯೂಂಸಮುಝಾವತ ॥ ॥೫೦॥

ಅರ್ಥ – ಪ್ರಜಾಪತಿಗಿಂತಲೂ ಬ್ರಹ್ಮನಿಗೆ ನೂರು ಪಾಲು ಅಧಿಕ ಸುಖ ವುಂಟು ಈ ಬ್ರಹ್ಮನಿಗೆ ಕಾಲತ್ರಯದಲ್ಲಿಯೂ ದುಃಖವಿಲ್ಲ. ಈ ಪ್ರಕಾರ ವಾಗಿ ಪದವಿಗಳಿಗೆ ತಕ್ಕಂತೆ ಕ್ರಮವಾಗಿ ಅಧಿಕ ಸುಖವುಂಟೆಂದು ತೈತ್ತಿರೀಯ ಶ್ರುತಿಯು ಸಾರುತ್ತದೆ

ಸೊರಠಾ – ರಾಜಾತೈ ಬ್ರಹ್ಮಾಂತ, ಕಹ್ಯೋ ಜು ಸುಖ ಸಗರೋಲಹ್ಯೆ ।
ರಹತ ಸದಾ ಏಕಾಂತ. ಕಾಮದಗ್ಧ ಜೋಕೋ ನ ಹಿಯ ॥

ಅರ್ಥ – ರಾಜನಿಂದ ಬ್ರಹ್ಮದೇವನ ಪರ್ಯಂತ ಇರುವ ಸುಖದ ಗಣಿತ ವನ್ನು ಹೇಳಿದೆಯಷ್ಟೆ. ಈ ಸುಖಗಳೆಲ್ಲವೂ ಏಕಾಂತವಾಸದಲ್ಲಿದ್ದು ಕಾಮ ವನ್ನು ದೂರ ಮಾಡಿದವನಿಗೆ ಸಿಗುತ್ತವೆ.

## ಸುಖ ನಿರ್ಣಯ

ಆರೋಗ್ಯವಂತನೂ, ಬಲವಂತನೂ, ತರುಣನೂ, ಸಕಲ ವಿದ್ಯಾ ಪ್ರವೀಣನೂ, ಸಾರ್ವಭೌಮ ಚಕ್ರವರ್ತಿಯೂ ಆದ ರಾಜನಿಗೆ ಆಗುವ ಸುಖಕ್ಕಿಂತ ಮನುಷ್ಯ ಗಂಧರ್ವರಿಗೆ ಅಂದರೆ ಈ ಕಲ್ಪದಲ್ಲಿ ಮನುಷ್ಯರಾಗಿದ್ದು, ಪುಣ್ಯ ವಿಶೇಷದಿಂದ ಗಂಧರ್ವ ಪದವಿಯನ್ನು ಪಡೆದವರಿಗೆ ಅಧಿಕ ಸುಖವಿದೆ. ಇವರಿಗಿಂತಲೂ ದೇವಗಂಧರ್ವರಿಗೆ ಅಂದರೆ ಪೂರ್ವಕಲ್ಪದಲ್ಲಿ ಮಾಡಿದ ಪುಣ್ಯ ವಿಶೇಷದಿಂದ ಈ ಕಲ್ಪಾರಂಭದಲ್ಲಿಯೇ ಗಂಧರ್ವ ಪದವಿಯನ್ನು ಪಡೆದವರಿಗೆ, ಇವರಿಗಿಂತಲೂ ಪಿತೃದೇವತೆಗಳಿಗೆ ಅಂದರೆ ಕರ್ಮಲೋಕದಲ್ಲಿ ಬಹು ಕಾಲದವರೆಗೆ ವಾಸಿಸುವ ಅಗ್ನಿಷ್ವಾತ್ತ ಮೊದಲಾದ ಪಿತೃಗಳಿಗೆ, ಇವರಿ ಗಿಂತಲೂ ಅಜಾನ ದೇವತರಿಗೆ, ಅಂದರೆ ಪೂರ್ವಕಲ್ಪದಲ್ಲಿ ಮಾಡಿದ ಪುಣ್ಯ ವಿಶೇಷದಿಂದ ಈ ಕಲ್ಪದ ಆರಂಭದಲ್ಲಿ ದೇವಭಾವವನ್ನು ಪಡೆದವರಿಗೆ, ಇವರಿಗಿಂತಲೂ ಕರ್ಮ ದೇವತೆಗಳಿಗೆ, ಅಂದರೆ ಈ ಕಲ್ಪದಲ್ಲಿ ಅಶ್ವಮೇಧಾದಿ ಕರ್ಮಗಳನ್ನು ಮಾಡಿ, ಅಧಿಕವಾದ ಐಶ್ವರ್ಯವನ್ನು ಪಡೆದು ಆಜಾನ ದೇವತೆಗಳಿಂದ ಸೇವೆಯನ್ನು ಮಾಡಿಸಿಕೊಳ್ಳುತ್ತಿರುವವರಿಗೆ, ಇವರಿ ಗಿಂತಲೂ ಮುಖ್ಯ ದೇವತೆಗಳಿಗೆ ಅಧಿಕ ಸುಖವಿರುತ್ತದೆ. ಯಮ, ಅಗ್ನಿ,

ವಾಯು, ಸೂರ್ಯ, ಚಂದ್ರ, ಇಂದ್ರ ರುದ್ರ ಮೊದಲಾದವರಿಗೆ ಮುಖ್ಯ ದೇವತೆಗಳೆನ್ನುತ್ತಾರೆ (ಕೆಲವರು ಯಮನಿಂದ ಹಿಡಿದು ಬ್ರಹ್ಮ ಪರ್ಯಂತವಾಗಿರುವವರೆಲ್ಲರೂ ಮುಖ್ಯ ದೇವತೆಗಳೆನ್ನುತ್ತಾರೆ. ಮತ್ತೆ ಕೆಲವರು ಅಷ್ಟವಸುಗಳೂ, ದ್ವಾದಶಾದಿತ್ಯರೂ, ಏಕಾದಶರುದ್ರರೂ ಸೇರಿ ಮುಖ್ಯ ದೇವತೆಗಳೆಂದು ಹೇಳುತ್ತಾರೆ ಮತ್ತೆ ಕೆಲವರು ಇಂದ್ರಿಯಾಭಿಮಾನಿ ದೇವತೆಗಳನ್ನು ಮುಖ್ಯ ದೇವತೆಗಳೆಂದು ಹೇಳುತ್ತಾರೆ) ಇವರಿಗಿಂತಲೂ ಬ್ರಹಸ್ಪತಿ, ಪ್ರಜಾಪತಿ, ಬ್ರಹ್ಮದೇವ ಇವರೆಲ್ಲರಿಗೆ ಉತ್ತರೋತ್ತರವಾಗಿ ಒಬ್ಬೊಬ್ಬರಿಗೆ ಶತಗುಣಾಧಿಕವಾಗಿ ಸುಖವಿರುತ್ತದೆ. ಈ ಪ್ರಮಾಣದಿಂದ ಚಕ್ರವರ್ತಿ ಭೂಪತಿಗಿಂತ ಸಹಸ್ರ ಪರಾರ್ಧವು ಬ್ರಹ್ಮದೇವನಿಗೆ ಸುಖವಿರುತ್ತದೆ. ಆ ಬ್ರಹ್ಮದೇವನ ಸುಖವು ನಿಷ್ಕಾಮಿಯಾದ, ಏಕಾಂತವಾಸಿಯಾದ ಪುರುಷನಿಗಾಗುವ ಸುಖದ ಎದುರಿಗೆ ತುಚ್ಛವಾದದ್ದು. ಈ ವಿಷಯವನ್ನು ತೈತ್ತಿರೀಯೋಪನಿಷತ್ತಿನಲ್ಲಿ ವಿಶೇಷವಾಗಿ ವರ್ಣಿಸಿದೆ

ತೈತ್ತಿರೀಯೋಪನಿಷತ್ತಿನ ಆನಂದವಲ್ಲಿಯಲ್ಲಿ — "ಶ್ರೋತ್ರೀಯಸ್ಯ ಚಾಕಾಮಹತಸ್ಯ" ಎಂಬ ವಚನವಿರುತ್ತದೆ ಅಲ್ಲಿ "ಶ್ರೋತ್ರೀಯ" ಶಬ್ದಕ್ಕೆ "ಬ್ರಹ್ಮನಿಷ್ಠ" ಎಂಬ ಅರ್ಥವು ಪ್ರತಿಪಾದಿಸಲ್ಪಟ್ಟಿದೆ ಆದುದರಿಂದ ಇಲ್ಲಿಯ "ಏಕಾಂತವಾಸಿ" ಎಂಬ ಶಬ್ದಕ್ಕೆ "ಬ್ರಹ್ಮನಿಷ್ಠ"ಯೆಂದೇ ಅರ್ಥಮಾಡಬೇಕು. ಏಕೆಂದರೆ ಅದ್ವೈತ ಭಾವನೆ ಇಲ್ಲದಿದ್ದರೆ ಏಕಾಂತ ವಾಸವೇ ಸಂಭವಿಸಲಾರದು. ಆ ಅದ್ವೈತ ಭಾವನೆಯನ್ನು ಇಲ್ಲಿ ಬ್ರಹ್ಮನಿಷ್ಠ ರೂಪವೆಂದು ಹೇಳಿದೆ.

ಇದೇ ವಿಷಯವನ್ನು ಭರ್ತೃವು ತನ್ನ ಮನಸ್ಸಿನಲ್ಲಿ – ಅಹಹಾ ! ಸುಖವೆಂಬ ಪದಾರ್ಥವು ಏಕಾಂತವಾಸದಲ್ಲಿಯೇ ಇರುವುದು. ಸ್ತ್ರೀ ಪುತ್ರ ಧನಾದಿಗಳಲ್ಲಿ ಸುಖವಿಲ್ಲ, ಕೇವಲ ದುಃಖವೇ ಇರುತ್ತದೆ. ಧನದ ಆಶೆಯಿಂದ ಯಾಚಕರು ಧನಿಕಗರ್ದಭವನ್ನು ಅಶ್ವವೆಂದು ಅನ್ನುವಂತೆ, ಸ್ತ್ರೀಲೋಲರಾದ ಕಾಮಾಂಧರಾದ ಕವಿಗಳು ಅನೇಕ ವಿಧಗಳಿಂದ ಉತ್ತಮೋತ್ತಮ ಉಪಮಾನಗಳಿಂದ ಸ್ತ್ರೀಯರನ್ನು ವರ್ಣಿಸಿರುತ್ತಾರೆ. ಹೀಗಿದ್ದರೂ ವಿಚಾರಶೀಲರಾದವರು ಈ ನಿಂದ್ಯ ಸ್ಥಾನದಲ್ಲಿ ಮೋಹಪಡುವುಲ್ಲ. ನನ್ನಂಥ

ಮೂರ್ಖ ಪಶುವು ಮಾತ್ರ ಮೋಹಿತನಾಗಿ ತನ್ನ ನಾಶವನ್ನು ತಾನು ಮಾಡಿ ಕೊಳ್ಳುತ್ತಾನೆ

—ಕಾಮಾಂಧನಾದ ಕವಿ ಕೃತ ಸ್ತ್ರೀನಿಂದಾ—

ಚೌಪಾಈ – ಹೈ ಏಕಾಂತ ಮೇನ ಮೈಂ ಅಸ ಸುಖ,
ಯುವತೀ ಪುತ್ರಧನ ಸಂಗ ಸದಾ ದುಃಖ ।
ಯುವತಿ ಕುರೂಪ ಕುಬೋಲಿನಿ ಜಾಕೆ,
ಸದಾ ಸೋಕ ಹಿಯ ಹೈ ಯಹ ತಾಕೆ ॥ ॥೫೧॥

ಪ್ರಭು ಪುರೀಷ ಪಂಡಾ ಯಹ ರಂಡಾ,
ದಿಯ ಮುಹಿ ಕೌನ ಪಾಪಕೊ ದಂಡಾ ।
ಬೋಲತ ಬೈನ ವ್ಯಾಲ ಕಾಗನಿಕೇ,
ಭೇಡ ಭೈಸಿ ನ್ಯೋರಿ ನಾಗನಿಕೆ ॥ ॥೫೨॥

ಭೂತ ಭಾವತಿ ಊರನಿಕೊ ಹೈ,
ಬೋಲ ಖರೀಕೊ ಸುನಿ ಖರ ಮೋಹೈ ।
ರೈನಿ ಜು ಊಂಚೆ ಸ್ವರಹಿ ಉಚಾರತ-
ನ್ಯಾರ ಹಜಾರನ ಸುನತ ಪುಕಾರತ ॥ ॥೫೪॥

ನಿರಪರಾಧ ತಿಯ ಬಿನ ವೈರಾಗಾ,
ತಜತ ನ ಬನತ ಪಾಪ ಜಿಯ ಲಾಗಾ ।
ರಹತ ದುಖಿತ ಯೂ ನಿಸಿದಿನ ಪಿಯಮನ,
ತಿಯ ಕುಬೋಲ ಸುನಿ ಲಖಿ ಕುರೂಪ ತನ ॥ ॥೫೫॥

ಕಾಮನಿ ಹೈ ಜು ಸುರೂಪ ಸುಬಾನೀ,
ಸೋ ಕುರೂಪತೈ ಹೈ ದುಖ ದಾನೀ ।
ಚಮಕ ಚಾಮಕಿ ಪಿಯ ಹಿ ಪಿಯಾರೀ,
ಅರ್ಥ ಧರ್ಮ ನ ಸಿ ಮೋಕ್ಷ ಬಿಗಾರೀ ॥ ॥೫೬॥

ವೀರೆಬೈನ ಜಹರಯುತ ಲಡವಾ,
ಖಾಯ ಗಮಾಯ ಬುದ್ಧಿ ಹೈವ್ರ ಭಢವಾ ।
ಔರ ಕಛೂಶುವನಹು ನಹಿ ದೇಖೈ,
ಕಾಮ ಅಂಧ ಇಕ ಕಾಮನಿ ಲೇಖೈ ॥ ॥೫೭॥

ಧನ ಕಛು ಮಿಲೈಂ ಜು ಬಾಹಿರ ಘರ ಮೈಂ,
ಸೊ ಸಬ ಖರಚೈ ಕಾಮನಿ ಧರಮೈ ।
ಭೂಷನ ವಸ್ತ್ರ ತಾಹಿ ಪಹಿರಾವೈ,
ಗುರು ಪಿತು ಮಾತ ಯಾದಿಹು ನ ಆವೈ ॥ ॥೫೮॥

ಪಾಯಸ ಪಾನ ಮಿರಾಈ ಮೇವಾ,
ದೇಯ ಭಕ್ತಿ ತೈ ತಿಯ ನಿಜದೇವಾ ।
ನೇಹ – ನಾಥ ನಾಥ್ಯೊ ನಹಿ ಛೂಟೈ,
ತಿಯ ಕೃಸಾನ ಪಿಯ ಬೈಲಹಿ ಕೂಟೈ ॥ ॥೫೯॥

ಜ್ಯು ಸುವಾ ಪಿಂಜರೆ ಮೈಂ ಬಂಧುವಾ,
ಸಿಖಯೋ ಬೋಲತ ಸುದ್ಧ ಅಸುದ್ಧವಾ ।
ತೈ ಸೈಂ ಜೊ ಕಛು ನಾರಿ ಶಿಖಾವತ,
ಸೊ ಗುರು ಪಿತು ಮಾತ ಹೀ ಸುನಾವತ ॥ ॥೬೦॥

ಜೈ ಸೈ ಮೋರ ಮೋರನೀ ಆಗೈ,
ನಾಚಿ ರಿಝಾಯ ಆಪ ಅನುರಾಗೈ ।
ತೈ ಸೈ ವಿವಿಧವೇಷ ಕರಿ ತಿಯ ಕೊ,
ಮನ ರಿಝಾಯ ರೀಝುತ ಮನ ಪಿಯಕೊ ॥ ॥೬೧॥

ಜಬ ದೂ ಹೂನಕೊ ಮನ ಅನುರಾಗ್ಯೋ,
ತಬಹಿ ಮದನ ಮದಿರಾ ಮದಜಾಗ್ಯೋ ।
ಭಯೆ ಬಾವರೆ ವಸನಹು ತ್ಯಾಗೆ,
ಅತಿ ಉನ್ಮತ ಘೂರನ ಪುನಿಲಾಗೆ ॥ ॥೬೨॥

ಪ್ರೇತರೂಪ ಧರಿ ನಗ್ನ ಆ ಮಂಗಲ,
ಭಿರಿ ಭಿರಿ ಭಿರತ ಮೋಷ ಮನ ದಂಗಲ ।
ಜ್ಯೂ ಲೋಟತ ಮದ್ಯ ವಿಮತವಾರೊ,
ಗಿನತ ಮಲೀನ ಗಲೀನನ ನಾರೋ ॥ ॥೬೩॥

ತ್ಯೂ ನರನಾರೀ ಮದನ ಮದ ಅಂಧೇ,
ಅತಿ ಗಲೀನ ಅಂಗನ ಮ್ಹೈ ಬಂಧೆ ।
ಕರತ ಮದನ ಮದ ಭ್ರಮಜೆ ಮನಕೂ,
ಹ್ವೈ ಅಚರಜ ಸುನಿತ್ಯಾಗೀ ಜನಕೂ ॥ ॥೬೪॥

ನಸ್ಯೈ ಮದದನ ಮದತ್ಯೈ ಮತಿ ನರಕೀ,
ಲಖತ ನ ಊಂಚ ನೀಚ ಪರಘರಕೀ ।
ತಿಯಹೂ ಬಾವರೀ ಮದನ ಬನಾಈ,
ಕ್ರಿಯಾದುಖದ ಜಿಹಿ ಹ್ವೈ ಸುಖದಾಈ ॥ ॥೬೫॥

ಪ್ರಬಲ ಕಾಮಮದಿರಾ ಮದ ಜಾಗ್ಯೈ,
ತಬ ದ್ವಿಜತಿಯ ಧಾನಕತ್ಯೈ ಲಾಗ್ಯೈ ।
ಪಿಯೆ ಮದನ ಮದಿರ ನರನಾರೀ,
ಐಸ್ಯೈ ಕರತ ಅನಂತ ಖುವಾರೀ ॥ ॥೬೬॥

ಕಾಮ ದೋಷ ಯೂಂ ನರಹೀ ಬಗೋವತ,
ಪ್ರಕಟ ಸುಂದರೀ ಸೋತಿಯ ಜೋವತ ।
ಯಾತ್ಯೈ ಅತಿಸುರೂಪ ತಿಯ ದುಖದಾ,
ತಾಕೊ ತ್ಯಾಗ ಕಹತ ಮುನಿ ಸುಖದಾ ॥ ॥೬೭॥

ಜೊ ಸುರೂಪ ತಿಯಮ್ಹೈ ಅನುರಾಗತ,
ವಿಷಸಮ ದುಖದ ಪೇಖಿ ನಹಿ ಭಾಗತ ।
ಉಭಯ ಲೋಕಕೀ ಕರತ ಸುಹಾನೀ,
ಮುನಿಜನ ಗನಗುನ ಸಾಖ ಬಖಾನೀ ॥ ॥೬೮॥

ಜೊ ನಾನಾವಿಧ ಭೋಜನ ಖಾನ್ಯೆ,
ರಸತಾಕೊ ಫಲ ಬಿಂದು ಉಪಾವ್ಯೆ ।
ಜೀವನ ಬಿಂದು ಅಧೀನ ಸಬನಕೊ,
ನಸತ ಸೋಕ ಬಿಂದು ಹುತ್ಯೆ ಮನಕೊ ॥ ॥೧೯॥

ಹ್ವೈ ಜಬ ಜನಕೊ ಮನ ಮಲವಾಸೀ,
ಕರತ ಸೋಕ ಅತಿ ಧರತ ಉದಾಸೀ ।
ರುಧಿರ ನಿವಾಸ ಧರತ ಮನ ಜಬಹೂ,
ಚಂಚಲ ಅಧಿಕ ರಜೋಗುನ ತಬಹೂ ॥ ॥೨೦॥

ಜಬಮನ ಕರತ ಬಿಂದುಮ್ಯೆ ವಾಸಾ,
ತ್ಯ್ಯೆ ಸೋಕ ಚಂಚಲತಾ ನಾಸಾ ।
ಪುನಿ ಆವಹಿ ಬಲವತಾ ಜನ ಜಾಸ್ಯೆ,
ಹ್ವೈ ಪ್ರಸನ್ನ ಸುಭ ಕಾರಜ ರಾಸ್ಯೆ ॥ ॥೨೧॥

ಬಿಂದು ಅಧಿಕ ಹೋತ್ಯೆಜಾ ಜನಮ್ಯೆ,
ಸುಂದರ ಕಾಂತಿ ರೂಪತಾ ತನಮ್ಯೆ ।
ಬಿಂದು ಹುಕೊ ತನಮ್ಯೆ ಉಜಿಯಾರೊ,
ನಸ್ಯ ಬಿಂದು ತನಮುನು ಹತಿಯಾರೊ ॥ ॥೨೨॥

ಜಾಕೊ ಬಿಂದು ನಕಬಹು ನಾಸ್ಯೆ,
ಬಲಿ ನ ಪಲಿತ ತಿಹಿ ತನ ಪರಕಾಸ್ಯೆ ।
ಯೋಗೀ ಕರತ ಖೇಚರೀ ಮುದ್ರಾ,
ತಾತ್ಯೆ ಬಿಂದು ರಾಖಿ ಹ್ವೈ ಭದ್ರಾ ॥ ॥೨೩॥

ಅಷ್ಟಸಿದ್ಧಿ ಜೆ ಧಾರತ ಯೋಗೀ,
ಬಿಂದು ಖಸ್ಯೆ ಹಾರತ ತೆ ಭೋಗೀ ।
ಅಸ ಅತಿ ಉತ್ತಮು ಬಿಂದು ಜು ಜಗಮ್ಯೆ,
ತಿಹಿ ತಿಯಭೀನಿ ಲೇತ ನಿಜ ಭಗಮ್ಯೆ ॥ ॥೨೪॥

ಜ್ಯೂ ಕಿಸಾನ ಬೇಲನಸ್ಸೈ ಊಷಹಿ,
ಪೀರತ ಲೇತ ನಿಚೋರಿ ಪಿಯೂಷಹಿ ।
ಬಾರ ಬಾರ ವೇಲನಸ್ಸೈ ಧಾರಹಿ,
ಹ್ವೈ ಅಸಾರ ದಘ್ಧಾತಬ ಜಾರಹಿ ॥ ॥೭೫॥

ತ್ಯೊಂತಿಯಹ ಬೀಚಿ ಭುಜನಸ್ಸೈ ಪೀರೂಂ
ಭರತ ಯೋನಿ ಘಟ ಖೀಚ ಅವಿಪಾಕೂಂ ।
ಪುನಿ ಪುನಿ ಕರತ ಕ್ರಿಯಾ ನಿತ ತೌಲಾ,
ನೇಷ ಬಿಂದುಕೊ ಬಿಂದು ನ ಜಾಲಾ ॥ ॥೭೬॥

ಕಿಯೊ ಅಸಾರ ನಾರೀ ನರದೇಹಾ,
ಖೀಚ ಪುಲೇಲ ಫೂಲ ಜ್ಯೂಖೋ ।
ಭಾ ಅಕಾಮುಸಬ ತಾಹಿಜರಾಸ್ಸೈ,
ಸೂಕ ಬ್ಯೆನ ಮದಾರ ಲಗಾ ವ್ಯೆ ॥ ॥೭೭॥

ಹ್ವೈಜೂ ಸುರೂಪ ಜೋರ ಧನಭಾರೀ,
ತಾ ನರಸ್ಸೈ ನಾರೀ ಬಲಿಹಾರೀ ।
ಕರಸುರೂಪ ಧನಬಲಕೊ ಅಂತಾ,
ಕಹತಾ ತಾಹಿ ತೂ ಕಾಕೊ ಕಂತಾ ॥ ॥೭೮॥

ತಿಹಿಪುನಿ ಮಿಲನ ಚಹೈ ಜು ಅನಾರೀ,
ಕರ ಧರಸ್ಸೈ ದರತಹು ಧ್ಯೆಗಾರೀ ।
ನಾಕ ಚಢಾಯ ಆಂಖೀಹೊ ಮೋರೈ,
ಜಾಯುನ ಪತಿ ಸ್ಯೆಜಹುಕೆ ದೋರೈ ॥ ॥೭೯॥

ಕೋಟಿ ವಜ್ರ ಸಂಘಾತ ಜೂ ಕರಿಯೆ,
ಸಬಕೊ ಸಾರ ಖೀಂಚಿ ಇಕ ಧರಿಯೆ ।
ತಿಯಕೆ ಹಿಯ ಸಮ ನೋ ನ ಕರೋರಾ,
ರಿಷಿ–ಮುನಿ–ಗನ ಯಹ ದೇತ ಢಂಢೋರಾ ॥ ॥೮೦॥

ಕರತ ಗುಮಾನ ಹಟತ ತಿಯ ಜ್ಯೂಂ ಜ್ಯೂಂ.
ಚಿಪಟತ ಸರಮತಿ ಜನಮನ ತ್ಯೂಂ ತ್ಯೂಂ ।
ಕಬಹುಕ ತಾಕೊ ವಾಂಛಿತ ಕರಿಕೆ,
ಮರನಅಂತ ಛೋಡತ ನ ಪಕರಿಕೆ ॥ ॥೮೧॥

ಪಢ್ಯೋ ಪುರಾನ ವೇದಸ್ಮೃತಿ ಗೀತಾ,
ತರ್ಕನಿಪುನ ಪುನಿ ಕಿನಹು ನ ಜೀತಾ ।
ಕರತ ಅಧೀನ ತಾಹಿತಿಯ ಐಸ್ಯೆ,
ಬಾಜೀಗರ ಬಂದರಕೂ ಜೈಸ್ಯೆ ॥ ॥೮೨॥

ಸಬ ಕಛು ಮನ ಭಾವತ ಕರವಾವತ,
ಪಢ್ಯೆ-ಪಸುಹಿ ಭಲಭಾಂತಿ ನಚಾವತ ।
ಉಕ್ತಿ ಯುಕ್ತಿ ಸಬ ತಬಹೀ ವಿಸರ್ಯೆ,
ಜಬ ಪಂಡಿತ ಪಢಿ ತಿಯಪ್ಯೆ ಢಿಸರ್ಯೆ ॥ ॥೮೩॥

ಜಬ ಕಬಹೂ ಸುಮರತ ಯಹವೇದಾ,
ತಬ ತಿಯ ಮ್ಯೆಮಾನತ ಕಛು ಖೇದಾ ।
ತಿಹಿ ತ್ಯಾಗನಕೀ ಇಚ್ಛಾ ಧಾರ್ಯೆ,
ಪುನಿ ತಿಯ ನ್ಯೆನ ನ್ಯೆನ ನರಸಾರ್ಯೆ ॥ ॥೮೪॥

ಜಹರಕ ಟಾಛ ನೆನಸರ ಬೋರ್ಯೆ,
ತಾನಿ ಕಮಾನ ಭೌಂಹ ಜುಗ ಜೋರ್ಯೆ ।
ಮಾರತ ಸಾರತ ಹಿಯಸಬ ಜನಕೊ,
ವಿಜ್ಞಹು ಬಚತ ನ ಧನ ಸರಗನಕೌ ॥ ॥೮೫॥

ಛಯೊನ ತಿಯಮ್ಯೆ ತೀವ್ರ ವಿರಾಗಾ,
ಯೂಂಮತಿಮಂದಾ ಕರತ ಪುನಿರಾಗಾ ।
ಕರತ ವಿವಿಧ ಆಜ್ಞಾ ಜ್ಯೂಂಚಾಕರ,
ಹುಕುಮು ಕರ್ಯೆ ಬ್ಯೆರೀ ಮನು ರಾಕರ ॥ ॥೮೬॥

ಜೆನರ ನಾರ ನಯನಸರ ವೀಧೇ,
ತಿನಕೆ ಹಿಯೆ ಹೋತ ನಹಿ ಸೀಧೆ ।
ಭಲೊ ಬುರೊ ಸುಖದುಖ ಸಬ ವಿಸರತ,
ತೆ ಕೈ ನೈ ಭವದುಖತೈ ನಿಸರತ ॥ ॥೭೭॥

ನಾರಿ ಬುರೀ ವೇಸ್ಯಾ ಅರು ಪರಕೀ,
ತೀಜೀ ನರಕ ನಿಸಾನೀ ಘರಕೀ ।
ತಜತ ವಿವೇಕೀ ತಿಹೂವ್ಯೆ ನೇಹಾ,
ಕರೈ ನೇಹ ತಿಹ ಸರ ಮುಖ ಖೇಹಾ ॥ ॥೭೮॥

ಅರ್ಥ ಧರ್ಮ ಅರು ಮೋಛೊಕೂ,
ನಾರಿ ಬಿಗಾರತ ಐನ ।
ಸಬ ಅನರ್ಥಕೊ ಮೂಲ ಲಖಿ,
ತ ಜೈ ತಾಹಿ ಹೈ್ವ ಚೈನ ॥ ॥೭೯॥

ಮೇಲಿನ ೫೩ನೇ ದೋಹಾದಿಂದ ೭೯ನೇ ದೋಹಾದವರೆಗೆ ಇರುವ ೩೭ ದೋಹಾಗಳ ಸಾರಾಂಶ. ಈ ದೋಹಾಗಳಲ್ಲಿ ಗ್ರಂಥಕರ್ತರಾದ ಶ್ರೀ ನಿಶ್ಚಲದಾಸರವರು ವಿಷಯಗಳಲ್ಲಿಯು ದೋಷಗಳನ್ನು ನಿರೀಕ್ಷಿಸುವುದರಿಂದ ಉತ್ತಮ ವೈರಾಗ್ಯ ಉಂಟಾಗುತ್ತದೆ ಎಂದು ಭಾವಿಸಿ, ಸ್ತ್ರೀಯೆಂಬ ವಿಷಯ ದಲ್ಲಿರುವ ದೋಷವನ್ನು ಪ್ರಕಟ ಮಾಡಿರುತ್ತಾರೆ ಇದನ್ನು ಸ್ತ್ರೀ ನಿಂದೆ ಎಂದು ಯಾರೂ ಭಾವಿಸಬಾರದು ಸ್ತ್ರೀಯರಿಗೇ ಆಗಲಿ, ಪುರುಷರಿಗೇ ಆಗಲಿ ಜಿಜ್ಞಾಸಾವಸ್ಥೆಯಲ್ಲಿ ವೈರಾಗ್ಯವು ಅಗತ್ಯವಾದುದರಿಂದ ಪ್ರತಿಯೊಬ್ಬರೂ ವಿಷಯಗಳಲ್ಲಿರುವ ದೋಷವನ್ನು ಕಂಡು ವೈರಾಗ್ಯವನ್ನು ಸಂಪಾದನೆ ಮಾಡಿ ಕೊಳ್ಳಬೇಕು. ಈ ಭಾವದಿಂದಲೇ ಕೆಳಗೆ ಕೆಲವು ವಿಷಯಗಳನ್ನು ಬರೆಯುತ್ತೇವೆ.

## ಕಾಮಾಂಧ ಕವಿಕೃತ ಕಾಮಿನಿ ಸ್ತೋತ್ರ

ಕಾಮನ ಸಂಚಾರದಿಂದ ಬುದ್ಧಿ ಭ್ರಷ್ಟವಾದವನಿಗೆ ಕಾಮಾಂಧನೆನ್ನುತ್ತಾರೆ.

ಒಬ್ಬ ಕಾಮಾಂಧನು ಸ್ತ್ರೀಯರಿಗೆ ಬಾಳೆಯ ಕಂಬದಂತೆ ತೊಡೆಗಳು, ಆನೆಯ ಸೊಂಡಿಲಿನಂತೆ ಹಸ್ತಗಳು, ಸಿಂಹದಂತೆ ನಡುವು, ಕನಕ ಕಲಶಗಳಂತೆ ಕುಚಗಳು, ಶಂಖದಂತೆ ಕಂಠ, ಪಿಕ ಎಂಬ ಪಕ್ಷಿಯ ಸ್ವರದಂತೆ ಸ್ವರ, ಚಂದ್ರನಂತೆ ಮುಖ, ದಾಳಿಂಬೆ ಬೀಜದಂತೆ ದಂತಗಳು, ಹವಳದ ಕುಡಿಯಂತೆ ತುಟಿಗಳು, ಸಂಪಿಗೆ ಹೂವಿನಂತೆ ನಾಸಿಕ, ಮೃಗ ಮತ್ತು ಮೀನಿನಂತೆ ಕಣ್ಣುಗಳು, ಧನುಸ್ಸಿನಂತೆ ಹುಬ್ಬುಗಳು, ಖಂಜರೀಟವೆಂಬ ಪಕ್ಷಿಯಂತೆ [illegible], ಹಂಸ ಮತ್ತು ಆನೆಯಂತೆ ನಡಿಗೆ ಇರುವುದೆಂದು ಶೃಂಗಾರ ಪ್ರಸಂಗದಲ್ಲಿ ಸ್ತ್ರೀಯರ ಸೌಂದರ್ಯ ವೈಭವವನ್ನು ವರ್ಣಿಸಿದನು.

ಅವನ ಪಕ್ಕದಲ್ಲಿಯೇ ನಿಂತಿದ್ದ ಮತ್ತೊಬ್ಬ ಕಾಮಾಂಧನಿಗೆ ಈ ವರ್ಣನೆಯು ಸರಿಹೋಗದೆ, ಪ್ರಥಮ ಕಾಮಾಂಧನಿಗೆ "ಎಲೈ ಮೂರ್ಖನೆ, ನಿನಗೆ ಸ್ತ್ರೀ ವೈಭವವೇ ತಿಳಿಯದು. ನೀನು ಸುಂದರಿಗೆ ಮೃಗಲೋಚನೆ ಎಂತಲೂ, ಮೀನಲೋಚನೆಯೆಂತಲೂ ವರ್ಣಿಸುವೆಯಾ ? ಸುಂದರಿಯ ನಯನಗಳು ಹೇಗಿರುವುವೆಂಬುದನ್ನು ತಿಳಿದಿರುವೆಯಾ ? ಸುಂದರಿಯ ನಯನದ ಮುಂದೆ ಮೃಗ, ಮೀನಿನ ನಯನಗಳನ್ನು ನಿವಾಳಿಸಬೇಕು. ಮತ್ತು ನೀನು ಸ್ತ್ರೀಯರ ಹುಬ್ಬುಗಳು ಧನುಸ್ಸಿನಂತೆ ಇರುವವೆಂದು ವರ್ಣಿಸಿದೆ. ಸ್ತ್ರೀಯ ಕಣ್ಣು ಹುಬ್ಬಿನ ಮುಂದೆ ಧನುರ್ಧರರನ್ನು ನಿವಾಳಿಸಬೇಕು. ಸ್ತ್ರೀಯ ಮುಖವು ಚಂದ್ರನಿಗೆ ಸಮಾನವೆಂದು ಹೇಳುವಿಯಾ ? ಸ್ತ್ರೀಯ ಮುಖದ ಮುಂದೆ ಚಂದ್ರನನ್ನು ನಿವಾಳಿಸಬೇಕು. ಈ ರೀತಿ ಸೌಂದರ್ಯ ಶಾಲಿಯಾದ ಸ್ತ್ರೀಗೆ ನಿಂದ್ಯ ಪದಾರ್ಥದಿಂದ ಹೋಲಿಸುವುದು ಸ್ತ್ರೀನಿಂದೆಯೆಂದು ತಿಳಿಯಬೇಕು" ಎಂದು ಹೇಳಲು, ಈ ಮಾತನ್ನು ಕೇಳಿ ಪ್ರಥಮ ಕಾಮಾಂಧನು "ನಾರೀ ವದನವು ಚಂದ್ರನಂತೆ ಇರುವುದೆಂದು ವರ್ಣಿಸಿದರೆ ಅದು ನಿಂದೆಯಲ್ಲ, ಸ್ತುತಿಯೇ. ಚಂದ್ರನನ್ನು ನೋಡಿದಾಗ ಮನಸ್ಸಿಗೆ ಆಹ್ಲಾದ ಉಂಟಾದಂತೆ ನಾರೀ ವದನವನ್ನು ನೋಡಿದಾಗ ಆಹ್ಲಾದ ಉಂಟಾಗುವುದು. ಈ ಆಹ್ಲಾದವೆಂಬ ಅಂಶದಿಂದ ನಾರೀ ಮುಖಕ್ಕೆ ಚಂದ್ರನ ದೃಷ್ಟಾಂತವು "ಯೋಗ್ಯವಾದುದು" ಎಂದನು. ಈ ರೀತಿ ಇವರಿಬ್ಬರೂ ವಾದಿಸುತ್ತಿರುವಾಗ ಆ ಮಾರ್ಗದಲ್ಲಿ ಹೋಗುತ್ತಿದ್ದ ಮೂರನೆಯ ಕಾಮಾಂಧನು ಅವನಿಗೆ

“ಎಲೋ ಹುಚ್ಚಾ ! ಕಾಮಿನಿ ಮುಖಕ್ಕೆ ಚಂದ್ರೋಪಮ ಹೇಳಿದ ನೀನು ಚಂದ್ರನಲ್ಲಿರುವ ಅವಗುಣಗಳನ್ನು ತಿಳಿದಿರುವೆಯಾ ? ಎಲೋ ! ಚಂದ್ರನು ಸದಾ ಅಪೂರ್ಣ ; ತಿಂಗಳಿಗೊಂದು ಸಾರೆ ಮಾತ್ರ ಪೂರ್ಣನಾಗುತ್ತಾನೆ. ಆಗ ಅವನನ್ನು ನುಂಗುವುದಕ್ಕೆ ಕೇತುವು ಸಿದ್ಧನಾಗಿಯೇ ಇರುತ್ತಾನೆ. ಚಂದ್ರನ ಮುಖದಲ್ಲಿ ಸದಾ ಇರುವ ಕಳಂಕವನ್ನು ನೀನು ನೋಡಿಯೇ ಇಲ್ಲವೆ ? ನೋಡು ! ಅವನು ಎಂಥ ನಿರ್ದಯನು ! ಪತಿವಿರಹಿತ ಸ್ತ್ರೀ, ಇಲ್ಲವೆ ಸ್ತ್ರೀ ವಿರಹಿತ ಪತಿ – ಇವರು ಸ್ವತಃ ವಿರಹಾಗ್ನಿಯಿಂದ ತಪಿಸುತ್ತಿರುವಾಗ ಈ ದುಷ್ಟನಾದ ಚಂದ್ರನು ಅವರ ಪ್ರಾಣವನ್ನು ತೆಗೆಯಲು ಸಿದ್ಧವಾಗುವನು. ಎಲೈ ! ಇವನು ಪಾಪಿ, ಇವನ ಮುಖವನ್ನೂ ಸಹ ನೋಡಕೂಡದು. ಈ ಕಾರಣದಿಂದಲೇ ಭಾದ್ರಪದ ಶುದ್ಧ ಚೌತಿ ದಿವಸ ಚಂದ್ರನ ಮುಖವನ್ನು ಯಾರೂ ನೋಡುವುದಿಲ್ಲ. ಇಂಥಾ ದೋಷಪೂರ್ಣನಾದ ಚಂದ್ರನನ್ನು ದೋಷರಹಿತಳಾದ ಸ್ತ್ರೀ ಮುಖಕ್ಕೆ ಹೋಲಿಸುವೆಯಾ ? ನಿನಗೆ ಸಹಸ್ರ ಜನ್ಮದಲ್ಲಿಯೂ ಸ್ತ್ರೀ ದರ್ಶನವೇ ಆಗಕೂಡದು” ಎಂದು ಕೋಪದಿಂದ ಹೇಳಲು, ಅದಕ್ಕೆ ಪ್ರಥಮ ಕಾಮಾಂಧನು ವಿನಯದಿಂದ– “ಸಹೋದರಾ! ನೀನು ಹೇಳುವುದೆಲ್ಲ ಸರಿ. ಚಂದ್ರನು ಸರ್ವ ಪ್ರಕಾರದಿಂದಲೂ ದೂಷಿತನೇ. ಕಾಮಿನಿ ವದನವು ಎಲ್ಲಾ ವಿಧದಿಂದಲೂ ನಿರ್ದೋಷವಾಗಿದೆ. ಆದುದರಿಂದ ಸ್ತ್ರೀಯರ ಮುಖಕ್ಕೆ ಚಂದ್ರನ ಸಾಮ್ಯವು ಸರಿಯಾಗಲಾರದು. ಆದರೂ ಚಂದ್ರನನ್ನು ಅಮೃತಕರನೆನ್ನುತ್ತಾರೆ ಅವನಲ್ಲಿ ಅಮೃತವಿರುತ್ತದೆ. ಇದು ಉತ್ತಮ ಗುಣವಲ್ಲವೆ ?” ಎಂದನು ಈ ರೀತಿ ಇಬ್ಬರೂ ಮಾತಾಡುತ್ತಿರುವಾಗ ದೂರದಲ್ಲಿ ನಿಂತಿದ್ದ ನಾಲ್ಕನೇ ಕಾಮಾಂಧನು ಕೇಳಿ ಸಹಿಸಲಾರದೆ, “ಎಲೋ ಮೂರ್ಖನೆ ! ನೀನು ಚಂದ್ರನಲ್ಲಿ ಅಮೃತವಿರುವುದೆಂದು ಹೇಳಿದ ಮಾತು ನಿಜವೆಂದು ತಿಳಿದಿರುವೆಯಾ ? ಚಂದ್ರನಲ್ಲಿ ನಿಜವಾಗಿ ಅಮೃತವಿರುವುದೆ ! ನಿಜವಾಗಿದ್ದರೆ ಚಂದ್ರನಿಗೇಕೆ ಕ್ಷಯ ರೋಗ ಬರುತ್ತಿತ್ತು ! ಎಲೋ ! ಮೂಢರಾದ ವೇದಾಂತಿಗಳು ಮೋಕ್ಷವನ್ನು ಅಮೃತವೆನ್ನುವಂತೆ ಕರ್ಮವಾದಿಗಳು ಚಂದ್ರನನ್ನು ಅಮೃತಕರನೆನ್ನುತ್ತಾರೆ. ಎಲವೊ ! ಮೋಕ್ಷವು ನಿಜವಾಗಿ ಅಮೃತ ಸ್ವರೂಪವಾಗಿದ್ದರೆ ಜೀವನ್ಮುಕ್ತ ವಿದ್ವಾಂಸ

ರೆಂದು ಹೇಳಿಕೊಳ್ಳುವವರು ನೀರು ನೀರು, ಎಂದು ನೀರಿಗಾಗಿ ಪ್ರಾಣವನ್ನು ಏಕೆ ಬಿಡುತ್ತಿದ್ದರು ? ಎಲೋ ಹುಚ್ಚಾ! ತಿರುಕನು ತನ್ನ ಮಗನಿಗೆ ರಾಜನೆಂದು ಹೆಸರಿಟ್ಟಾಕ್ಷಣಕ್ಕೆ ಆ ದರಿದ್ರನು ರಾಜನಾಗುವನೆ ? ಈ ರೀತಿ ಕರ್ವಿ ಮತ್ತು ವೇದಾಂತಿಗಳಿಂದ ಅಮೃತಕರನೆಂಬ ಹೆಸರಿನಿಂದ ಕರೆಯಲ್ಪಡುವ ಆ ಕ್ಷಯ ರೋಗಿಯಾದ ಚಂದ್ರನೂ, ಶೂನ್ಯರೂಪವಾದ ಮೋಕ್ಷವೂ ಅಮೃತವಾಗುವುದೆ? ಸರ್ವರಿಗೂ ಪ್ರತ್ಯಕ್ಷವಾಗಿ ತೋರುವ ನಾರಿಯ ಅಧರೋಷ್ಠದಲ್ಲಿ ನಿಜವಾದ ಅಮೃತವಿರುತ್ತದೆ. ನೋಡು ! ಮನಸ್ಸಿಗೂ, ಶರೀರಕ್ಕೂ ಎಷ್ಟು ತಾಪ ವಾದರೂ ಆಗಿರಲಿ, ಸ್ತ್ರೀ ಮುಖ ಚುಂಬನವನ್ನು ಮಾಡುತ್ತಲೇ ಸಕಲ ತಾಪಗಳೂ ಶಾಂತಿಯಾಗಿ, ಆಗಾಗಲೇ ಅಜರಾಮರ ಕಾಯವಾಗುತ್ತದೆ” ಎಂದು ನುಡಿದನು.

## ಸುಜ್ಞ ಕವಿಕೃತ ನಾರೀ ಶರೀರ ವರ್ಣನೆ

ಈ ರೀತಿಯಾಗಿ ಕಾಮಾಂಧಕಾರರಾದ ಕವಿಗಳು ಒಬ್ಬರಿಗಿಂತ ಒಬ್ಬರು ಉತ್ತಮೋತ್ತಮವಾದ ಉಪಮಾನಗಳನ್ನು ಹೇಳುತ್ತಾ ಮಲ ಮಾಂಸಗಳಿಂದ ತುಂಬಿದ ನಾರಿಯ ಶರೀರವನ್ನು ಸೌಂದರ್ಯವುಳ್ಳದ್ದಾಗಿ ಹೇಳಿಕೊಳ್ಳು ತ್ತಿದ್ದರು. ಭರ್ಚು ಮಂತ್ರಿಯು ಮಾತ್ರ ಅಲ್ಲಿ ದೋಷವನ್ನೇ ಸಂದರ್ಶಿಸಿ ತನ್ನ ಮನಸ್ಸಿನಲ್ಲಿ ಸೂಜ್ಞಜನರಿಂದ ನಿಂದ್ಯವಾದ ನಾರೀ ಶರೀರದಲ್ಲಿ ರಮ ಮಾಣನಾದ ಕಾಮಾಂಧನಾದ ನನಗೆ ಧಿಕ್ಕಾರವಿರಲಿ ಎಂದುಕೊಳ್ಳುತ್ತಿದ್ದನು.

ಸಹಜವಾಗಿ ಸುಂದರವಾಗಿರುವ ಪದಾರ್ಥಕ್ಕೆ ಹೊರಗಿನ ಅಲಂಕಾರ ಗಳ ಅಗತ್ಯವಿಲ್ಲ ಎಂಬುದು ಸ್ಪಷ್ಟ. ನಾರಿಗೆ ಎಷ್ಟು ಅಲಂಕಾರಗಳನ್ನು ಮಾಡಿದರೂ ಕಡಿಮೆಯೇ. ಇದರಿಂದ ನಾರಿಯ ಶರೀರವು ಅತಿ ಕುರೂಪಿ ಎಂದು ಸಿದ್ಧವಾಗುತ್ತದೆ. ಏಕೆಂದರೆ ಅಲಂಕಾರಕ್ಕೆ ಒಂದು ಸ್ವಭಾವ ಅದೇ ನೆಂದರೆ, ಅಲಂಕಾರವು ತಾನು ಯಾವ ಸ್ಥಾನದಲ್ಲಿರುವುದೋ ಆ ಸ್ಥಾನದ ಕುರೂಪತ್ವವನ್ನು ಆಚ್ಛಾದಿಸಿ ನೋಡುವವರ ದೃಷ್ಟಿಗೆ ಸೌಂದರ್ಯವನ್ನು ತೋರಿಸುವುದು. ಇದರಿಂದ ಕುರೂಪ ಪದಾರ್ಥವು ಸುಂದರವಾಗಿ ಕಂಡು ಬರುವುದು. ಆದುದರಿಂದ ಅಲಂಕಾರದ ಉಪಯೋಗವು ಕುರೂಪ ಮನುಷ್ಯ

ರಿಗೇ ವಿನಹ ಸುಂದರ ಮನುಷ್ಯರಿಗೆ ಅಗತ್ಯವಿಲ್ಲ. ಒಂದು ವೇಳೆ ಸುಂದರ ಮನುಷ್ಯನು ಅಲಂಕಾರವನ್ನು ಮಾಡಿದರೆ ಆ ಅಲಂಕಾರವು ಅವನ ಸೌಂದರ್ಯಕ್ಕೆ ಆಚ್ಛಾದಕವಾಗುವುದು. ಷಡ್ಗುಣೈಶ್ವರ್ಯ ಸಂಪನ್ನನಾದ ಪರಮಾತ್ಮನ ಸೌಂದರ್ಯ ವರ್ಣನ ಪ್ರಸಂಗದಲ್ಲಿ ಬರುವ ಒಂದು ಕಥೆ ಹೀಗಿದೆ.

ಒಂದಾನೊಂದು ಸಮಯದಲ್ಲಿ ತ್ರೈಲೋಕ್ಯ ಸುಂದರನಾದ ಕಾಮದೇವನ ತಂದೆಯಾದ ಭಗವಂತನಾದ ವಿಷ್ಣುವು ಸಿಂಹಾಸನಾರೂಢನಾಗಿರುವಾಗ ಸಕಲ ಅಲಂಕಾರಗಳು ಎದುರಿಗೆ ಬಂದು ನಿಂತು "ಹೇ ಭಗವಂತನೇ, ನೀನು ಕರುಣಾಸಾಗರ. ನೀನು ನಮ್ಮ ಮೇಲೆ ಅನುಗ್ರಹ ಮಾಡಿ ನಮಗೆ ಇಂತಹ ಉತ್ತಮ ಜನ್ಮ ದಯಪಾಲಿಸಿದಿ. ನಮ್ಮ ಈ ಉತ್ತಮ ಜನ್ಮಕ್ಕೆ ಕಾರಣವೇನೆಂದರೆ, ನಮ್ಮ ಸಹವಾಸದಿಂದ ಕುರೂಪ ಪದಾರ್ಥಗಳೆಲ್ಲವೂ ಸುರೂಪಗಳಾಗಿ ತೋರುತ್ತವೆ ದೂಷಿತ ಪದಾರ್ಥಗಳೆಲ್ಲವೂ ಭೂಷಿತಗಳಾಗಿ ತೋರುತ್ತವೆ ಈ ಪ್ರಕಾರವಾಗಿ ಸಕಲ ದೂಷಿತ ಕುರೂಪ ಪದಾರ್ಥಗಳನ್ನೂ ನಾವು ಉದ್ಧರಿಸುತ್ತೇವೆ. ಆದರೂ ನಮ್ಮನ್ನು ಶೋಭಿತರನ್ನಾಗಿ ಮಾಡಿ ಉದ್ಧರಿಸುವ ಯಾರನ್ನೂ ಸೃಷ್ಟಿಸಿಲ್ಲ. ಹೇ ಪರಮಾತ್ಮನೇ, ದಾಸಾನುದಾಸರ ಮೇಲೆ ಇಷ್ಟು ನಿರ್ದಯ ಮಾಡಬಹುದೆ? ನಾವು ಅನಾಥರು. ನಮ್ಮನ್ನು ಉದ್ಧರಿಸುವ ನಾಥನು ನೀನಲ್ಲದೆ ಮತ್ತೆ ಯಾರೂ ಇಲ್ಲ" ಎಂದು ಶರಣಾಗತರಾದ ಅಲಂಕಾರಗಳ ಪ್ರಾರ್ಥನೆಯನ್ನು ಕೇಳಿ ಭಕ್ತ ಕಾರ್ಯ ಕಲ್ಪದ್ರುಮನಾದ ಭಗವಂತನು ಅವರ ಮನಸ್ಸಿನಲ್ಲಿರುವ ಅಭಿಪ್ರಾಯಗಳನ್ನು ತಿಳಿದು ಆಶೀರ್ವದಿಸಿ ಕೆಳಗೆ ಬರೆದಂತೆ ಹೇಳಿದನು.

ಹೇ ಪರೋಪಕಾರನಿರತರಾದ ಅಲಂಕಾರಗಳೇ, ನೀವು ಧನ್ಯರು. ಇದೇ ವಿಷಯವನ್ನು ಶಾಸ್ತ್ರದಲ್ಲಿ—

ಶ್ಲೋಕ – ಪರೋಪಕಾರಾಯ ಫಲಂತಿ ವೃಕ್ಷಃ,
ಪರೋಪಕಾರಾಯ ವಹಂತಿ ನದ್ಯಃ
ಪರೋಪಕಾರಾಯ ದುಹಂತಿ ಗಾವಃ,
ಪರೋಪಕಾರಾಯ ಸತಾಂ ಶರೀರಮ್ ||

ಎಂದು ಹೇಳಿದೆ. ಹೇ ಅಲಂಕಾರಗಳೇ, ನಿಮ್ಮದು ಸಾಧು ಸ್ವಭಾವ ನೀವು ಪರೋಪಕಾರಕ್ಕಾಗಿ ನಿಮ್ಮ ಶರೀರವನ್ನು ಸವೆಸುವಿರಿ. ಇಂಥ ಸದ್ಗುಣಗಳುಳ್ಳ ನೀವು ನಿಮ್ಮ ಉದ್ಧಾರಕ್ಕಾಗಿ ಚಿಂತೆ ಮಾಡುವ ಅಗತ್ಯವಿಲ್ಲ ನಾನು ನಿಮ್ಮನ್ನು ಅತ್ಯಂತ ಶೋಭಾಯುತರನ್ನಾಗಿ ಮಾಡಿ ಉದ್ಧಾರ ಮಾಡುತ್ತೇನೆಂದು ಹೇಳಿ ಪರಮಾತ್ಮನು ಆ ಅಲಂಕಾರಗಳಲ್ಲಿ ಒಂದೊಂದನ್ನೂ ತೆಗೆದುಕೊಂಡು ತನ್ನ ದೇದೀಪ್ಯಮಾನವಾದ ಅತ್ಯಂತ ಸುಂದರವಾದ ಶರೀರದಲ್ಲಿ ಧರಿಸಲಾರಂಭಿಸಿದನು. ಯಾವ ಸ್ಥಾನದಲ್ಲಿ ಅಲಂಕಾರವನ್ನು ಧರಿಸುತ್ತಲೇ ಅದರ ಪಕ್ಷದಲ್ಲಿರುವ ಪರಮಾತ್ಮನ ಸುಂದರಾಂಗವು ಅಲಂಕಾರಕ್ಕೂ ಅಲಂಕಾರ ವಾಗುವುದರಿಂದ ಆ ಅಲಂಕಾರಗಳು ಅತ್ಯಂತ ಸುಂದರವಾಗಿ ತೋರಹತ್ತಿದುವು.

## ಸ್ತ್ರೀ ನಾಚುವುದಕ್ಕೆ ಕಾರಣ

ಅಲಂಕಾರಗಳು ಕುರೂಪಕ್ಕೆ ಆಚ್ಛಾದಕವೆಂಬುದು ನಿರ್ಣಯವಾಯಿತು. ಸ್ತ್ರೀಯಾದರೋ ಸದಾ ಅಲಂಕಾರಪೂರ್ಣಳಾಗಿದ್ದರೂ ಅವಳಲ್ಲಿ ಅಲಂಕಾರದ ಇಚ್ಛೆಯು ನಾಶವಾಗಿರುವುದಿಲ್ಲ. ತಾಯಿ, ತಂದೆ, ಮಾವ, ಪತಿ, ಮಕ್ಕಳು ಮೊದಲಾದವರಿಗೆ ಅಲಂಕಾರಕ್ಕಾಗಿ ಪೀಡಿಸುತ್ತಿರುವಳು. ಈ ಸಂಗತಿ ಎಲ್ಲರಿಗೂ ತಿಳಿದ ವಿಷಯವೇ. ಸ್ತ್ರೀಯು ಸಹಜವಾಗಿ ಸುಂದರಿಯಾಗಿದ್ದರೂ ಅಲಂಕಾರದ ಆಸೆಯನ್ನು ಬಿಟ್ಟಿರುವುದಿಲ್ಲ. ಅಲಂಕಾರವು ಕುರೂಪಕ್ಕೆ ಆಚ್ಛಾದಿತವಾದಂತೆ ಸುಗಂಧವು ದುರ್ಗಂಧಕ್ಕೆ ಆಚ್ಛಾದಿತವಾಗಿರುವುದು· ಸ್ತ್ರೀಗೆ ಅಲಂಕಾರದ ಅಪೇಕ್ಷೆ ಇದ್ದಂತೆ ಪುಷ್ಪ ಚಂದನ ಮೊದಲಾದ ಸುಗಂಧದ ಅಪೇಕ್ಷೆಯೂ ಇರುತ್ತದೆ ಅಲಂಕಾರದ ಅಪೇಕ್ಷೆಯಿಂದ ಸ್ತ್ರೀಯು ಕುರೂಪಿಣಿಯೆಂದು ಸಿದ್ಧವಾದಂತೆ, ಸುಗಂಧದ ಅಪೇಕ್ಷೆಯಿಂದ ದುರ್ಗಂಧಿಯೆಂದೂ ಸಿದ್ಧವಾಗುತ್ತದೆ

ಸ್ತ್ರೀಯು ಸೌಂದರ್ಯಶಾಲಿಯಾಗಿದ್ದರೂ ಸದ್ಗುಣಶಾಲಿಯಲ್ಲವೆಂದು ತೋರುತ್ತದೆ. ಹೇಗೆಂದರೆ, ಬ್ರಹ್ಮದೇವನು ನಾರೀ ಮೂರ್ತಿಯನ್ನು ಸೃಷ್ಟಿಸುವಾಗ ಸಾಮಗ್ರಿಯ ಅಭಾವದಿಂದ ಕೆಲವು ದಿವಸ ಸೃಷ್ಟಿಕರ್ತನ ಕಾರ್ಯಕ್ಕೆ ವಿಘ್ನವಾಯಿತಂತೆ. ಆ ಸೃಷ್ಟಿ ಸಾಮಗ್ರಿಗಳು ಯಾವುವೆಂದರೆ–

ಶ್ಲೋಕ – ಅನೃತಂ ಸಾಹಸಂ ಮಾಯ,
ಮೂರ್ಖತ್ವಮತಿಲೋಭತಾ ।
ಅಶೌಚತ್ವಂ ನಿರ್ದಯತ್ವಂ,
ಸ್ತ್ರೀಯಾ ದೋಷಸ್ಸ್ವಭಾವಜಾಃ ॥ ॥೯೦॥

ಅರ್ಥ – ಈ ಏಳು ದೋಷಗಳು ನಾರೀ ರೂಪ ಕಾರ್ಯಕ್ಕೆ ಉಪಾದಾನ ಸಾಮಗ್ರಿಗಳು ಇವುಗಳಲ್ಲಿ ಒಂದು ಸಾಮಗ್ರಿ ಕಡಿಮೆಯಾದರೂ ನಾರೀರೂಪ ಕಾರ್ಯವು ಸಿದ್ಧಿಸಲಾರದು. ಆದುದರಿಂದ ಈ ಏಳು ದೋಷಗಳು ನಾರಿಯಲ್ಲಿ ಜನ್ಮದಿಂದಲೇ ಸ್ವಭಾವಸಿದ್ಧವಾಗಿರುತ್ತವೆ ಜನ್ಮದ ನಂತರ ಸ್ವಸಂಪಾದಿತ ದೋಷಗಳು ಪ್ರತ್ಯೇಕವಾಗಿ ಅದರ ಪರಾಕ್ರಮವನ್ನು ಅನುಸರಿಸಿ ಹೆಚ್ಚುಕಡಿಮೆಯಾಗಿರಬಹುದು. ಹೇಗೆಂದರೆ, ಪಿತ್ರಾರ್ಜಿತ ದ್ರವ್ಯವು ಸಹಸ್ರ ಸಂಖ್ಯೆಯಲ್ಲಿ ದೊರಕಿದರೆ ಪರಾಕ್ರಮವಂತನಾದ ಪುತ್ರನು ಲಕ್ಷ ಸಂಖ್ಯೆ ಮಾಡಿಕೊಳ್ಳುತ್ತಾನೆ.

ಈ ರೀತಿಯಾಗಿ ಸ್ತ್ರೀಯು ಕೆಲವು ಪ್ರಸಂಗಗಳಲ್ಲಿ ಕೇವಲ ದುರ್ಗುಣದ ಗಣಿಯೇ ಆದುದರಿಂದ ವೇದದಲ್ಲಿ (೧) ಬಹಿರಂಗ ಸಾಧನ ತ್ಯಾಗ ಪ್ರಸಂಗದಲ್ಲಿಯೂ, (೨) ವೈರಾಗ್ಯ ಪ್ರಸಂಗದಲ್ಲಿಯೂ ಮತ್ತು (೩) ಉಪರತಿ ಪ್ರಸಂಗದಲ್ಲಿಯೂ ಸ್ತ್ರೀ ತ್ಯಾಗವು ಹೇಳಲ್ಪಟ್ಟಿದೆ. ವ್ಯವಹಾರದಲ್ಲಿ ಸಾಧಾರಣ ಪ್ರಸಂಗದಲ್ಲಿ ಒಂದು ಸಾರಿ, ಅವಶ್ಯ ಪ್ರಸಂಗದಲ್ಲಿ ಎರಡು ಸಾರಿ ಉಚ್ಚಾರಣೆ ಮಾಡುವುದುಂಟು ಇದರಂತೆ ವೇದದಲ್ಲಿಯೂ ಮೂರು ಸಾರಿ ಹೇಳಿರುವುದರಿಂದ ಸ್ತ್ರೀ ತ್ಯಾಗವು ಅತ್ಯಂತ ಅವಶ್ಯಕವೆಂಬ ಅಭಿಪ್ರಾಯವು ಕಂಡು ಬರುತ್ತದೆ

ಕೃಪಾಳುಗಳಾದ ಋಷಿಗಳು ವಿವಾಹ ಕಾಲದಲ್ಲಿ "ಸಾವಧಾನ ಸಾವಧಾನ" ಎಂದು ಗಟ್ಟಿಯಾಗಿ ಹೇಳಿ ಜನರನ್ನು ಎಚ್ಚರಿಸುವುದು ಕಂಡುಬರುತ್ತದೆ. ಆದರೂ ಶ್ರೀ ರಾಮದಾಸ ಸ್ವಾಮಿಯಂಥ ವಿಚಾರ ಶೀಲರು ಮಾತ್ರ ಅಂಥ ಪ್ರಸಂಗದಿಂದ ತಪ್ಪಿಸಿಕೊಳ್ಳುತ್ತಾರೆ. ಶ್ರೀ ಸಮರ್ಥ ರಾಮದಾಸ ಸ್ವಾಮಿಗಳ ಕಥೆ :–

ಸಜ್ಜನಗಡದಲ್ಲಿರುವ ಶ್ರೀ ರಾಮದಾಸ ಸ್ವಾಮಿಗಳು ವಿವಾಹಕ್ಕೆ ನಿಂತಿರುವಾಗ ಅಂತರಪಟವನ್ನು ಹಿಡಿದ ಬ್ರಾಹ್ಮಣರು "ಅತಿ ಮುಹೂರ್ತ ಸಾವಧಾನ ಅತಿಸುಲಗ್ನ ಸಾವಧಾನ" ಎಂದು ಕೂಗಿದರು. ಆಗ ಸ್ವಾಮಿಗಳು ತಮ್ಮ ಸಮೀಪದಲ್ಲಿರುವ ಒಬ್ಬ ಬ್ರಾಹ್ಮಣನನ್ನು "ಸಾವಧಾನ ಸಾವಧಾನ" ಅನ್ನುತ್ತಾರಲ್ಲಾ, ಇದಕ್ಕೆ ಅರ್ಥವೇನು?" ಎಂದು ಕೇಳಿದರು. ಆಗ ಆ ಬ್ರಾಹ್ಮಣನು "ಈಗ ರಾಕ್ಷಸಿ ನಿನ್ನ ಹೆಗಲ ಮೇಲೆ ಏರುತ್ತದೆ. ಆದುದರಿಂದ ನೀನು ಸಾವಧಾನವಾಗಿರಬೇಕು ಈಗಲೇ ಏನಾದರೂ ಉಪಾಯವಿದ್ದರೆ ಮಾಡಿಕೊ" ಎಂದು ಹೇಳಿದನು! ಬ್ರಾಹ್ಮಣನ ವಚನವನ್ನು ಕೇಳಿ ಶ್ರೀ ರಾಮದಾಸ ಸ್ವಾಮಿಗಳು ಓಡಿಹೋದರು ಪುನಃ ಮದುವೆಯಾಗಲಿಲ್ಲ.

ಮೂಢರಾದರೋ ಎಷ್ಟು ಕೂಗಿಕೊಂಡರೂ ಕೇಳುವುದಿಲ್ಲ, ಹುಷಾರಿಯಾಗುವುದಿಲ್ಲ ಸಾವಧಾನ ಎಂಬ ಮಾತಿನಿಂದ ದಯಾಳುಗಳಾದ ಸರ್ವಜ್ಞ ಮುನಿಗಳು ಎಲ್ಲರನ್ನೂ ಎಚ್ಚರಿಸುತ್ತಾರೆ.

## ಸ್ತ್ರೀ ಸಂಗತಿಯಿಂದ ವೀರ್ಯನಾಶ

ನಾನಾ ವಿಧದ ಭೋಜನಗಳಿಂದ ವೀರ್ಯದ ಉತ್ಪತ್ತಿಯಾಗುತ್ತದೆ. ಈ ವೀರ್ಯರೂಪವಾದ ಬಿಂದುವಿನ ಅಧೀನವಾಗಿ ಸಕಲ ಜೀವನ ಬಿಂದುಗಳಿರುತ್ತವೆ. ಮನಸ್ಸು ಮಲದಲ್ಲಿ ಇರುವಾಗ ತಮೋಗುಣ ಪ್ರಧಾನದಿಂದ ಉದಾಸೀನ ಪುರುಷನೂ ಸಹ ಶೋಕಕ್ಕೆ ಗುರಿಯಾಗುತ್ತಾನೆ. ಮನಸ್ಸು ರಕ್ತದಲ್ಲಿ ನಿವಾಸ ಮಾಡುವಾಗ ರಜೋಗುಣ ಪ್ರಧಾನದಿಂದ ಅನೇಕ ವಿಧದ ಕಲ್ಪನಾ ಚಿಂತೆಗಳು ಉದ್ಭವಿಸುತ್ತವೆ. ಮನಸ್ಸು ಬಿಂದುವಿನಲ್ಲಿ ಇರುವಾಗ ಸತ್ವಗುಣ ಪ್ರಧಾನದಿಂದ ಸಕಲ ಶೋಕ ಚಾಂಚಲ್ಯಗಳು ನಾಶವಾಗಿ, ತನ್ನನ್ನು ಬಲವಂತನೆಂದು ತಿಳಿದು ಶುಭಕರ್ಮದಲ್ಲಿ ಪ್ರವೇಶ ಮಾಡುವಿಕೆ, ಪ್ರಸನ್ನದಿಂದ ಇರುವಿಕೆ ಇವು ಸಂಭವಿಸುತ್ತವೆ.

ಬಿಂದುವಿನ ಆಧಿಕ್ಯದಿಂದ ಸುಂದರ ಕಾಂತಿಯುಂಟಾಗುತ್ತದೆ. ಈ ಬಿಂದುವನ್ನು ನಾಶಮಾಡಿಕೊಳ್ಳುವವನಿಗೆ "ವಲೀಪಲೀತ" ರೋಗಗಳು ಉಂಟಾಗುತ್ತವೆ.

ಪ್ರಶ್ನೆ ವಲೀಪಲೀತ ರೋಗವೆಂದರೇನು ?

ಉತ್ತರ ಯಾವ ರೋಗದಿಂದ ಶರೀರದ ಚರ್ಮವು ಸುಕ್ಕು ಬೀಳುವುದೋ ಅದು ವಲಿ, ಯಾವುದರಿಂದ ಕೇಶಗಳು ಬೆಳ್ಳಗಾಗುವುವೋ ಅದು ಪಲೀತ ರೋಗ

ಖೇಚರೀ ಮುದ್ರೆಯಿಂದ (ಅಂದರೆ ಲಂಬಿಕಾಯೋಗ ಸ್ಥಿತಿಗೆ ಕೆಲವರು ಖೇಚರೀ ಮುದ್ರೆಯೆನ್ನುತ್ತಾರೆ) ನಾಲಿಗೆಯ ತುದಿಯನ್ನು ತಾಲುರಂಧ್ರದಲ್ಲಿ ನೇರಿಸುವುದಕ್ಕೆ ಲಂಬಿಕಾಯೋಗವೆನ್ನುತ್ತಾರೆ ಈ ಯೋಗದಿಂದ ಯೋಗಿಯು ಬಿಂದುವಿನ ರಕ್ಷಣೆ ಮಾಡಿಕೊಳ್ಳುತ್ತಾನೆ. ಬಿಂದುವಿನ ಆಧಿಕ್ಯದಿಂದಲೇ ಯೋಗಿಯು ಅಷ್ಟ ಮಹಾಸಿದ್ಧಿಗಳನ್ನು ಪಡೆದುಕೊಳ್ಳುತ್ತಾನೆ. ಇಂಥಾ ಉತ್ತಮೋತ್ತಮವಾದ ಬಿಂದುವನ್ನು ಸ್ತ್ರೀಯು ತನ್ನ ಆಕರ್ಷಣ ಶಕ್ತಿಯಿಂದ ತನ್ನಲ್ಲಿ ಆಕರ್ಷಿಸುತ್ತಾಳೆ ಹೇಗೆ ಗಾಣಿಗನು ಕಬ್ಬಿನ ರಸವನ್ನು ಹೀರಿ ಸಿಪ್ಪೆಯನ್ನು ಬಿಡುವನೋ ಹಾಗೆ ಪುರುಷನ ವೀರ್ಯವನ್ನು ತನ್ನಲ್ಲಿ ಆಕರ್ಷಣೆ ಮಾಡುತ್ತಾಳೆ

ಈ ಅವಸ್ಥೆಯು ಮೂರ್ಖನಾದ ಅವಿದ್ವಾಂಸನಿಗೆ ಮಾತ್ರವಲ್ಲ, ವೇದಶಾಸ್ತ್ರ ಸಂಪನ್ನನಾದವನಿಗೂ, ಸಭಾ ವಿಜಯಿಯಾದ ಪಂಡಿತನಿಗೂ ಸಹ ಸಂಭವಿಸುತ್ತದೆ. ಸ್ತ್ರೀಯು ಸಮ್ಮುಖವಾದಾಗ ಯುಕ್ತಿಗಳನ್ನೆಲ್ಲ ಮರೆತು ಇಂದ್ರಜಾಲಿಕನ ಕೋತಿಯಂತೆ ಸ್ತ್ರೀಯು ಆಡಿಸಿದಂತೆ ಅವನು ಆಡುತ್ತಾನೆ. ಒಮ್ಮೊಮ್ಮೆ ಸ್ಮರಣವಾದಾಗ ಕ್ಷಣಮಾತ್ರ ಖೇದವನ್ನು ಪಡೆದು ಸ್ತ್ರೀಯನ್ನು ತ್ಯಾಗಮಾಡಬೇಕೆಂದು ಬಯಸಿದರೂ, ಆಗ ಸ್ತ್ರೀಯು ಸುಮ್ಮನಿರದೆ ಭ್ರುಕುಟೀ ರೂಪ ಧನಸ್ಸನ್ನು ವಕ್ರಮಾಡಿ, ವಿಷದಿಗ್ಧ ಕಟಾಕ್ಷ ಶರಗಳನ್ನು ಸುರಿಸಿ, ಪತಿರೂಪ ಮೃಗವನ್ನು ವಶಮಾಡಿಕೊಳ್ಳುವಳು. ಇದೇ ವಿಷಯವನ್ನು ಶ್ರೀ ಸರ್ವಭೂಷಣ ಶಿವಯೋಗಿಗಳು “ಜಪದ ಕಣ್ಮುಚ್ಚಿ ವ್ರತ ಶೀಲಗಳ ಬಾಯ್ಬಡಿದು ತಪಕೆ ಮಶಿಯನು ಹಚ್ಚಿ, ತತ್ತ್ವಗಳ ತುಳಿದು ಗುಪಿತಯೋಗಕೆ ಕಂಟಕವಾಗಿ ಯತಿಜನರನು ಅಪಹಾಸಕ್ಕೆಡೆಮಾಡಿ ಕೆಡಿಸುವುದರಿಂದ ” ಎಂದು ಹೇಳಿದ್ದಾರೆ.

ಅಹೋ! ಸ್ತ್ರೀ ಸಂಗದಿಂದ ಇಲ್ಲಿಯವರೆಗೆ ಯಾರಿಗಾದರೂ ಹಿತವಾಗಿರುವುದೆ? ಇಲ್ಲ, ಇಲ್ಲ. ಹಿತವಾಗುವ ಸಂಗತಿ ದೂರವಾಯಿತು.

ಪರಾಕ್ರಮಶಾಲಿಗಳಾದ ಸುಂಧೋಪಸುಂದರು, ಭಸ್ಮಾಸುರ, ರಾವಣ, ಧುರ್ಯೋಧನ, ಮೊದಲಾದವರು ಕೇವಲ ಸ್ತ್ರೀವ್ಯಾಮೋಹದಿಂದ ಸಮೂಲ ನಾಶವಾದರು. ಆದುದರಿಂದ ಸ್ತ್ರೀ ತ್ಯಾಜ್ಯವೇ.

## ಪುತ್ರ ದುಃಖ ವರ್ಣನೆ

ದೋಹಾ – ಪುತ್ರ ಸದಾ ದುಖ ದೇತಯು, ಬಿನಾ ಪ್ರಾಪ್ತಿ ದುಖ ಏಕ ।
ಗರ್ಭ–ಸಮಯ ದುಖ ಜನ್ಮದುಖ, ಮರ್ಯೆತು ದುಖ ಅನೇಕ ॥

**ಚೌಪಾಈ** – ಗರ್ಭಧರತ ಜ್ಯೋ ತಾ ನಹಿಂನಾರೀ,
ದುಖ ದಂಪತಿಮನ ತೌಲೌಂಭಾರೀ ।
ಹ್ವೈ ಜು ಗರ್ಭಯುಹ ಚಿಂತನ ನಾಸ್ಸೈ,
ಪುತ್ರಿ ಹೋಯ ಕಿ ಪುತ್ರ ಪ್ರಕಾಸೈ ॥ ॥೯೧॥

ಗರ್ಭಗಿರನ ಕೆ ಹೇತು ಅನಂತಾ,
ತಿನ ತೈ ಡರತ ಕರತ ಅತಿ ಚಿಂತಾ ।
ಹ್ವೈ ಜು ಪೂತ ನವಮಾಸ ಬಿಹಾನ್ಯೈ,
ಜನನೀ ಜನಕ ಅಧಿಕ ದುಖ ಸಾನ್ಯೈ ॥ ॥೯೨॥

ನವಗ್ರಹ ಮ್ಯೈಂ ಇಕದ್ವೈ ನಹಿಂ ಬಿಗರ್ಯೈ,
ಅಸ ಜನ ಕೊ ಜನ್ಮ ನಜಗ ಸಗರ್ಯೈ ।
ಬಿಗರ್ಯೈ ಗ್ರಹಕಿ ನಿಶಿ–ದಿನಚಿಂತಾ,
ಕರತ ಮಾತ–ಪಿತು ಬೈರಿ ಇಕಂತಾ ॥ ॥೯೩॥

ಸಿಸು ಉದಾಸ ಹ್ವೈ ಜಬ ತಜೆ ಬೋಬಾ,
ತಬದೋಊ ಮಿಲಿ ಲಾಗತ ರೋಬಾ ।
ಯಾಂಚಿಂತನ ಕಛು ಗಯೆ ಮಹೀನೆ,
ದಾಂತ ಪೂತಕೆ ನಿಕ ಸೈಂಝೀನೆ ॥ ॥೯೪॥

ಮರತ ಬಾಲ ಬಹು, ನಿಕಸತದಂತಾ,
ತಬ ಯಹ ಚಿಂತಾ–ದುಃಖಿತಿಯ–ಕಂತಾ ।
ಜಿಯೆ ದೂಬರೊ ದುಖತ್ಯೆಂ ವಾರೊ,
ದೇಖಿ ಚುಹಾರೋ ಧರತ ಉತಾರೊ ॥ ॥೯೫॥

ಮ್ಲೇಚ್ಛ ಚಮಾರ ಚೂಹರೆ ಕೋರಿ,
ತಿನತ್ಯೆ ಝುರವಾವತ ದ್ವಿಜ ಧೋರಿ ।
ಸಇಯದ ಖ್ವಾಜಾ ಪೀರ ಫಕೀರಾ,
ಧೋಕತ ಜೋರತ ಹಾಥ ಅಧೀರಾ ॥ ॥೯೬॥

ಜಾಕೂಂ ಹಿಂದೂ ಕಬಹು ನಹಿಂಮಾನ್ಯೆ,
ಪುತ್ರ–ಹೇತು ತಿಹಿ ಇಷ್ಟ ಪಿಛಾನ್ಯೆ ।
ಭೈರೊ ಭೂತ ಮನಾವತ ನಾನಾ,
ಧರತ ಸಿವಾಬಲ ಭೂಮಿ ಮಸಾನಾ ॥ ॥೯೭॥

ಥಾನಕಕೊ ಡಮರೂ ಧರಿ ಬಾಜ್ಯೆ,
ಕರ ಜೋರತ ಪೂಜನ ನಹಿಂ ಲಾಜ್ಯೆ ।
ಔರ ಜಂತ್ರ ತಾಬೀಜ ಧನ್ಯೆರ್ಯೆಂ,
ಲಿಖಿ ಮಥವಾಯ ಪೂತ–ಗರ ಗೆರ್ಯೆ ॥ ॥೯೮॥

ನಿಜಕುಲಮ್ಯೆಂ ಇಕ ಅಚ್ಯುತ ಪೂಜಾ,
ಕಿನಹು ನ ಸುಪನಹು ಸುಮರ್‍ಯೋದೂಜಾ ।
ಸೊ ಕುಲ–ನೇಮ ಪೂತ–ಹಿತ ತ್ಯಾಗ್ಯೋ, ।
ವ್ಯಭಿಚಾರನ ಜ್ಯು ಜಹಂ–ತಹಂ ಲಾಗ್ಯೋ ॥ ॥೯೯॥

ಹೋತ ಸೀತಲಾ ಕೊ ಜಬ ನಿಕಸನ,
ನಸತ ಮಾತ–ಪಿತು ಮನಕೋ ವಿಕಸನ ।
ಸ್ನಾನ–ಕ್ರಿಯಾ ತಜಿರಹತ ಮಲೀನಾ,
ಪರಮದೇವ ಗದಹಾ ಕೊಂಕೀನಾ ॥ ॥೧೦೦॥

ಮೋರಿ ಬಾಗ ಬಕಸಹು ಸಿಸು ಮೋರಾ,
ಗದಹಾ ಮಾತ ಚರಾಊಂ ತೋರಾ ।
ಯುಂ ಕಹಿ ಚನಾ ಗೋದ ಮ್ಯೆಧಾರ್ಯೆಂ,
ಬಿನತಿ ಕರೀ ಗದಹಾಕೂಂಚಾರ್ಯೆ ॥ ॥೧೦೧॥

ಅಸ ಅಸಂತ ದುಖ ತ್ಯೆಂ ಸಿಸು–ಪಾರನ,
ಜುವಾ ಹೋತಲೌಂ ಔರ ಹಜಾರನ ।
ಉಮರ ಪೂತಕೀ ಹ್ವೈ ಜೊ ಥೋರೀ,
ಮರಿ ಹ್ಯೆ ಕರಹು ಉಪಾಯು ಕರೋರೀ ॥ ॥೧೦೨॥

ಮರ್ಯೆ ಮಾತ–ಪಿತ ಕೂಟಹಿ ಮಾಥಾ,
ಮಾನಿ ಆಪಕೊ ದೀನ ಅನಾಥಾ ।
ಹಾಯು ಹಾಯು ಕರಿ ನಿಸದಿನ ರೋವ್ಯೆ,
ಕರೀ ಧಿಕ–ಧಿಕ ನಿಜ-ಜನ್ಮ ಬಿಗೋವ್ಯೆ ॥ ॥೧೦೩॥

ಪೂತ ಮರನಕೊ ಹ್ವೈ ದುಖ ಜ್ಯೆಸ್ಯೆ,
ಲಖತ ಸಪೂತ ಅಪೂತನ ತ್ಯೆಸೊ ।
ಜೋ ಜೀವ್ಯೆ ತೌ ಹೋತಹಿ ತರುನಾ,
ಲಗತ ನಾರೀ ಕೆ ಪೋಷನ–ಭರನಾ ॥ ॥೧೦೪॥

ಜಿನ ಅನೇಕ ಯತ್ನನಿ ಪ್ರತಿಪಾರೌ,
ತಿನಕೂಂ ಜಲ-ಪ್ಯಾವನ ಹ್ಯೆ ಭಾರೌ ।
ರಜನಿ ಸ್ಯೆಜ ಪ್ಯೆ ಸಿಖವ್ಯೆ ನಾರೀ,
ತವಪಿತ–ಮಾತ ದೇಹುಮುಹಿಂ ಗಾರೀ ॥ ॥೧೦೫॥

ಹ್ವೈ ಸಪೂತ ತೌ ಪ್ರಾತಹಿ ಉಠಿಕೆ,
ನವ್ಯೆಂ ದೂರತ್ಯೆಂ ಮಾಥನ ಗರಿಕೆ ।
ಚಹ್ಯೆ ಮಾತಪಿತ ಆವ್ಯೆ ನೇರ್ಯೆಂ,
ಪೂತನ ಸನ್ಮುಖ ಆಂಖಿಹು ಹೇರ್ಯೆ ॥ ॥೧೦೬॥

ಹ್ವೈ ಕಪೂತ ತೌ ಉರತಹಿ ಪ್ರಾತಾ,
ವಚನ ಗಾರೀ-ಸಮ ಬಕಿ ಅಸುಹಾತಾ ।
ಜುದೌ ಹೋಯ ಲೆ ಸಬ ಘರ ಕೊ ಧನ,
ದೆ ಪಿತ-ಮಾತಹಿ ಇಕತಿನಕೊ ತನ ॥ ॥೧೦೭॥

ಫೇರಿ ಸಂಭಾರತ ಕಬ ಹು ನ ತಿನಕೂಂ
ಪೋಷತ ಸಬ ದಿನ ತಿಯ ನಿಜ ತಿನಕು ।
ದೇಖಿ, ಲೇತ ಪಿತ-ಮಾತ ಉಸಾಸಾ,
ಯಾ ವಿಧಿ ಪುತ್ರ ಸದಾ ದುಖರಾಸಾ ॥ ॥೧೦೮॥

ದೋಹಾ - ಕರಿ ವಿಚಾರ ಯೂಂ ದೇಖಿಯೆ, ಪುತ್ರ ಸದಾ ದುಖ-ರೂಪ ।
ಸುಖ ಚಾಹತ ಜೆ ಪೂತತೈಂ, ತೆ ಮೂಢನ ಕೆ ಭೂಪ ॥೧೦೯॥

ತಾತ್ಪರ್ಯ - ಹಿಂದಿನ ೯೦ನೇ ದೋಹಾದಿಂದ ೧೦೯ನೇ ದೋಹಾದ ವರೆಗೆ ೧೯ ದೋಹಾಗಳಲ್ಲಿ ಹೇಳಿದ ಪುತ್ರ ದುಃಖ ವರ್ಣನೆಯ ಸಾರಾಂಶ

ಪುತ್ರನಿಲ್ಲದಿದ್ದರೆ ಒಂದು ದುಃಖ, ಪುತ್ರನು ಹುಟ್ಟಿದರೂ ಒಂದು ದುಃಖ, ಸತ್ತರೂ ಒಂದು ದುಃಖ, ಬದುಕಿದ್ದರೂ ಮತ್ತೊಂದು ತರಹದ ದುಃಖ. ಸಾರಾಂಶವೇನೆಂದರೆ, ಪುತ್ರನು ಭಾವಸ್ಥಾನದಲ್ಲಿದ್ದರೂ, ಅಭಾವ ಸ್ಥಾನದಲ್ಲಿದ್ದರೂ ದುಃಖ ಹೇತುವಾಗಿದ್ದಾನೆ. ಗರ್ಭಧಾರಣೆ ಆದಾಗ ಈ ಗರ್ಭವು ನಿಲ್ಲುವುದೋ ಇಲ್ಲವೋ ? ಬಿದ್ದು ಹೋಗುವುದೋ ? ಒಂದು ಪಕ್ಷ ನಿಂತರೆ ಇದು ಏನು ಪುತ್ರನೋ, ಪುತ್ರಿಯೋ ? ಹೀಗೆ ಚಿಂತಿಸುತ್ತಾ, ಚಿಂತಿಸುತ್ತಾ ಒಂಭತ್ತು ತಿಂಗಳಾಗುತ್ತಲೇ ಸೂತಿಕಾ ಚಿಂತೆ; ನಂತರ ನಿರ್ವಿಘ್ನ ಪ್ರಸವ ಚಿಂತೆ; ಆರನೇ ದಿನದವರೆಗೆ ಷಷ್ಠೀ ಚಿಂತನೆ, ವಿಷಮ ಸ್ಥಾನ ವೃತ್ತಿಗ್ರಹಚಿಂತೆ; ತಾಯಿಗೆ ಹಾಲಿಲ್ಲದಿದ್ದರೆ ಧಾತ್ರಿಚಿಂತೆ, ಶಿಶುವು ಸ್ತನಪಾನ ಮಾಡದಿದ್ದರೆ ಚಿಂತೆ, ದಂತಗಳು ಬರುವಾಗ ದುಃಖ; ಔಷಧದ ವ್ಯವಸ್ಥೆಯ ದುಃಖ

ತಾನು ಕರ್ಮನಿಷ್ಠ ಬ್ರಾಹ್ಮಣನಾಗಿದ್ದರೂ, ದೊಡ್ಡ ದೀಕ್ಷಿತನಾಗಿದ್ದರೂ, ಪುತ್ರನಿಗಾಗಿ ತನ್ನ ಕುಲಧರ್ಮವನ್ನು ಬಿಟ್ಟು, ದೃಷ್ಟಿ ತೆಗೆಯು

ವುದಕ್ಕೂ, ಮಂತ್ರೋಪಚಾರ ಮಾಡುವುದಕ್ಕೂ ಹೀನ ಜಾತಿಯವರನ್ನು ಪ್ರಾರ್ಥಿಸಿ ಮನೆಗೆ ಕರೆ ತರುವಿಕೆ, ಕ್ಷುದ್ರ ದೇವತೆಗಳನ್ನು ಪೂಜಿಸುವಿಕೆ, ಡಮರುವನ್ನು ಬಾರಿಸುವಿಕೆ, ಪಶುಪಕ್ಷ್ಯಾದಿಗಳ ಬಲಿಯನ್ನು ಕೊಡುವಿಕ, ಅಭಕ್ಷ್ಯ ಪದಾರ್ಥಗಳನ್ನು ಭಕ್ಷಿಸುವಿಕೆ, ಮೊದಲಾದ ಅಧರ್ಮಗಳನ್ನು ಮಾಡುವುದು ಕಂಡುಬರುತ್ತದೆ

ಈ ತೊಂದರೆಗಳಿಂದ ಪಾರಾದ ಮೇಲೆ ಪಾಠಶಾಲೆಗೆ ಹೋಗುವ ಚಿಂತೆ, ಪಾಠಶಾಲೆಯಲ್ಲಿ ಹುಡುಗನು ಯಾರಿಂದಲಾದರೂ ಹೊಡೆಯಿಸಿ ಕೊಂಡರೂ, ತಾನು ಯಾರನ್ನಾದರೂ ಹೊಡೆದರೂ ಚಿಂತೆ, ಮಂದ ಬುದ್ಧಿ ಯವನಾಗಿ ವಿದ್ಯಾವಂತನಾಗದಿದ್ದರೂ ಚಿಂತೆ, ವಿದ್ಯಾವಂತನಾಗಿ ವ್ಯವ ಹಾರ ದಕ್ಷನಾಗದಿದ್ದರೂ ಚಿಂತೆ, ದಕ್ಷನಾಗಿದ್ದರೂ ಜೂಜು, ಮದ್ಯಪಾನ, ವ್ಯಭಿಚಾರಾದಿಗಳನ್ನು ಮಾಡುವ ಚಿಂತೆ

ಈ ಪ್ರಕಾರ ಅನಂತ ಅನರ್ಥಗಳಿಂದ ರಕ್ಷಣೆ ಮಾಡುತ್ತಿದ್ದರೂ, ಅಕಸ್ಮಾತ್ ಮಗುವು ಸತ್ತುಹೋದರೆ ಆಗ ಆಗುವ ದುಃಖವು ತಾಯಿತಂದೆ ಗಳಿಗೇ ಅನುಭವ. ಇದು ಮಕ್ಕಳು ಜೀವಂತವಿರುವ ತಂದೆತಾಯಿಗಳಿಗೆ ಹೊಳೆಯಲಾರದು. ಹೇಗೆಂದರೆ ಪ್ರಸೂತಿ ದುಃಖವು ವಂಧ್ಯಾ ಸ್ತ್ರೀಗೆ ಹೇಗೆ ತಿಳಿಯುತ್ತದೆ !

ಒಂದು ವೇಳೆ ಸರ್ವ ದುಃಖಗಳನ್ನೆಲ್ಲಾ ದಾಟಿ ತಾರುಣ್ಯ ಅವಸ್ಥೆಗೆ ಬಂದರೆ ಆಗ ಉಂಟಾಗುವ ದುಃಖದ ರೀತಿಯೇ ಬೇರೆ ಆಜನ್ಮ ದುಃಖವನ್ನು ಅನುಭವಿಸಿ ಲಾಲನ ಪಾಲನೆ ಮಾಡಿದ ತಂದೆ–ತಾಯಿಗಳಿಗೆ ನೀರಡಿಕೆ ಆದರೆ ನೀರು ಕೊಡುವುದೇ ಕಷ್ಟವಾಗುತ್ತದೆ. ರಾತ್ರಿಯಲ್ಲಿ ಅತ್ತೆ ಮಾವಂದಿರು ಬೈಯುತ್ತಾರೆಂದು ಹೆಂಡತಿಯು ಗಂಡನಿಗೆ ಹೇಳಿದರೆ, ಆ ಮಾತನ್ನು ಕೇಳಿ ಒಂದು ವೇಳೆ ಸುಪುತ್ರನಾಗಿದ್ದರೆ ತಾಯಿ–ತಂದೆಗಳ ಮುಖವನ್ನು ನೋಡದೆ ಬೆಳಿಗ್ಗೆ ಎದ್ದು ಹೋಗುತ್ತಾನೆ. ಕುಪುತ್ರನಾಗಿದ್ದರೆ ಬೆಳಿಗ್ಗೆ ಎದ್ದು, ತಾಯಿ ತಂದೆಗಳನ್ನು ಬೈದು, ಹೊಡೆದು ಕೊನೆಗೆ ಧನಧಾನ್ಯಗಳನ್ನು ತೆಗೆದುಕೊಂಡು ಬೇರೆ ಮನೆಗೆ ಹೋಗಿ ಹೆಂಡತಿಯೊಡನೆ ಇದ್ದುಬಿಡುತ್ತಾನೆ. ತಂದೆ ತಾಯಿಗಳು ಹೊಟ್ಟೆಗಿಲ್ಲದೆ ಸಾಯುತ್ತಿದ್ದರೂ ಅತ್ತ ಕಡೆಗೆ ನೋಡುವುದೇ ಇಲ್ಲ.

ಮತ್ತೊಂದು ಶಂಕೆ ತಂದೆ ತಾಯಿಗಳನ್ನು ಸೇವಿಸುವ ಸದ್ಗುಣ ಸಂಪನ್ನನಾದ ಸುಪುತ್ರನಿರುವುದಿಲ್ಲವೆ ? ಎಲ್ಲರೂ ಕುಪುತ್ರರೇ ಇರುವರೇ ? ಅಂದರೆ ಇರಬಹುದು ಇದ್ದರೆ ಅವನಿಂದಾಗುವ ದುಃಖವು ಕುಪುತ್ರ ನಿಂದಾದ ದುಃಖಕ್ಕಿಂತ ಅಧಿಕವಾಗಿದೆ ಹೇಗೆಂದರೆ, ಜೀವದಿಂದಿದ್ದರೂ ಸಂಸಾರವು ಕ್ಷಣ ಭಂಗುರವಾಗಿರುವುದರಿಂದ ತಾಯಿ ತಂದೆಗಳಿಗೆ ಅವನ ಮರಣ ವಿಷಯದಲ್ಲಿ ಸಾಮಾನ್ಯ ಚಿಂತೆಯು ಇದ್ದೇ ಇರುತ್ತದೆ. ಮಗನು ಯಾವುದಾದರೂ ಪರ ಊರಿಗೆ ಹೋಗಿದ್ದರೆ ಅವನು ಬರುವವರೆಗೆ ವಿಯೋಗ ದುಃಖವು ಸಹಿಸಲಾರದೆ ಹೋಗುತ್ತದೆ. ಮಗನು ರೋಗಗ್ರಸ್ತನಾದರೆ ತಂದೆ ತಾಯಿಗಳಿಗೆ ಅನ್ನವು ರುಚಿಸದು. ಅವರಿಗೆ ಸ್ವಪ್ನದಲ್ಲಿಯೂ ಸಹ ಮಗನ ಚಿಂತೆಯೆ ಒಂದು ವೇಳೆ ಮಗನು ರೋಗದಿಂದ ಪರಲೋಕವಾಸಿ ಯಾದರೆ ಆಗ ತಾಯಿ ತಂದೆಗಳಿಗೆ ಆಗುವ ದುಃಖವನ್ನು ವರ್ಣಿಸಲು ಆದಿ ಶೇಷನೂ ಸಹ ಸಮರ್ಥನಲ್ಲ ಇದಕ್ಕೆ ಉದಾಹರಣೆಯಾಗಿ ಶ್ರೀಮದ್ ರಾಮಾ ಯಣದಲ್ಲಿ ಅತ್ಯಂತ ಸುಪುತ್ರನಾದ ಶ್ರವಣನ ಮರಣದ ಕಥೆಯನ್ನು ಜ್ಞಾಪಕಕ್ಕೆ ತಂದುಕೊಂಡರೆ ಸಾಕು. ಈ ಪ್ರಕಾರವಾಗಿ ಕುಪುತ್ರನೇ ಆಗಲಿ, ಸುಪುತ್ರನೇ ಆಗಲಿ, ಇಲ್ಲವೇ ಅತ್ಯಂತ ಸುಪುತ್ರನೇ ಆಗಲಿ ಸದಾ ದುಃಖ ರೂಪನೆಂದು ತಿಳಿಯಬೇಕು

ಈ ರೀತಿ ಪುತ್ರನ ಕಥೆಯನ್ನು ಕೇಳಿ ಒಬ್ಬ ಆಕ್ಷೇಪಕನು ಪುತ್ರನು ದುಃಖದಾಯಕನಾದರೂ ಪುತ್ರಿಯಿಂದ ದುಃಖವಿಲ್ಲವಲ್ಲವೇ ಎಂದು ಕೇಳಿದರೆ, ಪುತ್ರಿಯಿಂದಾಗುವ ತಾಪವು ಪುತ್ರ ತಾಪಕ್ಕಿಂತ ದಶಾಧಿಕವಾಗಿದೆಯೆಂದು ತಿಳಿಯಬೇಕು. ಈ ವಿಷಯವು ತಾಯಿ ತಂದೆಗಳಿಗೆ ಸರ್ವತ್ರಾನುಭವ ವಾಗಿದೆ. ಇದೇ ವಿಷಯವನ್ನು ಪುರಾಣಗಳಲ್ಲಿ "ಪುತ್ರಾದ್ದಶಗುಣ ಕನ್ಯಾ" ಎಂದು ಹೇಳಿದೆ. ಈ ವಚನಗಳಿಂದಲೂ ಪುತ್ರಿಕೆಯಿಂದಾಗುವ ದುಃಖವು ಸ್ಪಷ್ಟವಾಗುತ್ತದೆ.

## ಧನ ದುಃಖ ವರ್ಣನೆ

ಈ ಧನ ದುಃಖದ ವರ್ಣನೆಯನ್ನು ಕುರಿತು ಶ್ರೀ ವಿದ್ಯಾರಣ್ಯಸ್ವಾಮಿ ಗಳು –

ಶ್ಲೋಕ – ಅರ್ಥನಾಮಾರ್ಜನೆ ಕ್ಲೇಶ ಸ್ತಥೈವ ಪರಿಪಾಲನೆ ।
ನಾಶೇದುಃಖಂ ವ್ಯಯೇ ದುಃಖಂ ಧಿಹರ್ಥಾನ್ ಕ್ಲೇಶಕಾರಿಣಃ ॥

ಎಂದು ಹೇಳಿದ್ದಾರೆ.

ಶ್ರೀಮದ್ ಭಾಗವತ ಏಕಾದಶಸ್ಕಂದ ೨೩ನೆಯ ಅಧ್ಯಾಯದಲ್ಲಿ – ಧನವನ್ನು ಸಂಪಾದಿಸುವುದರಲ್ಲಿಯೂ, ಕಾಪಾಡುವುದರಲ್ಲಿಯೂ, ವೃದ್ಧಿ ಮಾಡುವುದರಲ್ಲಿಯೂ, ಖರ್ಚು ಮಾಡುವುದರಲ್ಲಿಯೂ, ನಾಶವಾಗುವ ಪ್ರಸಂಗ ಬಂದರೂ, ಅನುಭವಿಸುವ ಪ್ರಸಂಗ ಬಂದರೂ, ಮನುಷ್ಯನಿಗೆ ದುಃಖ, ಭಯ, ಚಿಂತೆ, ಭ್ರಮೆ ಇವು ಉಂಟಾಗುತ್ತವೆ ಎಂಧು ಹೇಳಿದೆ ಅಂದರೆ ಸಂಪಾದಿಸುವುದರಿಂದ, ವೃದ್ಧಿ ಮಾಡುವುದರಿಂದ ದುಃಖವೂ, ರಕ್ಷಣೆ ಮಾಡುವಾಗ ಭಯವೂ, ಖರ್ಚು ಮಾಡುವಾಗ – ಅನುಭವಿಸುವಾಗ ಚಿಂತೆಯೂ, ನಾಶ ಪ್ರಸಂಗ ಬಂದಾಗ ಭ್ರಮೆಯೂ ಉಂಟಾಗುತ್ತದೆ ಧನವನ್ನು ಸಂಪಾದಿಸುವಾಗ ಕಳ್ಳತನ, ಹಿಂಸೆ, ಸುಳ್ಳು, ದಂಭ, ಇಚ್ಛೆ, ಕ್ರೋಧಗಳೆಂಬ ಆರು ಅನರ್ಥಗಳನ್ನು ತಪ್ಪಿಸಿಕೊಳ್ಳಲಾಗುವುದಿಲ್ಲ ಸಂಗ್ರಹವಾದ ಧನದ ವಿಷಯದಲ್ಲಿಯೂ ಗರ್ವ, ಅಭಿಮಾನ, ಸ್ನೇಹ ತ್ಯಾಗ, ದ್ವೇಷ, ಅವಿಶ್ವಾಸ, ಅಸೂಯೆ, ಸ್ತ್ರೀ, ಮದ್ಯಪಾನ ಮತ್ತು ಜೂಜು – ಈ ಒಂಭತ್ತು ವಿಧವಾದ ಅನರ್ಥಗಳು ಇದ್ದೇ ಇರುತ್ತವೆ. ಆದುದರಿಂದ ಒಂದು ಧನದಿಂದ ೧೫ ಅನರ್ಥಗಳು ಉಂಟಾಗುತ್ತವೆಂದು ಶಾಸ್ತ್ರದಲ್ಲಿ ಹೇಳಿದೆ ಧನದಿಂದುಂಟಾಗುವ ಅನರ್ಥವನ್ನು ಮೂಲ ಗ್ರಂಥದಲ್ಲಿ ನಾಲ್ಕು ದೋಹಾದಿಂದ ವರ್ಣಿಸಿದೆ

ದೋಹಾ – ತಜಿ ತಿಯ ಪೂತ ಜು ಧನ ಚಹೆ, ತಾಕೆ ಮುಖ ಮ್ಯೆಂ ಧೂರ ।
ಧನ ಜೋರನ ಸಚ್ಛೌಖಕರನ, ಖರಚ ನಾಸ ದುಖ–ಮೂರ ॥

ಚೌಪಾಈ– ಜೊ ಚೌಹ್ಯೆ ಮಾಯಾ ಬಹುಜೋರೀ ।
ಕರ್ಯೆ ಅನರ್ಥ ಸು ಲಾಖ ಕರೋರೀ ॥

ಜಾತಿಧರ್ಮ ಕುಲಧರ್ಮ ನು ತ್ಯಾಗ್ಯೆ ।
ಜೊ ಧನ ಕೊಂ ಜೋರನ ಜನ ಲಾಗ್ಯೆ ॥೧೧೧॥

ಭಿನಾಭಾಗ ತದಪಿ ನ ಧನಜುರಿ ಹೈಂ ।
ಜುರೈ ತು ರಚ್ಛಾ ಕರಿ ಕರಿ ಮರಿಹೈಂ ॥
ಖರಚತ ಧನ ಘಟಿ ಹೈ ಯುಹ ಚಿಂತಾ ।
ನಾನೈ ನಿಸಿ–ದಿನ ತಾವ ಅನಂತಾ ॥ ॥೧೧೨॥

ಸದಾ ಕರತಯೂಂ ದುಖ ಧನ ಮನಕೂಂ ।
ಚಹೈ ತಾಹಿ ಧಿಕ ಧಿಕ ತಿಹಿ ಜನಕೂಂ ॥
ಯುವತಿ ಪೂತ ಧನ ಲಖಿ ಸುಖದಾತಾ ।
ತಜ್ಯೋ ಭರ್ಚ್ರ ಮಮತಾಕೊ ನಾತಾ ॥ ॥೧೧೩॥

## ರಾಜಸಿಗೆ ಭರ್ಚ್ರವಿನಲ್ಲಿ ಪ್ರೇತಬುದ್ಧಿ

॥ ಕುಂಡಲಿಯಾ ಛಂದ ॥

ಭರ್ಚ್ರ ಬನ ಏಕಾಂತವ್ಯೆ, ಗಯೋ ಕಿಯೋ ಚಿತ ಸಾಂತ ।
ಭಯೋ ನಯೋ ದೀವಾನ ತಿನ, ಸುನ್ಯೋ ಸಕಲ ವೃತ್ತಾಂತ ॥
ಸುನ್ಯೋ ನಕಲ ವೃತ್ತಾಂತ, ಚಿಂತಯುಹ ಉಪಜೀ ತಾಕೆ ।
ಜೋನೃಪ ಜೀವತಸುನ್ಯೆ, ಮಿಲೈವಾ ಕಾಹೂನಾಕೆ ॥
ತೌ ಝೂರೇ ಹಮ ಹೋಹಿಂ, ಭೂಪ ದೇ ನಬಕೂಂದಂಡಾ ।
ಯಾತೈ ಅಬ ಮಿಲಿ ಕಹೌ, ಭರ್ಚ್ರ ಭೌಪ್ರೇತ ಪ್ರಚಂಡಾ ॥೧೧೪॥

ಅರ್ಥ. ಈ ಪ್ರಕಾರವಾಗಿ ಭರ್ಚ್ರವು ದೃಢ ಮನಸ್ಸಿನಿಂದ ಸ್ತ್ರೀ, ಧನ, ಪುತ್ರಾದಿಗಳನ್ನು ತ್ಯಜಿಸಿ, ಕೌಪೀನವನ್ನು ಧರಿಸಿ, ಸರ್ವಾಂಗದಲ್ಲಿ ಭಸ್ಮವನ್ನು ಧರಿಸಿಕೊಂಡು, ಏಕಾಂತ ಸ್ಥಾನದಲ್ಲಿ ತಪವನ್ನು ಆಚರಿಸಿ ಮನಸ್ಸಿನಲ್ಲಿ ಶಾಂತಿಯನ್ನು ಪಡೆದನು. ಈ ವಾರ್ತೆಯನ್ನು ಕೇಳಿದ ನೂತನ ಮಂತ್ರಿಗಳೂ ರಾಜಾಧಿಕಾರಿಗಳೂ ಮನಸ್ಸಿನಲ್ಲಿ "ಭರ್ಚ್ರ ಜೀವಂತನಾಗಿದ್ದು ವನದಲ್ಲಿ ತಪಸ್ಸು ಮಾಡುತ್ತಿರುವ ಸುದ್ದಿಯು ರಾಜನಿಗೆ ತಿಳಿದು ಇಲ್ಲವೇ

ರಾಜನಿಗೆ ಆಕಸ್ಮಾತ್ತಾಗಿ ಭರ್ಚುವಿನ ದರ್ಶನವಾಗಿ ನಿಜ ಸಂಗತಿಯನ್ನು ತಿಳಿದು ನಾವು ಅಸತ್ಯವನ್ನು ಹೇಳಿದೆವೆಂದು ನಿಶ್ಚಯಿಸಿ ನಮಗೆ ಪ್ರಾಣ ದಂಡನೆಯನ್ನೇ ಮಾಡಿಸುವನು" ಎಂದು ನಿಶ್ಚಯಿಸಿಕೊಂಡು ಈ ಕಂಟಕದಿಂದ ಪಾರಾಗುವುದಕ್ಕಾಗಿ ಯುಕ್ತಿಯನ್ನು ಹುಡುಕಿಕೊಂಡರು

ದೋಹಾ – ಕರಿಸಲಾಹ ಯಹ ಪರಸ್ಪರ, ಗಯೇ ಕಚಹರೀ ಬೀಚ ।
ಸಬಹಿ ಕಹೀ ಯಹ ಭೂಪತ್ಯೆಂ, ಭರ್ಚು ಪ್ರೇತ ಭೌ
ನೀಚ ॥೧೧೫॥

ಅರ್ಥ : ಹೀಗೆ ಅವರು ಎಲ್ಲರೂ ತಮ್ಮ ತಮ್ಮೊಳಗೆ ನಿಶ್ಚಯಿಸಿ ರಾಜನ ಎದುರಿಗೆ ಹೋಗಿ ಕೈಮುಗಿದು "ಮಹಾರಾಜನೆ, ಭರ್ಚುವು ಸತ್ತು ಪ್ರೇತನಾಗಿ ವನದಲ್ಲಿ ಸಂಚರಿಸುತ್ತಿರುವನು" ಎಂದು ಹೇಳಿದರು.

ದೋಹಾ – ರಾಖ ಲಗಾಯಿ ದೇಹಮ್ಯೆ, ಮಿಲ್ಯೆ ಜಾಹಿ ಬತರಾತ ।
ತಿಹಿಮಾರತ ಸೋ ನರ ಬಚತ, ಜೊ ತಿಹಿ ದೇಖಿ ಪರಾತ ॥೧೧೬॥

ಅರ್ಥ : ಮತ್ತು "ಹೇ ಮಹಾರಾಜನೇ, ಅವನು ಸರ್ವಾಂಗಕ್ಕೂ ಬೂದಿಯನ್ನು ಬಳಿದುಕೊಂಡು ವಿಕಾರ ಸ್ವರೂಪವುಳ್ಳವನಾಗಿದ್ದಾನೆ. ಅವನನ್ನು ಕಂಡು ಯಾರಾದರೂ ಮಾತನಾಡಿಸಿದರೆ ಅವರನ್ನು ಹೊಡೆಯುವುದಲ್ಲದೆ ಅನೇಕ ವಿಧವಾದ ನಷ್ಟವನ್ನು ಮಾಡುತ್ತಾನೆ. ಅವನ ದೃಷ್ಟಿಗೆ ಬಿದ್ದ ಕೂಡಲೆ ಯಾರು ಓಡಿಹೋಗುವರೋ ಅವರು ಮಾತ್ರ ಉಳಿದುಕೊಳ್ಳುತ್ತಾರೆ" ಎಂದು ಅನೇಕ ವಿಧವಾಗಿ ನಟಿಸುತ್ತ ಹೇಳಿಕೊಂಡರು

ದೋಹಾ – ಸುನಿ ಭೂಪಹು ನಿಶ್ಚಯ ಕಿಯೋ ।
ಭರ್ಚು ಮರೀ ಭೌ ಪ್ರೇತ ॥
ಸಾಂಚ್ ಜೂಠ್ ಭೂಪ ನ ಲಖತ ।
ಹ್ವೈ ಜು ಪ್ರಮಾದ ಅಚೇತ ॥ ॥೧೧೭॥

ಅರ್ಥ. ಈ ರೀತಿ ಹೇಳಿದ ರಾಜಾಧಿಕಾರಿಗಳ ಮಾತಿನಲ್ಲಿ ರಾಜನು ವಿಶ್ವಾಸವನ್ನಿಟ್ಟು ಭರ್ತೃವು ಸತ್ತು ಭೂತವಾಗಿರುವುದು ನಿಶ್ಚಯವೆಂದು ತಿಳಿದನು ರಾಜನು ಸತ್ಯಾಸತ್ಯದ ಕಡೆಗೆ ಲಕ್ಷ್ಯವನ್ನೇ ಕೊಡಲಿಲ್ಲ. ಈ ತಪ್ಪಿನಿಂದ ಅವನಲ್ಲಿ ಪ್ರಮಾದವು ಘಟಿಸಿ ಬುದ್ಧಿಹೀನನಾದನು.

ದೋಹಾ – ಕುಚು ದಿನ್ ಬೀತೇ ಭೂಪ ತಬ್,
ಮಾರನ ಗಯೋ ಸಿಕಾರ ।
ಪೈಠ್ಯೋಗಿರಿವನ ಸಘನ ಮೈ,
ಜಹ ಮೃಗರಾಜ ಹಜಾರ ॥ ॥೧೧೮॥

ಅರ್ಥ : ಮುಂದೆ ಕೆಲವು ದಿವಸಗಳಾದ ಮೇಲೆ ರಾಜನು ಬೇಟೆಗಾಗಿ ಹೊರಟು, ನಿಬಿಡವಾಗಿ ವೃಕ್ಷಗಳುಳ್ಳ ಮತ್ತು ಸಿಂಹ, ಶಾರ್ದೂಲಾದಿ ಹಿಂಸಾ ಪ್ರಾಣಿಗಳು ಅತಿಶಯವಾಗಿ ವಾಸಿಸುವ ಒಂದು ಅರಣ್ಯವನ್ನು ಪ್ರವೇಶಿಸಿದನು.

ದೋಹಾ – ತಪತ ತಹಾಂ ಇಕ ತರೂತರೈ,
ಭರ್ತೃ ನಿಜ ದೀವಾನ ।
ಪೇಖಿ ತಾಹಿ ಭಾಜ್ಯೋ ಉಲಟಿ,
ಮಾನಿ ಪ್ರೇತ ದುಃಖದಾನ ॥ ॥೧೧೯॥

ಅರ್ಥ : ರಾಜನು ಅರಣ್ಯದಲ್ಲಿ ತಿರುಗುತ್ತಿರುವಾಗ ಒಂದು ವೃಕ್ಷದ ಬುಡದಲ್ಲಿ ತಪಸ್ಸು ಮಾಡುತ್ತ ಕುಳಿತಿದ್ದ ಭರ್ತೃವು ಕಣ್ಣಿಗೆ ಬಿದ್ದನು. ತಕ್ಷಣ ರಾಜನು ಭೂತವೆಂಬ ಭಯದಿಂದ ಓಡಿಹೋದನು

॥ ಇಂದವ ಛಂದ ॥

ಭರ್ತೃ ಮರ್‍ಯೋ ರು ಪರೇತ ಭಯೋ ಯಹ,
ವಾಕ್ಯ ಅಸತ್ಯ ಹು ಸತ್ಯ ಪಿಛಾನಾ ।

ದೇಖಿ ಲಿಯೋ ನಿಜ ಆಂಖಿನ ಜೀವತ,
ತೌಹುಂ ಪರೇತಹ ಮಾನಿ ಭಗಾನಾ ||

ವಂಚಕತ್ಯೆಂ ಸುನಿ ದ್ವೈತ-ಕಥಾ,
ಮತಿ ಮೈವಿಸವಾಸ ಕರ್ರೈಜೂ ಅಜಾನಾ |
ಬ್ರಹ್ಮ ಅದ್ವೈತ ಲಖ್ಯೆ ಪರತಚ್ಛಹೂ,
ತೌಹೂ ನತಾಹಿ ಹಿಯೆ ರಹರಾನ || ||೧೨೦||

ಅರ್ಥ ಭರ್ಚೃವು ಸತ್ತು ಭೂತನಾಗಿರುವ ಸಂಗತಿಯು ಅಸತ್ಯವಾಗಿದ್ದರೂ ರಾಜನು ಅದನ್ನು ಸತ್ಯವೆಂದು ತಿಳಿದುಕೊಂಡನು. ಪ್ರತ್ಯಕ್ಷವಾಗಿ ನೋಡಿದರೂ ಸಹ ಮನಸ್ಸಿಗೆ ನಂಬಿಕೆಯಾಗದೆ ಭೂತವೆಂದೇ ತಿಳಿದುಕೊಂಡು ಪಲಾಯನ ಮಾಡಹತ್ತಿದನು ಈ ಪ್ರಕಾರವಾಗಿ ದ್ವೈತವಾದಿಗಳ ವಾಕ್ಯಗಳನ್ನು ಶ್ರವಣ ಮಾಡಿದ ಅಜ್ಞಾನಿಗಳು ಅವುಗಳನ್ನೇ ನಿಜವೆಂದು ತಿಳಿದುಕೊಳ್ಳುವರು ಈ ತಪ್ಪಿನಿಂದ ಅವರಿಗೆ ಬ್ರಹ್ಮಾದ್ವೈತ ಜ್ಞಾನೋದಯವಾದರೂ ಯಥಾರ್ಥವು ಮನಸ್ಸಿನಲ್ಲಿ ಸ್ಥಿರವಾಗುವುದಿಲ್ಲ

ದೋಹಾ – ಭೇದ-ವಚನ ವಿಶ್ವಾಸಕರಿ,
ಸುನತ ಜು ಕೋಉ ಅಜಾನ |
ಸೋ ಜನ-ದುಃಖ ಭುಗತ್ಯೆ ಸದಾ,
ಹ್ವೈನ ಬ್ರಹ್ಮಕೀ ಜ್ಞಾನ || ||೧೨೧||

ಅರ್ಥ. ಯಾವ ಮನುಷ್ಯನು ಅಜ್ಞಾನಕ್ಕೆ ವಶನಾಗಿ ದ್ವೈತ ವಾಕ್ಯಗಳನ್ನು ಶ್ರವಣ ಮಾಡುವನೋ ಅವನು ಮಿತಿಯಿಲ್ಲದ ದುಃಖವನ್ನು ಅನುಭವಿಸಬೇಕಾಗುತ್ತದೆ ಅಂಥವನಿಗೆ ಬ್ರಹ್ಮಜ್ಞಾನವು ಕಾಲತ್ರಯದಲ್ಲೂ ಆಗಲಾರದು.

ದೋಹಾ – ಯಾತೈ ಸುನೈ ಜೂ ಭೇದಕೆ,
ವಚನ ಲಖೈ ಸು ಅಸತ್ಯ ।
ತಬ್ ಹಿ ತಾಕೂಂಜ್ಞಾನ ಹ್ವೈ,
ಮಹಾವಾಕ್ಯ ತೈ ಸತ್ಯ ॥ ॥೧೨॥

ಅರ್ಥ ವಿವೇಕಿಯಾದವನು ಭೇದ ವಚನಗಳನ್ನು ಕೇಳಿದರೂ ಸಹ ಅವು ಅಸತ್ಯವೆಂದು ದೂರೀಕರಿಸುತ್ತಾನೆ. ಅವನಿಗೆ ಮಹಾವಾಕ್ಯ ಶ್ರವಣ ದಿಂದ ಬ್ರಹ್ಮದ ದೃಢವಾದ ಅಪರೋಕ್ಷ ಜ್ಞಾನವಾಗುತ್ತದೆ.

ಚೌಪಾಈ – ಸಿಯು ತೈ ಸುನಿ ಜೂ ಭೇದ–ಕಹಾನೀ,
ಜಾನಿ ಝೂಠ ತೆ ನರಕ ನಿಸಾನಿ ।
ತಿನಕೆ ಕಹನಹಾರ್ ಸಬ್ ಜೂಠೈ,
ಪುರುಷಾರ್ಥ ಸುಖತೈ ಸರ ರೂಠೈ ॥ ॥೧೩॥

ಅರ್ಥ ಎಲೈ ಶಿಷ್ಯನೇ ! ನೀನು ಒಂದು ಪಕ್ಷ ದ್ವೈತ ವಾಕ್ಯವನ್ನು ಶ್ರವಣ ಮಾಡಿದ್ದರೂ ಅದು ನರಕ ಸಾಧನವೆಂದು ತಿಳಿದು ಬಿಟ್ಟುಬಿಡು. ದ್ವೈತ ವಾಕ್ಯಗಳಿಂದ ಪ್ರತಿಪಾದನೆ ಮಾಡಿದ ವಿಷಯವು ಕೇವಲ ಮಿಥ್ಯ ವಾದದ್ದು ಪುರುಷಾರ್ಥಕ್ಕೆ ಸರ್ವಥಾ ವಿಮುಖವಾದದ್ದು ಎಂದು ತಿಳಿ.

ಚೌಪಾಈ – ತಿನಕೊ ಸಂಗ ನಕಬಹೂ ಕೀಜೈ,
ಹ್ವೈ ಜೊ ಸಂಗ ನ ವಚನ ಸುನೀಜೈ ।
ಜೊ ಕಹುಂ ಸುನೈ ತು ಸುನತಾಹಿ ತ್ಯಾಗಹು,
ಮ್ಲೇಚ್ಛ–ಜೈನ–ವಚ–ಸಮ ಲಖಿ ಭಾಗಹು ॥ ॥೧೪॥

ಅರ್ಥ ಶಿಷ್ಯನೇ ! ನೀನು ದ್ವೈತವಾದಿಗಳ ಸಂಗವನ್ನು ಯಾವಾ ಗಲೂ ಮಾಡಬೇಡ. ಒಂದು ವೇಳೆ ಮಾಡಿದರೂ ಅವರ ವಚನಗಳನ್ನು

ಕೇಳಬೇಡ. ಕೇಳಿದರೂ ಅಸತ್ಯವೆಂದು ತ್ಯಜಿಸಿಬಿಡು ಮ್ಲೇಚ್ಛ ಜೈನ ವಚನಗಳಂತೆ ಅವುಗಳು ಅಸತ್ಯವಾದವೆಂದು ನಿರ್ಧರಿಸು.

ಹಿಂದಿನ ೧೧೪ನೇ ದೋಹಾದಿಂದ ೧೨೩ರವರೆಗೆ ೧೦ ದೋಹಾಗಳ ಸಾರಾಂಶ.

## ಪೂರ್ವಸಂಗತಿ ಗುರೂಪದೇಶ

ಇದು ಏನಾಶ್ಚರ್ಯ! ಮೋಸಗಾರರ ಪ್ರಕರಣ ಶಕ್ತಿಯು ಮಹತ್ವವನ್ನು ಎಷ್ಟು ವರ್ಣಿಸಿದರೂ ತೀರದು ವಂಚಕರ ಮಾತಿನ ಮೇಲೆ ವಿಶ್ವಾಸ ವಿಟ್ಟು, ಇಂದ್ರಿಯಜನ್ಯ ಜ್ಞಾನ ಉಂಟಾದ ರಾಜನು ಜೀವದಿಂದಿರುವ ಭಟರ್ನು ಭೂತವೆಂದುಕೊಂಡು ಪಲಾಯನ ಮಾಡಬೇಕಾಯಿತು. ಈ ರೀತಿ ಭೇದವಾದಿಗಳಾದ ಪಾಮರ ಜನರ ಮೇಲೆ ವಿಶ್ವಾಸವನ್ನಿಟ್ಟು ಅವರ ಮಾತುಗಳು ಸತ್ಯವೆಂದು ತಿಳಿಯುವ ಜನರು ಅದ್ವೈತವಾದ ಸಚ್ಚಿದಾನಂದ ಸುಖಕ್ಕೆ ದೂರವಾಗಿ ಜನ್ಮ ಮರಣ ರೂಪ ದುಃಖಗಳನ್ನು ಉಪಭೋಗಿಸುತ್ತಾರೆ. ಆದುದರಿಂದ ಹೇ ಶಿಷ್ಯನೆ! ನೀನು ಭೇದವಾದಿಗಳ ಸಂಗವನ್ನೇ ಮಾಡಬೇಡ. ದುರ್ದೈವದಿಂದ ಯಾವಾಗಲಾದರೂ ಸಂಗವನ್ನು ಮಾಡುವ ಪ್ರಸಂಗ ಬಂದರೆ ಅವರ ಮಾತನ್ನು ಕೇಳಬೇಡ ಒಂದು ವೇಳೆ ಅಕಸ್ಮಾತ್ತಾಗಿ ಆ ಮಾತುಗಳು ಕಿವಿಯಲ್ಲಿ ಬಿದ್ದರೆ, ತಿಳಿಯದೆ ವಿಷವನ್ನು ತಿಂದವನು ತಿಳಿದ ಕೂಡಲೆ ಔಷಧವನ್ನು ತೆಗೆದುಕೊಂಡು ವಾಂತಿ ಮಾಡಿಕೊಳ್ಳುವಂತೆ, ಧಿಕ್ಕಾರ ಪೂರ್ವಕವಾಗಿ ತ್ಯಜಿಸಿಬಿಡು. ನಿನ್ನ ಅಂತಃಕರಣದಲ್ಲಿ ಭೇದ ವಚನ ಸಂಸ್ಕಾರ ಇರುವವರೆಗೆ ಅದ್ವೈತ ಬ್ರಹ್ಮಜ್ಞಾನವು ಸಂಭವಿಸಲಾರದು. ಈ ಪ್ರಕಾರ ಭೇದ ವಚನಗಳ ಯೋಗ್ಯತೆಯು ಜೈನ ವಚನಗಳ ಯೋಗ್ಯತೆಗಿಂತಲೂ ನೀಚವಾಗಿದೆ ಆದುದರಿಂದ ಭೇದ ವಚನವನ್ನು ಪರಿತ್ಯಜಿಸಿದವನಿಗೆ ಸದ್ಗುರು ಕೃಪೆಯಿಂದ ಮಹಾವಾಕ್ಯಾರ್ಥಜನ್ಯ ಬ್ರಹ್ಮಜ್ಞಾನವು ಪ್ರಾಪ್ತವಾಗುತ್ತದೆ. ಅದು ಇತರರಿಗೆ ಸಾಧ್ಯವಿಲ್ಲ.

ಇಲ್ಲಿ ಒಂದು ಆಕ್ಷೇಪಣೆ: ಹಿಂದೆ ಎರಡನೇ ತರಂಗದಲ್ಲಿ "ಗುರುಮುಖದಿಂದ ಹೊರಟ ಮಹಾವಾಕ್ಯವು ಜಿಜ್ಞಾಸುಗಳ ಶ್ರೋತ್ರಕ್ಕೆ ಸಂಬಂಧ

ಪಟ್ಟರೆ ತತ್ಕಾಲವೇ ಬ್ರಹ್ಮಜ್ಞಾನ ಉಂಟಾಗುತ್ತದೆ” ಎಂದು ಪ್ರತಿಪಾದಿಸಿದೆ ಇಲ್ಲಿ ಭೇದವಚನ ಸಂಸ್ಕಾರ ರಹಿತ ಪುರುಷನಿಗೆ ಬ್ರಹ್ಮಜ್ಞಾನವಾಗುತ್ತದೆ, ಇತರರಿಗೆ ಸಾಧ್ಯವಿಲ್ಲೆಂದು ಹೇಳಿದ್ದನ್ನು ನೋಡಿದರೆ ಹಿಂದಿನ, ಈಗಿನ ಎರಡು ವಚನಗಳಲ್ಲಿ ಪರಸ್ಪರ ವಿರೋಧವು ಕಂಡುಬರುತ್ತದೆ ಇಲ್ಲವೇ ಹಿಂದೆ ಹೇಳಿದ ಮಾತು ಬಾಧೆಯಾಗುತ್ತದೆಂದು ಕಂಡುಬರುತ್ತದೆ.

ಸಮಾಧಾನ. ಭೇದ ವಚನ ಸಂಸ್ಕಾರವುಳ್ಳ ಪುರುಷನಿಗೆ ಮಹಾವಾಕ್ಯ ಶ್ರವಣದಿಂದ ಬ್ರಹ್ಮಜ್ಞಾನವಾದರೂ ಅದು ದೃಢವಾದ ಅಪರೋಕ್ಷ ಜ್ಞಾನ ವಲ್ಲ ಆದುದರಿಂದ ಅವನಿಗೆ ಭರ್ಚುವನ್ನು ನೋಡಿದ ರಾಜನಂತೆ ಪುನಃ ಅಸಂಭಾವನಾ ವಿಪರೀತ ಭಾವನೆಗಳು ಉತ್ಪನ್ನವಾಗುತ್ತವೆ. ಭೇದ ಸಂಸ್ಕಾರ ವಿಲ್ಲದ ಪುರುಷನಿಗೆ ಮಹಾವಾಕ್ಯ ಶ್ರವಣದಿಂದ ದೃಢವಾದ ಅಪರೋಕ್ಷ ಜ್ಞಾನವಾಗುವುದು ಆ ದೃಢವಾದ ಅಪರೋಕ್ಷ ಜ್ಞಾನವಾದ ಮೇಲೆ ಅಸಂಭಾವನಾ ವಿಪರೀತ ಭಾವನೆಗಳು ಉಂಟಾಗಲಾರವು. ಈ ದೃಷ್ಟಿಯಿಂದ ಹಿಂದಿನ, ಈಗಿನ ಎರಡು ವಚನಗಳಿಗೆ ಪರಸ್ಪರ ವಿರೋಧವಿಲ್ಲ ಯಾವ ವಚನವೂ ಬಾಧಿತವಾಗುವುದಿಲ್ಲ, ನಿರರ್ಥಕವೂ ಅಲ್ಲ ಎರಡು ವಚನಗಳೂ ಪರಸ್ಪರ ವಿರೋಧಗಳಿಲ್ಲದವುಗಳೂ, ಅಬಾಧಿತಗಳೂ, ಸಾರ್ಥಕಗಳೂ ಆಗಿವೆ.

ಮಿಥ್ಯಾ ದುಃಖದ ನಾಶವೂ ಮಿಥ್ಯಾ ಸಾಧನದಿಂದಲೇ ಆಗುವುದು

ಚೌಪಾಈ – ಜೊ ಮಿಥ್ಯಾ ಹೈ ವೈ ದೈಸಿಕ–ವೇದಾ,
ಕೈಸೆ ಕರಹಿ ಭವ–ದುಃಖ–ಛೇದಾ ।
ಯಾಕೊ ಅಬ ಉತ್ತರ ಸುನಿ ಲೀಜೈ,
ಮಿಥ್ಯಾ ದುಃಖ ಮಿಥ್ಯಾತೈ ಛೀಜೈ ॥ ॥೧೨೫॥

ಅರ್ಥ. ನೀನು ಹಿಂದೆ ವೇದ ಗುರುಗಳು ಅಸತ್ಯವಾಗಿದ್ದರೆ ಅವುಗಳಿಂದ ಭವದುಃಖವು ಹೇಗೆ ನಾಶವಾಗುತ್ತದೆ? ಎಂದು ಮಾಡಿದ ಆಕ್ಷೇಪಣೆಗೆ ಸಮಾಧಾನವನ್ನು ಕೇಳು.

ಚೌಪಾಈ – ವೇದ ರೂ ಗುರು ಸತ್ಯ ಜೂ ಹೋವೈ,
ತೌ ಮಿಥ್ಯಾ ಭವದುಃಖ ನಹಿ ಖೋವೈ ।
ಯಾವೈ ಇಕ ದೃಷ್ಟಾಂತ ಸುನಾಹೂಂ,
ಜಾತೈ ನಬ್ ಸಂದೇಹ ನಸಾಹು ॥ ॥೧೨೬॥

ಅರ್ಥ : ಒಂದು ವೇಳೆ ವೇದ ಮತ್ತು ಗುರುಗಳು ಸತ್ಯವಾಗಿದ್ದರೂ ಅವುಗಳಿಂದ ಮಿಥ್ಯಾ ಭವದುಃಖವು ನಾಶವಾಗಲಾರದು ಎಂಬ ಆಕ್ಷೇಪಣೆಗೆ ಸಮಾಧಾನವಾಗಿ ಒಂದು ದೃಷ್ಟಾಂತವನ್ನು ಹೇಳುತ್ತೇನೆ. ಆದರಿಂದ ನಿನ್ನ ಸಂದೇಹವು ನಿಶ್ಚಯವಾಗಿ ನಾಶವಾಗುವುದು

ಚೌಪಾಈ – ಸುರಪತಿ ಇಂದ್ರ ಸ್ವರ್ಗ ಮೈ ಜೈಸೊ,
ಪ್ರಬಲ ಪ್ರತಾಪ ಭೂಪ ಇಕ ಐಸೊ ।
ಭೀಮ–ಸಮಾನ ಸೂರ ಬುಹು ತೇರೇ,
ತಿನಕೆ ಚಹುಧಾ ಡೇರೆ ಗೇರೆ ॥ ॥೧೨೭॥

ಅರ್ಥ . ಸ್ವರ್ಗದಲ್ಲಿ ದೇವತೆಗಳ ಒಡೆಯನಾದಂಥ ಇಂದ್ರನಂತೆ ಪ್ರಬಲ, ಪ್ರತಾಪಿಯಾದ ಒಬ್ಬ ರಾಜನಿದ್ದನು ಅವನಲ್ಲಿ ಅನೇಕ ಜನ ಮಹಾ ಪ್ರತಾಪಿಗಳಾದ ಸೈನಿಕರು ಇದ್ದರು. ರಾಜ್ಯದ ನಾಲ್ಕು ದಿಕ್ಕಿನಲ್ಲಿ ಸೈನಿಕರು ಕಾಯುತ್ತಿದ್ದರು.

ಚೌಪಾಈ – ಜೋಧಾ ಲೆ ನಿಜ ನಿಜ ಹಥಿಯಾರನ,
ಖರೈ ರಹೇ ತಿಹಿ ದ್ವಾರ ಹಜಾರನ ।
ಅಂದಿರ ಮಂದಿರ ಡ್ಯೋಢಿ ರಾಢೆ,
ಲಿಯೆಖಡ್ಗ ಕೋಸನತೈ ಕಾಢೆ ॥ ॥೧೨೮॥

ಅರ್ಥ . ಸಾವಿರಾರು ಜನ ಮಹಾ ವೀರರಾದ ಯೋಧರು ತಮ್ಮ ಶಸ್ತ್ರಾಸ್ತ್ರಗಳನ್ನು ಧರಿಸಿ ರಾಜನನ್ನು ರಕ್ಷಿಸುತ್ತಿದ್ದರು. ಇದಲ್ಲದೆ ಅರಮನೆಯ

ಇದಲ್ಲದೆ ಅರಮನೆಯ ಮುಂಭಾಗದಲ್ಲಿ ಹಿರಿದ ಖಡ್ಗಗಳನ್ನು ಹಿಡಿದು ಕೊಂಡು ಬಹು ಜನರು ರಕ್ಷಿಸುತ್ತಿದ್ದರು.

ಚೌಪಾಈ – ಊಂಚೋ ಮಹಲ ಅಟಾರಿ ಜಾವೈ ।
ಫೂಲ್ ಸೈಜ ಸೋವೈ ನೃಪ ತಾವೈ ॥
ಪಂಛೀ ಹೂ ಪೌಚನ ನಹಿ ಪಾವೈ ।
ತಹಾಂ ಔರ ಕೈಸೆ ಚಲಿ ಜಾವೈ ॥ ॥೧೨೯॥

ಅರ್ಥ . ಎತ್ತರವಾದ ಉಪ್ಪರಿಗೆಯ ಮೇಲೆ ಇರುವ ನಿದ್ರಾಮಂದಿರ ದಲ್ಲಿರುವ ರಾಜನು ಪುಷ್ಪಶಯ್ಯೆಯ ಮೇಲೆ ನಿದ್ರಿಸುತ್ತಿದ್ದನು. ಅಲ್ಲಿಗೆ ಹೋಗಲು ಪಕ್ಷಿಗಳಿಗೂ ಸಹ ಅಸಾಧ್ಯವಾಗಿತ್ತು. ಹೀಗಿದ್ದ ಮೇಲೆ ಬೇರೆಯ ಪ್ರಾಣಿಗಳು ಬರುವ ಬಗೆ ಹೇಗೆ ?

ಚೌಪಾಈ – ತಹಾಂ ಭೂಪ ದೇಖ್ಯೋ ಅಸ ಸಪನಾ ।
ಪಕರ್ಯೋಪೈರ್ ಗಾದರೀ ಅಪನ ॥
ಭೂಪ ಛುಡಾಯೊ ಚಾಹತ ನಿಜ ಪಗ ।
ತಜತ ನ ಗಾದರಿ ಪಕರಿ ಜೂ ಪಗರಗ ॥ ॥೧೩೦॥

ಅರ್ಥ : ಅಂತಹ ಅಂತಃಪುರದಲ್ಲಿ ರಾಜನು ಮಲಗಿರುವಾಗ ಒಂದು ಸ್ವಪ್ನವನ್ನು ಕಂಡನು. ಸ್ವಪ್ನದಲ್ಲಿ ಒಂದು ಹೆಣ್ಣು ಹುಲಿಯು ಬಂದು ತನ್ನ ಕಾಲನ್ನು ಹಿಡಿದಂತೆಯೂ, ಅದನ್ನು ಬಿಡಿಸಿಕೊಳ್ಳಲು ಎಷ್ಟು ಪ್ರಯತ್ನ ಮಾಡಿದರೂ ಸಾಧ್ಯವಾಗದಂತೆಯೂ ಸ್ವಪ್ನ ಕಂಡನು.

ಚೌಪಾಈ – ತಬ್ ರಾಜ ಯೂಖರೊ-ಪುಕಾರೈ
ಹೈ ಕೊ ಅಸ ಜೊ ಗಾದರಿ ಮಾರೈ ॥
ಜೋಧಾ ಜೊರಾಧೈ ನಿಜ ದ್ವಾರಾ ।
ತಿನ ರಂಚಕಹೂ ನ ದಿಯೋ ಸಹಾರಾ ॥ ॥೧೩೧॥

ಅರ್ಥ : ತನ್ನ ಪ್ರಯತ್ನವು ಸಾಗದೆ ಇರುವುದನ್ನು ಕಂಡು ರಾಜನು ಯಾರಾದರೂ ಬಂದು ಈ ಹುಲಿಯನ್ನು ಕೊಲ್ಲಿರಿ ಎಂದು ಕೂಗಿಕೊಂಡನು ಎಷ್ಟು ಕೂಗಿಕೊಂಡರೂ ರಾಜದ್ವಾರದಲ್ಲಿದ್ದ ಸಿಪಾಯಿಗಳು ಯಾರೂ ಬಂದು ಸಹಾಯ ಮಾಡಲಿಲ್ಲ.

ಚೌಪಾಈ – ತಬ ನೃಪ ದಂಡ ಲಿಯೋ ನಿಜ ಕರ ಮೈ।
ಆಪುಹಿ ಮಾರ್‍ಯೋ ಸ್ಯಾರನಿ ಸಿರಮೈ ॥
ಲಗತ ದಂಡ ಭೌ ತಾಕೊ ಅಂತಾ ।
ತಬ್ ನಿನರ್‍ಯೆ ಪಗರಗತ್ಯೆ ದಂತಾ ॥ ॥ ೧೩೨ ॥

ಅರ್ಥ : ಆ ಮೇಲೆ ರಾಜನು ತನ್ನ ಹಸ್ತದಲ್ಲಿ ದಂಡವನ್ನು ತೆಗೆದು ಕೊಂಡು ಆ ಹುಲಿಯ ತಲೆಯ ಮೇಲೆ ಒಂದು ಏಟು ಕೊಡಲು ಅದು ತನ್ನ ದಂತಗಳಿಂದ ರಾಜನ ಕಾಲಿಗೆ ಗಾಯವನ್ನು ಮಾಡಿತು

ಚೌಪಾಈ – ದಾಂತ ಲಗ್ಯೆ ಗಾಢ್ಯೆ ನೃಪ ಪಗ ಮೈ ।
ಯೂಂ ಲಂಗರಾತ ಸು ಚಾಲತ ಮಗಮೈ ॥
ತಬ ಚಾಲ್ಯೊ ಲೇ ಲಾರೀ ಕರಮೈ ।
ಪಹುಂಚ್ಯೊ ಘಾವರಿಯಾ ಕೆ ಘರಮೈ ॥ ॥೧೩೩॥

ಅರ್ಥ : ಆ ಹುಲಿಯ ಹಲ್ಲುಗಳು ತಗಲಿ ಬಲವಾದ ಗಾಯವಾಗಲು ರಾಜನು ಅದಕ್ಕೆ ಔಷಧಿಯನ್ನು ತೆಗೆದುಕೊಳ್ಳಲು ಕೋಲನ್ನು ಹಿಡಿದು ವೈದ್ಯ ಗೃಹಕ್ಕೆ ಹೋದನು.

ಚೌಪಾಈ – ತಾಹಿ ಕಹ್ಯೋ ಘೋಹಾ ಆಸ ದೀಜ್ಯೆ ।
ಘಾವ ಪಾವ ಕೊ ತುರತ ಭರೀಜ್ಯೆ ॥
ಘಾವರಿಯಾ ನೃಪತ್ಯೆ ಯಹ ಭಾಖ್ಯೋ ।
ಘೋಹಾನಹಿ ತಯಾರ ದರ ರಾಖ್ಯೋ ॥ ॥೧೩೪॥

ಅರ್ಥ ರಾಜನು ವೈದ್ಯನ ಗೃಹಕ್ಕೆ ಹೋಗಿ "ವೈದ್ಯರೇ, ಈ ಗಾಯವು ಬೇಗನೆ ವಾಸಿಯಾಗುವಂಥ ಔಷಧವನ್ನು ಕೊಡಿರಿ" ಎಂದು ಕೇಳಲು, ವೈದ್ಯನು "ಸದ್ಯಕ್ಕೆ ನನ್ನಲ್ಲಿ ತಯಾರು ಮಾಡಿದ ಮುಲಾಮು ಇಲ್ಲ" ಎಂದು ಹೇಳಿದನು.

ಚೌಪಾಈ – ಜೊ ತು ದೈ ಪೈಸಾ ಇಕ ಮೋಕೂ ।
ತೊ ತಯಾರ ಕರಿ ದೇಹೂ ತೋಕೂ ॥
ತಬ ಉಲಟ್ಯೋ ನೃಪ ಲಾರಿ ರೇಕಾ ।
ನಹಿ ದೈನಕೂ ಕೌಡಿಹು ಏಕಾ ॥ ॥೧೩೫॥

ಅರ್ಥ ವೈದ್ಯನು ಈಗ ನನ್ನಲ್ಲಿ ತಯಾರಾದ ಮುಲಾಮು ಇಲ್ಲದಿದ್ದರೂ ಒಂದು ದುಡ್ಡನ್ನು ಕೊಟ್ಟರೆ ನಾನು ಈಗಲೇ ಮುಲಾಮನ್ನು ತಯಾರು ಮಾಡಿ ಕೊಡುವೆ ಎಂದನು. ಆಗ ರಾಜನು ನನ್ನಲ್ಲಿ ನಿನಗೆ ಕೊಡುವುದಕ್ಕೆ ಒಂದು ಕೌಡಿಯೂ ಸಹ ಇಲ್ಲವೆಂದು ಕೋಲನ್ನೂರುತ್ತಾ ಹಿಂದಿರುಗಿದನು.

ಚೌಪಾಈ – ಲಾಗ್ಯೋ ಸೋಚ ಕರನ ಟರಿ ಫಿರತೈ ।
ಬೂ ಜೈ ಬಾತ್ ಕೌನ ಬಿನ ಜರತೈ ॥
ಜೊ ಮೈ ಹೋತ ಧನೀ ಬಡ ಭಾಗಾ ।
ಆವತು ಘರ ಘಾವರಿಯಾ ಭಾಗಾ ॥ ॥೧೩೬॥

ಅರ್ಥ. ಆಗ ರಾಜನು ಶೋಕಿಸುತ್ತಾ ದ್ರವ್ಯವಿಲ್ಲದಿದ್ದರೆ ಯಾರೂ ಯಾರ ಮಾತನ್ನೂ ಕೇಳಲಾರರು. ನಾನು ಒಂದು ವೇಳೆ ಧನಿಕನಾಗಿದ್ದಿದ್ದರೆ ಇಂತಹ ನೂರಾರು ಜನ ವೈದ್ಯರು ನನ್ನ ಬಳಿಗೆ ಕರೆಯದಲೇ ಬರುತ್ತಿದ್ದರು.

ಚೌಪಾಈ – ಮೋಹೀ ನಿಕಂಮಾ ಜಾನೀ ಕಂಗಾಲಾ ।
ಧರತೈ ತುರತ ರೋಗ ಜ್ಯುಂಟಾಲಾ ॥

ಯಾಹೀಕು ಕಛು ದೋಷ ನ ದೀಜೈ ।
ಬಿನ ಸ್ವಾರಥಕೋ ಕಿಹಿ ನ ಪತೀ ಜೈ ॥ ॥೧೩೭॥

ಅರ್ಥ : ವೈದ್ಯನು ನನ್ನನ್ನು ನಿಷ್ಪ್ರಯೋಜಕನೆಂದೂ, ಕಂಗಾಲಿ ಯೆಂದೂ ತಿಳಿದುಕೊಂಡು, ದರಿದ್ರನಾದ ರೋಗಿಯನ್ನು ವೈದ್ಯರು ಔಷಧ ವಿದ್ದರೂ ಹಿಂದಕ್ಕೆ ಕಳುಹಿಸುವಂತೆ ನನ್ನನ್ನು ಹಿಂದಕ್ಕೆ ಕಳುಹಿಸಿದನು. ನಿಜವಾಗಿ ನೋಡಿದರೆ ಇದು ಅವನ ದೋಷವಲ್ಲ ಸ್ವಾರ್ಥವಿಲ್ಲದೆ ಯಾರೂ ಒಬ್ಬರಿಗೊಬ್ಬರು ಸಹಾಯ ಮಾಡುವುದಿಲ್ಲ

ಚೌಪಾಈ – ಮಾತ–ಪಿತಾ–ಬಾಂಧವ–ಸುತ–ನಾರೀ ।
ಕರತ ಪ್ಯಾರ ಸ್ವಾರಥ ತೈ ಭಾರೀ ॥
ಜೋ ನಹಿ ಸ್ವಾರಥ ಸಿದ್ಧಿ ಪಾವೈ ।
ತೌ ಇನಕು ದೇಖ್ಯೋ ಹು ನ ಭಾವೈ ॥ ॥೧೩೮॥

ಅರ್ಥ: ಮಾತಾ, ಪಿತಾ, ಸ್ತ್ರೀ, ಬಂಧು, ಸಂತ ಮೊದಲಾದವರು ಸ್ವಾರ್ಥದ ಸಲುವಾಗಿಯೇ ಒಬ್ಬರನ್ನೊಬ್ಬರು ಕಣ್ಣೆತ್ತಿ ಸಹ ನೋಡುವುದಿಲ್ಲ

ಚೌಪಾಈ – ಜಾ ಬಿನ ಧರೀ ಏಕ ನಹೀ ರಹತೇ ।
ದುಖ ಅಪಾರ ಬಿಛುರೈ ಸಬ ಲಹತೆ ॥
ಜಬ ದೇಖೈ ಆಯೋ ಘರ ಪೌರೀ ।
ಘರ ಕೆ ಮಿಲತ ಭಾಜೀ ಭಾರೀ ಕೌರೀ ॥ ॥೧೩೯॥

ಅರ್ಥ : ಯಾವನ ಹೊರತು ಮನೆಯಲ್ಲಿ ಒಂದು ಕ್ಷಣ ಸಹ ಇರುವು ದಾಗುವುದಿಲ್ಲವೋ, ಕಿಂಚಿತ್ ವಿಯೋಗವಾದರೆ ಅತಿ ದುಃಖಿತರಾಗುವರೋ ಅಂಥವನನ್ನು ದ್ವಾರದಲ್ಲಿ ನೋಡಿದ ಕೂಡಲೇ ಸರ್ವರೂ ಆಲಿಂಗಿಸಲು ಬರುವರು

ಚೌಪಾಈ – ವಿಧಿ-ಅಧೀನ ಕೋಢಿ ಸೊ ಹೋವೈ ।
ಸಬ ಅಂಗನಿ ವೈ ವಾನೀ ಚೋವೈ ॥
ಅರು ಝುರೀ ಪರೀ ಆಂಗುರೀ ಜಾಕೆ ।
ಭಿನ ಭಿನಾತ ಮುಖ ಮಾಖೀ ತಾಕೆ ॥ ॥೧೪೦॥

ಅರ್ಥ. ಅವನು ವಿಧಿವಶಾತ್ತಾಗಿ ಕುಷ್ಠರೋಗ ಪೀಡಿತನಾದರೂ, ಸರ್ವಾಂಗದಿಂದ ಕೆಟ್ಟ ನೀರು ಸುರಿಯುತ್ತಿದ್ದರೂ, ಕೈ ಕಾಲು ಬೆರಳುಗಳೆಲ್ಲ ಉದುರಿಹೋದರೂ, ಮುಖವು ಭಣಭಣವಾಗಿ ತೋರಿದರೂ, ಆಗ ಅವನ ಮುಖದ ಮೇಲೆ ನೊಣಗಳೂ ಸಹ ಕೂಡುವುದಿಲ್ಲ.

ಚೌಪಾಈ – ಕಹತ ತಾಹಿ ತೆ ಘರ ಕೆ ವ್ಯಾರೆ ।
ಮರಿ ಪಾಪೀ ಅಬ ತೌ ಹತಿಯಾರೆ ॥
ಜಹಿ ದೇಖತ ಅಖಿಯಾಂ ನ ಅಘಾನೀ ।
ತಿಹಿ ಲಖಿ ಗ್ಲಾನೀ ವಮನ ಜ್ಯುಂ ಆನೀ ॥ ॥೧೪೧॥

ಅರ್ಥ ಎಲವೋ ಪಾಪಿಯೆ ! ಇನ್ನೂ ಜೀವಂತನಾಗಿರುವೆಯಾ ? ಬೇಗ ನೀನು ಸಾಯಬಾರದೇಕೆ ! ಎಂಬ ಇವೇ ಮೊದಲಾದ ಅಪ್ರಿಯ ವಚನ ಗಳನ್ನು ಮನೆಯವರೇ ನುಡಿಯುಹತ್ತುವರು. ಅವನನ್ನು ತಮ್ಮ ಕಣ್ಣುಗಳಿಂದ ಸಹ ನೋಡರು. ಅವನನ್ನು ವಮನವತ್ ಅಸಹ್ಯವಾಗಿ ತಿಳಿಯುವರು.

ಚೌಪಾಈ – ಜೋ ತಿಯಹಿಯ ಲಾಗತ ಪತಿ ಪ್ಯಾರೋ ।
ಕಿಯುನ ಚಹತ ಪಲ ಉರತೈ ನ್ಯಾರೋ ॥
ತಾಕೀ ಪವನ ಬಚಾಯೋ ಲೌರೈ ।
ಭಿರೈ ಜು ವಸನ ತು ನಾಕ ಸಕೌರೈ ॥ ॥೧೪೨॥

ಅರ್ಥ : ಯಾವ ಪತ್ನಿ ಎಂಬವಳು ಮೊದಲು ಒಂದು ಕ್ಷಣ ಸಹ ಅಗಲಿ

ಇರುತ್ತಿರಲಿಲ್ಲವೋ ಅಂತಹ ಪತ್ನಿಯೇ ಈಗ ಅವನ ಮೈಯ್ಯಲ್ಲಿನ ಗಾಳಿ ತಗುಲಿದರೆ ಸಾಕು, ವಸ್ತ್ರದಿಂದ ಮೂಗನ್ನು ಮುಚ್ಚಿಕೊಳ್ಳುತ್ತಾಳೆ

**ಚೌಪಾಈ** – ಜಿಹಿ ಪಿತು ಮಾತ ಗೋದ ಮೈಲೇತೆ ।
ಸಕುಚತ ತಿಹಿ ಕರತೆ ಕಛು ದೇತೆ ॥
ಮಿಲತ ಭ್ರಾತ ಜೋಭರಿ ಭುಜ ಕೋರೀ ।
ನೋ ಬತರಾವತ ಬೀಚ ದ್ವೈ ಡೋರೀ ॥ ॥೧೪೩॥

ಅರ್ಥ ಯಾವನನ್ನು ಮೊದಲು ಮಾತಾಪಿತೃಗಳು ಪ್ರೀತಿಯಿಂದ ಬಗಲಲ್ಲಿ ಎತ್ತಿಕೊಳ್ಳುತ್ತಿದ್ದರೋ ಅವರೇ ಈಗ ಅವನಿಗೇನಾದರೂ ಕೊಡಲು ಹಿಂಜರಿಯುತ್ತಾರೆ. ಯಾವ ಬಂಧುಬಾಂಧವರು ಪ್ರೀತಿಯಿಂದ ಮೊದಲು ಆಲಿಂಗನ ಮಾಡಿಕೊಳ್ಳುತ್ತಿದ್ದರೋ ಅವರು ಈಗ ಮಾತನಾಡುವಾಗ ಎದುರಿಗೆ ಸಹ ನಿಂತುಕೊಳ್ಳದೆ ಪಕ್ಕದಲ್ಲಿ ನಿಂತು ಮಾತನಾಡುತ್ತಾರೆ.

**ಚೌಪಾಈ** – ಐಸೆ ಜಗ ಸ್ವಾರಥ ಕೋ ಸಾರೋ ।
ವಿನ ಸ್ವಾರಥ ಕೋ ಕಾಕೋ ಪ್ಯಾರೋ ॥
ಮುಹಿ ಸ್ವಾರಥ ಜೋಗ ನ ವಿಧಿ ಕೀನೋ ।
ಯಾತೈ ಇನ ಘೋಹಾ ನಹಿ ದೀನೋ ॥ ॥೧೪೪॥

ಅರ್ಥ: ಈ ಪ್ರಕಾರ ಸರ್ವ ಜಗತ್ತು ಸ್ವಾರ್ಥಪರವಾಗಿದೆ. ಸ್ವಾರ್ಥ ವಿಲ್ಲದೆ ಒಬ್ಬರನ್ನೊಬ್ಬರು ಪ್ರೀತಿಸಲಾರರು. ವಿಧಿಯು ಸ್ವಾರ್ಥವೆಂಬ ವಸ್ತು ವನ್ನೇ ಸೃಷ್ಟಿಸದಿದ್ದರೆ ಚೆನ್ನಾಗಿತ್ತೆಂದು ತೋರುತ್ತದೆ. ಆದ್ದರಿಂದಲೇ ವೈದ್ಯನು ನನಗೆ ಮುಲಾಮನ್ನು ಕೊಡಲಿಲ್ಲವೆಂದು ರಾಜನು ಅಂದು ಕೊಂಡನು.

**ಚೌಪಾಈ** – ಯೂ ಚಿಂತಿತ ಇಕ ಮುನಿ ತಿಹಿ ಭೇಟ್ಯೋ ।
ತಿನದೈ ಜರಿ ಘಾವ ದುಖ ಮೇಟ್ಯೋ ॥

ನಿದ್ರಾತ್ಯೆ ಜಾಗ್ಯೋ ನೃಪ ಜಬಹೀ ।
ಘಾವ ದರದ ಮುನಿ ನಾನೆ ತಬಹೀ ॥ ॥೧೪೫॥

ಅರ್ಥ ಈ ಪ್ರಕಾರವಾಗಿ ಚಿಂತಿಸುತ್ತಿರಲು ರಾಜನಿಗೆ ಒಬ್ಬ ಋಷಿಯು ಭೇಟಿಯಾದನು ಆ ಸ್ವಪ್ನದಲ್ಲಿ ಕಂಡ ಋಷಿಯು ಒಂದು ಔಷಧವನ್ನು ಕೊಡಲು ಆ ಔಷಧ ಲೇಪನದಿಂದ ಗಾಯವು ಪೂರ್ಣವಾಗಿ ವಾಸಿಯಾಯಿತು. ರಾಜನು ಎಚ್ಚತ್ತು ನೋಡಲು ಗಾಯವೂ ಕಾಣಿಸಲಿಲ್ಲ, ಮುನಿಯೂ ಕಾಣಿಸಲಿಲ್ಲ

ಚೌವಾಈ – ಸಿಷ ಯಹ ತುಹಿ ದೃಷ್ಟಾಂತ ಪ್ರಕಾಸ್ಯೋ ।
ಲಖಿ ಮಿಥ್ಯಾ ತ್ಯೆ ಮಿಥ್ಯಾ ನಾಸ್ಯೋ ॥
ಮಿಥ್ಯಾ ದುಃಖ ದೇಖ್ಯೋ ಜಬ ರಾಜಾ ।
ಸಾಚ ಸಮಾಜ ನ ಕಿಯ ಕಛು ಕಾಜಾ ॥ ॥೧೪೬॥

ಅರ್ಥ : ಎಲೈ ಶಿಷ್ಯನೇ, ಈ ದೃಷ್ಟಾಂತವನ್ನು ವಿಮರ್ಶೆ ಮಾಡಿ ನೋಡಿದರೆ ಮಿಥ್ಯಾ ವಸ್ತುವಿನಿಂದಲೇ ಮಿಥ್ಯೆಯು ನಾಶವಾಗುತ್ತದೆ ರಾಜನು ಮಿಥ್ಯಾ ಸಾಮಗ್ರಿಗಳಿಂದಲೇ ಮಿಥ್ಯಾ ದುಃಖವನ್ನು ಕಳೆದುಕೊಂಡು ಜಾಗ್ರತ್ತಿನಿಂದ ನಿಜವನ್ನು ತಿಳಿದುಕೊಂಡನು

ಮುಖ್ಯವಾದ ಭಾವವೇನೆಂದರೆ· ಎಲೈ ಶಿಷ್ಯನೇ! ನೋಡು, ಸ್ವಪ್ನದಲ್ಲಿ ರಾಜನ ಸಮೀಪಕ್ಕೆ ಮಿಥ್ಯಾ ಹುಲಿಯು ಬಂದಾಗ ಅದನ್ನು ಸತ್ಯವಾದ ಯೋಧರು ತಡೆಯಲಾರದೆ ಹೋದರು ಅದನ್ನು ಹೊಡೆಯುವುದಕ್ಕೆ ಸತ್ಯ ಶಸ್ತ್ರವನ್ನು ಧರಿಸಿದ ಸತ್ಯಯೋಧರು ಬರಲು ರಾಜನು ಕೂಗಿಕೊಂಡರೂ ಯಾವ ಸತ್ಯಯೋಧನೂ ಬಂದು ಸತ್ಯ ಶಸ್ತ್ರದಿಂದ ಅದನ್ನು ಕೊಲ್ಲಲಿಲ್ಲ. ರಾಜನು ಒಂದು ಮಿಥ್ಯಾ ದಂಡದಿಂದ ಹೊಡೆದು ಕೊಂದನು. ಮತ್ತು ರಾಜನಿಗೆ ಸ್ವಪ್ನದಲ್ಲಿ ಸುಳ್ಳು ಗಾಯವಾದಾಗ ಸತ್ಯವಾದ ಯಾವ ವೈದ್ಯನೂ ಅದನ್ನು ಗುಣಪಡಿಸಲಿಲ್ಲ. ರಾಜನೇ ಮಿಥ್ಯ ವೈದ್ಯನಲ್ಲಿಗೆ ಹೋಗಲು ಅವನು ಒಂದು ಪೈಸಾ ಕೇಳಿದನು. ರಾಜನಲ್ಲಿ ಅನಂತಕೋಶ ಭಂಡಾರವಿದ್ದರೂ

ಒಂದು ದುಡ್ಡೂ ಸಿಗಲಿಲ್ಲ ಕೊನೆಗೆ ಭಿಕ್ಷೆ ಬೇಡಿದರೂ ಸಹ ಒಂದು ದುಡ್ಡೂ ದೊರೆಯಲಿಲ್ಲ ಆಗ ರಾಜನಿಗೆ ಒಬ್ಬ ಮಿಥ್ಯಾ ವೈರಾಗಿಯು ಮಿಥ್ಯಾ ಔಷಧವನ್ನು ಕೊಟ್ಟನು. ಅದರಿಂದ ಗಾಯವು ಗುಣವಾಯಿತು.

ಇಂತಹ ಸ್ವಪ್ನಗಳು ಎಲ್ಲರಿಗೂ ಅನುಭವ ಸಿದ್ಧವೇ ಜಾಗ್ರತ್ತಿನ ಪದಾರ್ಥಗಳು ಸ್ವಪ್ನದಲ್ಲಿ ಯಾರಿಗೂ ಯಾವಾಗಲೂ ಉಪಯೋಗವಾಗುವುದಿಲ್ಲ. ಇದರಿಂದ ಸುಳ್ಳಾದ ಸಂಸಾರ ದುಃಖದ ನಾಶವು ಸುಳ್ಳಾದ ವೇದ ಗುರುಗಳಿಂದ ಸಂಭವಿಸುತ್ತದೆ ಸತ್ಯವಾದ ವೇದ ಮತ್ತು ಗುರುಗಳ ಅಪೇಕ್ಷೆಯಿಲ್ಲ.

ಮರುಭೂಮಿಯಲ್ಲಿಯ ಮಿಥ್ಯಾ ಜಲದಿಂದ ನೀರಡಿಕೆಯು ಶಮನವಾಗದಂತೆ ಮಿಥ್ಯಾವೇದ ಮತ್ತು ಗುರುವಿನಿಂದ ಸಂಸಾರ ದುಃಖವು ನಾಶವಾಗಲಾರದು. ಮಿಥ್ಯೆಯಾದ ವೇದ ಮತ್ತು ಗುರುಗಳಿಂದ ಸಂಸಾರ ದುಃಖವು ನಾಶವಾಗುವುದೆಂದು ಯಾರಾದರೂ ಅಂಗೀಕರಿಸಿದರೆ, ಮೃಗಜಲದಿಂದಲೂ ನೀರಡಿಕೆಯು ನಾಶವಾಗುತ್ತದೆಂದು ಅಂಗೀಕರಿಸಬೇಕಾಗುತ್ತದೆ ಆದರೆ ಇದು ಸಂಭವಿಸುವುದಿಲ್ಲ ಎಂದು ಶಿಷ್ಯನು ಮಾಡಿದ ಆಕ್ಷೇಪಣೆಗೆ ಸಮಾಧಾನವು ಮುಂದಿನ ದೋಹಾಗಳಲ್ಲಿ ಹೇಳಲ್ಪಡುತ್ತದೆ.

ಚೌಪಾಈ – ಯದ್ಯಪಿ ಮಿಥ್ಯಾ ಮರು–ಥಲ–ಪಾನಿ |
ತಾ ತೈ ಕಿನಹು ನ ಪ್ಯಾಸ ಬುಝಾನಿ ||
ತದಪಿ ವಿಷಮ ದೃಷ್ಟಾಂತ ಸು ತೇರೊ |
ಸತ್ತಾ ಭೇದ ದುಹುನ ಮೆ ಹೇರೊ || ||೧೪೭||

ಅರ್ಥ : ಯದ್ಯಪಿ ಮಿಥ್ಯಾ ಮೃಗಜಲದಿಂದ ನೀರಡಿಕೆಯು ಶಮನವಾಗುವುದಿಲ್ಲ ಅದರಂತೆ ಮಿಥ್ಯೆಯಾದ ವೇದ ಗುರುಗಳಿಂದ ದುಃಖ ನಾಶವಾಗುತ್ತದೆಂದು ಅಂಗೀಕರಿಸಿದರೆ, ಮೃಗಜಲದಿಂದಲೂ ನೀರಡಿಕೆಯು ನಾಶವಾಗಲಿಕ್ಕೇ ಬೇಕು. ಹಾಗೆ ನಾಶವಾಗುವುದು ಕಂಡುಬಂದಿಲ್ಲ. ಇದರಂತೆ ಮಿಥ್ಯಾ ವೇದ ಗುರುವಿನಿಂದ ಸಂಸಾರ ದುಃಖವು ನಾಶವಾಗುವುದಿಲ್ಲ. ಈ ವಿಷಯ

ವಾಗಿ ನೀನು ಹೇಳಿದ ದೃಷ್ಟಾಂತವು ವಿಷಮವಾಗಿದೆ ಮೃಗಜಲ ಮತ್ತು ನೀರಡಿಕೆ ಇವುಗಳಲ್ಲಿ ಸತ್ತಾ ಭೇದವಿದೆ. ಇವು ಸಮಸತ್ತಗಳಲ್ಲ. ನೀನು ಇದನ್ನು ವಿಚಾರಪೂರ್ವಕವಾಗಿ ತಿಳಿದುಕೊ.

ಸಮಸತ್ತೆಯುಳ್ಳ ಪದಾರ್ಥಗಳಿಗೆ ಪರಸ್ಪರ ಸಾಧಕ ಬಾಧಕವಿರುತ್ತದೆ

ಇಲ್ಲಿ ಒಂದು ಶಂಕೆಯುಂಟಾಗುತ್ತದೆ. ಸಮಸತ್ತವುಳ್ಳ ಪದಾರ್ಥಗಳೇ ಪರಸ್ಪರ ಸಾಧಕ ಬಾಧಕಗಳಾಗಿರುವವೆಂಬ ನಿಯಮವಿಲ್ಲ. ವಿಷಮಸತ್ತೆ ಉಳ್ಳ ಪದಾರ್ಥಗಳೂ ಸಹ ಕೆಲವು ಸ್ಥಳಗಳಲ್ಲಿ ಸಾಧಕ ಬಾಧಕಗಳಾಗಿರುವುದು ಕಂಡುಬರುತ್ತದೆ ಹೇಗೆಂದರೆ, ಸರ್ವತ್ರ ಅಧ್ಯಾಸದ ಸತ್ತೆಯು ಅಧಿಷ್ಠಾನಕ್ಕಿಂತ ವಿಷಮ ಸತ್ತೆಯುಳ್ಳದ್ದಾಗಿದೆ ಆ ಅಧ್ಯಾಸದ ಸಾಧಕತೆಯು ಅಂದರೆ ಕಾರಣತೆಯು ಅಧಿಷ್ಠಾನದಲ್ಲಿ ಇರುತ್ತದೆ

ಉದಾಹರಣೆ ಕಲ್ಪಿತ ರಜತಕ್ಕೆ ಅಧಿಷ್ಠಾನವಾದ ಶುಕ್ತಿಯು ವ್ಯಾವಹಾರಿಕ ಸತ್ತೆಯುಳ್ಳದ್ದು ಮತ್ತು ರಜತವು ಪ್ರಾತಿಭಾಸಿಕ ಸತ್ತೆಯುಳ್ಳದ್ದು ಈ ಪ್ರಾತಿಭಾಸಿಕ ಸತ್ತೆಯುಳ್ಳ ರಜತದ ಸಾಧಕತೆಯು ಶುಕ್ತಿಯಲ್ಲಿರುತ್ತದೆ ಇಲ್ಲವೇ ಜಗತ್ತಿಗೆ ಬ್ರಹ್ಮವು ಅಧಿಷ್ಠಾನ ಅದು ಪಾರಮಾರ್ಥಿಕ ಸತ್ತೆಯುಳ್ಳದ್ದು. ಜಗತ್ತು ವ್ಯಾವಹಾರಿಕ ಸತ್ತೆಯುಳ್ಳದ್ದು ಈ ವ್ಯಾವಹಾರಿಕ ಸತ್ತೆಯುಳ್ಳ ಜಗತ್ತಿನ ಸಾಧಕತೆಯು ಬ್ರಹ್ಮದಲ್ಲಿರುತ್ತದೆ ಇದರ ಮೇಲಿಂದ ವಿಷಮ ಸತ್ತೆಯುಳ್ಳ ವಸ್ತುಗಳು ಪರಸ್ಪರ ಸಾಧಕವಾಗುತ್ತವೆಂಬುದು ಸ್ಪಷ್ಟವಾಯಿತು. ಮತ್ತು ಅಂತಃಕರಣ ವೃತ್ತಿ ರೂಪವಾದ ಶುಕ್ತಿಯ ಯಥಾರ್ಥ ಜ್ಞಾನದಿಂದ ಜ್ಞಾನ ಸಹಿತ ರಜತದ ಬಾಧೆಯಾಗುತ್ತದೆ. ಇಲ್ಲಿ ಜ್ಞಾನ ಸಹಿತ ರಜತವು ಪ್ರಾತಿಭಾಸಿಕ ಸತ್ತೆಯುಳ್ಳದ್ದು. ಶುಕ್ತಿ ಜ್ಞಾನವು ವ್ಯಾವಹಾರಿಕ ಸತ್ತೆ ಉಳ್ಳದ್ದು. ಈ ರೀತಿ ವಿಷಮ ಸತ್ತೆಯುಳ್ಳ ಪದಾರ್ಥಗಳು ಬಾಧಕವಾಗಿರುತ್ತವೆ. ಆದುದರಿಂದ ಸಮಸತ್ತೆಯುಳ್ಳ ಪದಾರ್ಥಗಳು ಪರಸ್ಪರ ಸಾಧಕ ಬಾಧಕವಾಗಿರುವವೆಂಬ ನಿಯಮವು ಇರುವುದಿಲ್ಲ

ಇದಕ್ಕೆ ಸಮಾಧಾನ ಕೇವಲ ಶುಕ್ತಿ ಇಲ್ಲವೇ ಕೇವಲ ಬ್ರಹ್ಮವು

ಕ್ರಮವಾಗಿ ರಜತದ ಇಲ್ಲವೇ ಜಗತ್ತಿನ ಕಲ್ಪಿತಾಧಿಷ್ಠಾನವಲ್ಲ ವುತ್ತೇನೆಂದರೆ, ತೂಲಾ ವಿದ್ಯಾ ಸಹಿತವಾದ ಶುಕ್ತಿ ಇಲ್ಲವೇ ಮೂಲಾ ವಿದ್ಯಾ ಸಹಿತವಾದ ಪರಬ್ರಹ್ಮ ಚೈತನ್ಯವು ಅಧಿಷ್ಠಾನವಾಗುತ್ತದೆ ಕೆಲವು ಸ್ಥಳಗಳಲ್ಲಿ ವಿಶೇಷಣದ ಧರ್ಮವು ವಿಶಿಷ್ಟದಲ್ಲಿ ವ್ಯವಹಾರವಾಗುತ್ತದೆ ಈ ನಿಯಮದಂತೆ ನೋಡಿದರೆ ಪ್ರಾತಿಭಾಸಿಕ ತೂಲಾ ವಿದ್ಯಾ ಸಹಿತವಾದ ಶುಕ್ತಿ, ಇಲ್ಲವೇ ಶುಕ್ತಿ ಅವಚ್ಛಿನ್ನ ಚೈತನ್ಯಕ್ಕೆ ಪ್ರಾತಿಭಾಸಿಕವೆನ್ನುತ್ತಾರೆ ವ್ಯಾವಹಾರಿಕ ಮೂಲಾವಿದ್ಯಾವಚ್ಛಿನ್ನ ಬ್ರಹ್ಮಚೈತನ್ಯಕ್ಕೆ ವ್ಯಾವಹಾರಿಕವೆನ್ನುತ್ತಾರೆ ಇಲ್ಲಿ ಅವಿದ್ಯಾ ಉಪಾಧಿಯೇ ವಿಶೇಷಣವಲ್ಲ ಆದರೂ ಅವಿವೇಕಿ ಜನರ ದೃಷ್ಟಿಗೆ ವಿಶೇಷಣದಂತೆ ಪ್ರತೀತಿಯಾಗುವುದರಿಂದ ವಿಶೇಷಣವೆನ್ನುತ್ತಾರೆ ಆ ವಿಶೇಷಣ ದೃಷ್ಟಿಯಿಂದ ವಿಶಿಷ್ಟ ಚೈತನ್ಯವೆನ್ನುತ್ತಾರೆ ಅವಿದ್ಯಾ ಧರ್ಮವಾದ ಪ್ರಾತಿಭಾಸಿಕಕ್ಕೂ ಮತ್ತು ವ್ಯಾವಹಾರಿಕತೆಗೂ ತಮ್ಮ ತಮ್ಮ ವಿಶೇಷ್ಯ ಅಂದರೆ ಆಶ್ರಯವಾದ ಶುಕ್ತಿಯಲ್ಲಿ ಮತ್ತು ಬ್ರಹ್ಮದಲ್ಲಿ ವ್ಯವಹಾರವಾಗುತ್ತದೆ ಆದ್ದರಿಂದ ಇಲ್ಲಿ ವಿಷಮ ಸತ್ತೆಯುಳ್ಳದ್ದು ಸಾಧಕವಲ್ಲ ಸಮಸತ್ತೆಯುಳ್ಳದ್ದು ಬಾಧಕವಲ್ಲ.

ಪಂಚಪಾಧಿಕಾಕಾರರ ರೀತಿಯಂತೆ ತೂಲಾ ವಿದ್ಯೆಯು ಮೂಲಾ ವಿದ್ಯೆಗಿಂತ ಭಿನ್ನವಲ್ಲ. ಆದುದರಿಂದ ತನ್ನಿವೃತ್ತಿಯು ಶುಕ್ತಿ ಜ್ಞಾನದಿಂದ ಸಂಭವಿಸುವುದಿಲ್ಲ ; ಬ್ರಹ್ಮಜ್ಞಾನದಿಂದಲೇ ಸಂಭವಿಸುತ್ತದೆ ಆದರೂ ವ್ಯಾವಹಾರಿಕ ಸತ್ತೆಯುಳ್ಳ ಅಂತಃಕರಣ ವೃತ್ತಿರೂಪವಾದ ಶುಕ್ತಿಯ ಯಥಾರ್ಥ ಜ್ಞಾನದಿಂದ ಶುಕ್ತಿನಿಷ್ಟ ತೂಲಾ ವಿದ್ಯೆಯ ತಿರಸ್ಕಾರವಾಗುತ್ತದೆ ಆದುದರಿಂದ ಅದರ ಕಾರ್ಯವಾದ ಜ್ಞಾನ ಸಹಿತ ರಜತದ ತಿರಸ್ಕಾರವಾಗುತ್ತದೆ ಆದುದರಿಂದ ಇಲ್ಲಿ ವಿಷಮ ಸತ್ತೆಯುಳ್ಳ ಪದಾರ್ಥದಲ್ಲಿ ಬಾಧಕವೂ ಇಲ್ಲ

ಈ ಸಮಾಧಾನವು ಪ್ರಸಂಗಾನುಸಾರವಾಗಿ ಪ್ರತಿಪಾದಿಸಲ್ಪಟ್ಟಿದೆ ವಿಚಾರ ದೃಷ್ಟಿಯಿಂದ ನೋಡಿದರೆ, ಅಧಿಷ್ಠಾನ ರೂಪ ಸಾಧಕವೂ ಸಹ ವಿಷಮ ಸತ್ತೆಯುಳ್ಳದ್ದಾಗಿದೆ, ಸಮಸತ್ತೆಯುಳ್ಳದ್ದಲ್ಲ. ಇದೊಂದು ನಿಯಮ ಮತ್ತು ಮಿಥ್ಯಾ ಜ್ಞಾನವೂ ಸಹ ಮಿಥ್ಯಾ ವಸ್ತುವಿಗೆ ಬಾಧಕವಾಗುತ್ತದೆ.

ಇದೊಂದು ನಿಯಮ ಅಧಿಷ್ಠಾನ ಜ್ಞಾನರೂಪ ಬಾಧಕದಲ್ಲಿ ನಿಯಮವಿಲ್ಲ. ಅದು ಕೆಲವು ಸ್ಥಳಗಳಲ್ಲಿ ವಿಷಮ ಸತ್ತೆಯುಳ್ಳದ್ದಾಗಿರುತ್ತದೆ. ಕೆಲವು ಸ್ಥಳಗಳಲ್ಲಿ ಸಮಸತ್ತೆಯುಳ್ಳದ್ದಾಗಿರುತ್ತದೆ. ಹೇಗೆಂದರೆ –

೧ ಶುಕ್ತಿ ರಜತಕ್ಕೆ ಶುಕ್ತಿ ಜ್ಞಾನವು ಬಾಧಕ ಸ್ವಪ್ನ ಜಗತ್ತಿಗೆ ಜಾಗ್ರತ್ ಜ್ಞಾನವು ಬಾಧಕ. ಇಲ್ಲಿ ವಿಷಮ ಸತ್ತೆಯು ಕಂಡುಬರುತ್ತದೆ.

೨ ವ್ಯಾವಹಾರಿಕವಾದ ಜಗತ್ತಿಗೆ ವೃತ್ತಿ ರೂಪ ಬ್ರಹ್ಮಜ್ಞಾನವು ಬಾಧಕ. ಇಲ್ಲಿ ಸಮಸತ್ತೆಯು ಕಂಡುಬರುತ್ತದೆ.

ಆದುದರಿಂದ ಇಲ್ಲಿ ಹೇಳಿದ ನಿಯಮವು ಅಧಿಷ್ಠಾನ ರೂಪ ಸಾಧಕ ಪದಾರ್ಥವು ಜ್ಞಾನರೂಪಬಾಧಕ ಪದಾರ್ಥವನ್ನು ಬಿಟ್ಟು ಉಳಿದ ಪದಾರ್ಥಗಳನ್ನು ವಿಷಯೀಕರಿಸುತ್ತದೆಂದು ತಿಳಿಯಬೇಕು

ಚೌಪಾಈ – ಸಮಸತ್ತಾ ಭವದುಃಖ ಗುರುವೇದಾ ।
ಯೂ ಗುರುವೇದ ಕರತ ಭವಭೇದಾ ॥
ಆಪಸಮ್ಯೆ ಸಮಸತ್ತಾ ಜಿನಕೀ ।
ಲಖಿಸಾಧಕ–ಬಾಧಕತಾ ತಿನಕೆ ॥ ॥೧೪೮॥

ಅರ್ಥ. ಭವದುಃಖಕ್ಕೂ, ವೇದ ಗುರುಗಳಿಗೂ ಸಮಸತ್ತಾ ಅಂದರೆ ಏಕಸತ್ತಾ ಆಗಿರುವುದರಿಂದ ವೇದ ಗುರುಗಳ ದ್ವಾರ ಭವ ದುಃಖದ ನಾಶವು ಸಂಭವಿಸುತ್ತದೆ ಯಾವುದಕ್ಕೆ ಯಾವುದರಿಂದ ಸಮಸತ್ತೆಯಿರುವುದೋ ಅದಕ್ಕೆ ಅದರಿಂದ ಸಾಧಕ ಬಾಧಕಗಳು ಘಟಿಸುತ್ತವೆ ಹೇಗೆಂದರೆ ವೃತ್ತಿಕೆಗೂ ಘಟಕ್ಕೂ ಸಮಸತ್ತೆ ಇರುತ್ತದೆ ಆದುದರಿಂದ ವೃತ್ತಿಕೆಯು ಘಟಕ್ಕೆ ಸಾಧಕವಾಗಿರುತ್ತದೆ. ಮತ್ತು ಅಗ್ನಿಗೂ ಕಾಷ್ಟಕ್ಕೂ ಸಮಸತ್ತೆ ಇರುತ್ತದೆ ಆದುದರಿಂದ ಅಗ್ನಿಯು ಕಾಷ್ಟಕ್ಕೆ ಬಾಧಕವಾಗಿದೆ. ಇಲ್ಲಿ ಸಾಧಕವೆಂದರೆ ಕಾರಣ, ಬಾಧಕವೆಂದರೆ ಕಾರ್ಯವೆಂದು ತಿಳಿಯಬೇಕು. ಮೃಗಜಲಕ್ಕೂ ನೀರಡಿಕೆಗೂ ಸಮಸತ್ತೆಯಿಲ್ಲ. ಆದುದರಿಂದ ಮೃಗಜಲವು ನೀರಡಿಕೆಗೆ ಬಾಧಕವಲ್ಲ.

ಈ ಸ್ಥಾನದಲ್ಲಿ ಇರುವ ರಹಸ್ಯವೇನೆಂದರೆ, ಚೈತನ್ಯದಲ್ಲಿ ಪಾರಮಾರ್ಥಿಕ ಸತ್ತಾ ಒಂದೇ ಇರುತ್ತದೆ ಮತ್ತು ಚೈತನ್ಯಕ್ಕೆ ಭಿನ್ನವಾದ ಸಕಲ ಮಿಥ್ಯಾ ಪದಾರ್ಥಗಳಲ್ಲಿ ವ್ಯಾವಹಾರಿಕವೆಂದೂ, ಪ್ರಾತಿಭಾಸಿಕವೆಂದೂ ಎರಡು ವಿಧ ಸತ್ತಾಗಳು ಇರುತ್ತವೆ

## ಮೂರು ಸತ್ತೆಗಳ ವಿಚಾರ

ಬ್ರಹ್ಮ ಜ್ಞಾನವಿಲ್ಲದೆ ಬಾಧೆಯಾಗದೆ ಬ್ರಹ್ಮಜ್ಞಾನದಿಂದಲೇ ಯಾವುದು ಬಾಧೆಯಾಗುವುದೋ ಆ ಪದಾರ್ಥವು ವ್ಯಾವಹಾರಿಕ ಸತ್ತೆಯೆನಿಸುತ್ತದೆ. ಈ ವ್ಯಾವಹಾರಿಕ ಸತ್ತೆಯು ಈಶ್ವರ ಸೃಷ್ಟಿಯಲ್ಲಿ ಇರುತ್ತದೆ ಹೇಗೆಂದರೆ, ದೇಹೇಂದ್ರಿಯಾದಿ ಪ್ರಪಂಚ ರೂಪವಾದ ಈಶ್ವರ ಸೃಷ್ಟಿಯು ಬ್ರಹ್ಮಜ್ಞಾನ ವಿಲ್ಲದೆ ಬಾಧೆಯಾಗಲಾರದು ಬ್ರಹ್ಮಜ್ಞಾನದಿಂದಲೇ ಬಾಧೆಯಾಗುತ್ತದೆ ಅಭಿಪ್ರಾಯವೇನೆಂದರೆ, ಈಶ್ವರನಿಂದ ಸೃಷ್ಟಿಯಾದ ಪದಾರ್ಥಗಳಿಗೆ ಬ್ರಹ್ಮ ಜ್ಞಾನವಿಲ್ಲದೆ ನಾಶವಾದರೂ ಬ್ರಹ್ಮಜ್ಞಾನವಿಲ್ಲದೆ ಬಾಧೆಯಾಗಲಾರದು

ಪ್ರಶ್ನೆ . ಬಾಧೆಯೆಂದರೇನು ?

ಉತ್ತರ ಬಾಧೆಯೆಂದರೆ ಅಪರೋಕ್ಷ ಮಿಥ್ಯಾ ನಿಶ್ಚಯ ಈ ಅಪರೋಕ್ಷ ಮಿಥ್ಯಾ ನಿಶ್ಚಯವು ಈಶ್ವರನಿಂದ ಸೃಷ್ಟಿಯಾದ ಪದಾರ್ಥಗಳಲ್ಲಿ ಬ್ರಹ್ಮಜ್ಞಾನಕ್ಕಿಂತ ಪೂರ್ವ ಯಾರಿಗೂ ಸಂಭವಿಸಲಾರದು ಅದು ಬ್ರಹ್ಮ ಜ್ಞಾನಾನಂತರವೇ ಸಂಭವಿಸುತ್ತದೆ. ಆದುದರಿಂದಲೇ ಮೂಲಾವಿದ್ಯಾ ಕಾರ್ಯವಾದ ಈಶ್ವರನಿಂದ ಸೃಷ್ಟಿಯಾದ ಪದಾರ್ಥಗಳಲ್ಲಿ ವ್ಯಾವಹಾರಿಕ ಸತ್ತೆ ಇರುತ್ತದೆ.

ಪ್ರಶ್ನೆ . ವ್ಯಾವಹಾರಿಕ ಸತ್ತೆಯೆಂದರೇನು ?

ಉತ್ತರ : ಜನ್ಮ – ಮರಣ ಬಂಧ ಮೋಕ್ಷಾದಿ ವ್ಯವಹಾರವನ್ನು ಉಂಟುಮಾಡುವ ಸತ್ತೆ ಅಂದರೆ ಅಸ್ತಿತ್ವವೇ ವ್ಯವಹಾರ ಸತ್ತೆ

ಪ್ರಶ್ನೆ : ಪ್ರಾತಿಭಾಸಿಕ ಸತ್ತೆ ಎಂದರೇನು ?

ಉತ್ತರ : ಬ್ರಹ್ಮಜ್ಞಾನವಿಲ್ಲದೆ ಬಾಧೆಯಾಗುವ ಪದಾರ್ಥಗಳು ಇರುವ ಸತ್ತೆಗೆ ಪ್ರಾತಿಭಾಸಿಕ ಸತ್ತೆಯೆನ್ನುತ್ತಾರೆ ಹೇಗೆಂದರೆ, ಬ್ರಹ್ಮಜ್ಞಾನವಿಲ್ಲದೆ

ಶುಕ್ತಿ, ರಜ್ಜು ಮೊದಲಾದುವುಗಳ ಜ್ಞಾನದಿಂದ ರಜತ ಸರ್ಪಾದಿಗಳ ಬಾಧೆಯಾಗುತ್ತದೆ ಆದುದರಿಂದ ಇದಕ್ಕೆ ಪ್ರಾತಿಭಾಸಿಕ ಸತ್ತೆ ಎನ್ನುತ್ತಾರೆ.

ಪ್ರಶ್ನೆ ಪ್ರಾತಿಭಾಸಿಕವೆಂದರೇನು ?

ಉತ್ತರ : ಪ್ರತೀತಿ ಮಾತ್ರ ಸತ್ತಾ ಅಂದರೆ ಅಸ್ತಿತ್ವವೇ ಪ್ರಾತಿಭಾಸಿಕ. ತೂಲಾ ವಿದ್ಯಾ ಕಾರ್ಯವಾದ ರಜತಾದಿ ಪದಾರ್ಥಗಳಿಗೆ ಪ್ರತೀತಿ ಕಾಲದಲ್ಲಿ ಮಾತ್ರ ಅಸ್ತಿತ್ವವಿರುವುದರಿಂದ ಅದಕ್ಕೆ ಪ್ರಾತಿಭಾಸಿಕವೆನ್ನುತ್ತಾರೆ

ಪ್ರಶ್ನೆ : ತೂಲಾ ವಿದ್ಯೆ ಎಂದರೇನು ?

ಉತ್ತರ. ಘಟವೇ ಮೊದಲಾದ ಪದಾರ್ಥಗಳ ಉಪಹಿತ ಚೈತನ್ಯವನ್ನು ಆಚ್ಛಾದಿಸುವ ಅವಿದ್ಯೆಯನ್ನು ತೂಲಾ ವಿದ್ಯೆಯೆನ್ನುತ್ತಾರೆ. ಇದಕ್ಕೆ ಅವಸ್ಥಾಜ್ಞಾನವೆಂತಲೂ, ಅಂಶಾದಿ ದೋಷಗಳಿರುವ ಅವಿದ್ಯೆಯೆಂತಲೂ ಹೆಸರುಗಳುಂಟು ಈ ತೂಲಾ ವಿದ್ಯೆಯು ಅಂಶಭೇದದಿಂದ ಅನೇಕವಾಗಿದೆ. ಮತ್ತು ಭಿನ್ನ ಭಿನ್ನ ನಾನಾ ಪದಾರ್ಥಗಳನ್ನು ಆವರಣ ಮಾಡುತ್ತದೆ. ಅಂತಃಕರಣ ವೃತ್ತಿಯು ಘಟಾದಿ ಪದಾರ್ಥಗಳ ಆಕಾರವಾದರೆ ಆ ಪದಾರ್ಥಗಳನ್ನು ಆವರಿಸಿದ ತೂಲಾ ವಿದ್ಯೆಯು ನಷ್ಟವಾಗುತ್ತದೆ. ಆ ವೃತ್ತಿಯು ಅನ್ಯ ದೇಶಕ್ಕೆ ಹೋದಾಗ ಪುನಃ ಅವಿದ್ಯಾಂಶವು ಉತ್ಪನ್ನವಾಗುತ್ತದೆ ಈ ತೂಲಾ ವಿದ್ಯೆಯ ನಾಶಕ್ಕಾಗಿ ಬ್ರಹ್ಮಜ್ಞಾನದ ಅವಶ್ಯಕತೆ ಇರುವುದಿಲ್ಲ. ಅದು ಪ್ರಾತಿಭಾಸಿಕ ಸತ್ತೆಯುಳ್ಳದ್ದಾದ್ದರಿಂದ ಘಟಾದಿ ಪದಾರ್ಥಗಳ ಜ್ಞಾನದಿಂದ ಅಂದರೆ ವ್ಯಾವಹಾರಿಕ ಸತ್ತಾದಿಂದ ಅದರ ನಾಶವಾಗುತ್ತದೆ.

ಈ ವಿಷಯದಲ್ಲಿ ಶ್ರೀ ಪದ್ಮಪಾದಾಚಾರ್ಯರ ಅಭಿಪ್ರಾಯವೇನೆಂದರೆ ಮೂಲಾ ವಿದ್ಯೆಯೇ ತೂಲಾ ವಿದ್ಯೆ. ಇವು ಬೇರೆ ಬೇರೆಯಲ್ಲ ಇವರ ಮತದಂತೆ, ಜನರ ಸಮುದಾಯದಲ್ಲಿ ಸಿಡಿಲು ಬಡಿದರೆ ಜನರೆಲ್ಲ ಹಿಂದಕ್ಕೆ ಹೋಗುತ್ತಾರೆ, ನಂತರ ನೇರುತ್ತಾರೆ ಇದರಂತೆ ಅಂತಃಕರಣ ವೃತ್ತಿಯು ಯಾವ ಪದಾರ್ಥದ ಆಕಾರವಾಗಿದೆಯೋ ಆ ಪದಾರ್ಥಾಕಾರವನ್ನು ಧರಿಸಿದ ಅವಿದ್ಯೆಯು ತಿರೋಹಿತವಾಗುತ್ತದೆ. ನಂತರ ವೃತ್ತಿಯು ಬೇರೆ ದೇಶಕ್ಕೆ ಹೋದರೆ ಅವಿದ್ಯೆಯು ಮತ್ತೆ ನೇರುವುದು. ಮೂಲಾ ವಿದ್ಯೆಯು ಬ್ರಹ್ಮ

ಜ್ಞಾನವಿಲ್ಲದೆ ನಾಶವಾಗಲಾರದು. ಆದರೂ ಸ್ವಪ್ನ ಪದಾರ್ಥಗಳು ಮತ್ತು ಕಲ್ಪಿತ ಸರ್ಪಾದಿ ಪದಾರ್ಥಗಳು ಅವಿದ್ಯಾ ನಾಶದ ಅಪೇಕ್ಷೆಯಿಲ್ಲದೆ ವಿರೋಧಿ ಪದಾರ್ಥಗಳ ಜ್ಞಾನದಿಂದ ಮೂಲಾವಿದ್ಯೆಯಲ್ಲಿ ಲಯರೂಪ ನಾಶವಾಗುತ್ತವೆ.

ಪಾರಮಾರ್ಥಿಕ ಸತ್ತೆ ಎಂದರೇನು ? ಮೂರೂ ಕಾಲದಲ್ಲಿ ಬಾಧೆಯಾಗದ ಪದಾರ್ಥದ ಸತ್ತೆಯನ್ನು ಪಾರಮಾರ್ಥಿಕ ಸತ್ತೆಯೆನ್ನುತ್ತಾರೆ ಚೈತನ್ಯದ ಬಾಧೆಯು ಯಾವಾಗಲೂ ಯಾವ ಪದಾರ್ಥದಿಂದಲೂ ಸಂಭವಿಸುವುದಿಲ್ಲ ಆದುದರಿಂದ ಚೈತನ್ಯದಲ್ಲಿ ಪಾರಮಾರ್ಥಿಕ ಸತ್ತೆ ಇರುತ್ತದೆ.

ಸಾರಾಂಶ· ರಜ್ಜು ಸರ್ಪಾದಿಗಳಿಗೂ, ಸ್ವಪ್ನ ಪದಾರ್ಥಗಳಿಗೂ ಪ್ರಾತಿಭಾಸಿಕ ಸತ್ತೆ ಎಂತಲೂ, ಈಶ್ವರನಿಂದ ಸೃಷ್ಟಿಯಾದ ಪದಾರ್ಥಗಳಿಗೆ ವ್ಯಾವಹಾರಿಕ ಸತ್ತೆಯೆಂತಲೂ, ಚೈತನ್ಯಕ್ಕೆ ಮಾತ್ರ ಪಾರಮಾರ್ಥಿಕ ಸತ್ತೆಯೆಂತಲೂ ಕರೆಯುತ್ತಾರೆ

ವೇದಗುರು ಭವದುಃಖಗಳು ಸಮಸತ್ತೆಯುಳ್ಳವುಗಳಾದುದರಿಂದ ವೇದ ಗುರುಗಳಿಂದ ಭವದುಃಖ ನಾಶವು ಸಂಭವಿಸುತ್ತದೆ

ಉಕ್ತ ಪ್ರಕಾರವಾಗಿ ವೇದ ಗುರುಗಳೂ ಸಂಸಾರ ದುಃಖವೂ ಒಂದೇ ಆದ ವ್ಯಾವಹಾರಿಕ ಸತ್ತೆಯುಳ್ಳವುಗಳು. ಆದುದರಿಂದ ಸಮಸತ್ತೆಯುಳ್ಳವುಗಳೆಂದು ಹೇಳಿಸಿಕೊಳ್ಳುತ್ತವೆ ಆದುದರಿಂದ ಮಿಥ್ಯಾ ವೇದ ಗುರುಗಳಿಂದ ಮಿಥ್ಯಾ ಭವದುಃಖ ನಾಶವು ಸಂಭವಿಸುತ್ತದೆ ಕ್ಷುತ್ಪಿಪಾಸೆಗಳು ಪ್ರಾಣ ಧರ್ಮವಾಗಿರುತ್ತವೆ ಪ್ರಾಣ ಮತ್ತು ಪ್ರಾಣದ ಧರ್ಮವು ಬ್ರಹ್ಮಜ್ಞಾನವಿಲ್ಲದೆ ಬಾಧೆಯಾಗುವುದಿಲ್ಲ ಆದುದರಿಂದ ಅವುಗಳಲ್ಲಿ ವ್ಯಾವಹಾರಿಕ ಸತ್ತೆ ಇರುತ್ತದೆ ಮೃಗಜಲವು ಬ್ರಹ್ಮ ಜ್ಞಾನವಿಲ್ಲದೆ ಮರುಭೂಮಿಯ ಜ್ಞಾನ ಮಾತ್ರದಿಂದ ಬಾಧೆಯಾಗುವುದರಿಂದ ಅದರಲ್ಲಿ ಪ್ರಾತಿಭಾಸಿಕ ಸತ್ತೆಯಿರುತ್ತದೆ. ಈ ರೀತಿಯಾಗಿ ನೀರಡಿಕೆಗೂ, ಮೃಗಜಲಕ್ಕೂ ವಿಷಮಸತ್ತೆ ಇರುವುದರಿಂದ ಮೃಗಜಲದಿಂದ ತೃಷೆಯು ನಾಶವಾಗಲಾರದು.

ಈ ಪ್ರಕಾರವಾಗಿ ದಾರ್ಷ್ಟಾಂತದಲ್ಲಿ ಬಾಧಕವಾದ ವೇದಗುರುಗಳು ಮತ್ತು

ಬಾಧ್ಯವಾದ ಸಂಸಾರದುಃಖ – ಇವುಗಳಲ್ಲಿ ಸಮಸತ್ತೆ ಇರುತ್ತದೆ. ದೃಷ್ಟಾಂತ ದಲ್ಲಿ ಮೃಗಜಲಕ್ಕೂ, ತೃಷೆಗೂ ವಿಷಮಸತ್ತೆ ಇರುವುದರಿಂದ ನಿನ್ನ ದೃಷ್ಟಾಂತವು ಸರಿಯಲ್ಲ ಅಂದರೆ ಅದು ದಾರ್ಷ್ಟಾಂತಕ್ಕೆ ಸಮಾನವಲ್ಲ.

ಯದ್ಯಪಿ ಮಿಥ್ಯಾ ವೇದಗುರುಗಳಿಂದ ಮಿಥ್ಯಾ ಭವದುಃಖ ನಾಶವು ಸಂಭವಿಸುತ್ತದೆ ಎಂಬುದೇ ಸತ್ಯ ಹೀಗೆ ಅಂಗೀಕರಿಸುವುದರಿಂದ ಸಿದ್ಧಾಂತಕ್ಕೆ ಹಾನಿಯೂ ಇಲ್ಲ ತಥಾಪಿ ವೇದಗುರು ರೂಪವಾದ ಇಷ್ಟ ಪದಾರ್ಥವನ್ನು ಮಿಥ್ಯೆಯೆಂದು ಹೇಳುವುದು ಅಯೋಗ್ಯವಾಗಿದೆ ಮತ್ತು ಜಗತ್ಸತ್ಯತ್ವವಾದಿಗಳ ಉಪಹಾಸಕ್ಕೆ ವಿಷಯವಾಗುತ್ತದೆ ಮಂದಬುದ್ಧಿಗಳಾದ ಜಿಜ್ಞಾಸುಗಳಿಗೆ ವಿಚಿತ್ತತೆಗೂ ಕಾರಣವಾಗಬಹುದೆಂದು ಊಹಿಸಿ ಒಂದು ರೀತಿಯಿಂದ ಮಿಥ್ಯೆಯೆಂಬುದನ್ನು ಖಂಡಿಸಿದಂತೆ ತೋರಿಸಿದರೂ ಸಿದ್ಧಾಂತಕ್ಕೆ ಭಂಗವಾಗ ದಂತೆ ಮತ್ತೊಂದು ವಿಧವಾಗಿ ಹೇಳಲ್ಪಡುತ್ತದೆ

ವೇದಗುರುಗಳು ಮಿಥ್ಯ ಎನ್ನುವವರನ್ನು, ಶಿಷ್ಯನ ದೃಷ್ಟಿಯಿಂದ ವೇದ ಗುರುಗಳು ಮಿಥ್ಯೆಯೆ? ಇಲ್ಲವೇ ಗುರುಗಳ ದೃಷ್ಟಿಯಿಂದ ವೇದಗುರುಗಳು ಮಿಥ್ಯೆಯೆ ? ಎಂದು ಕೇಳಬೇಕು ಒಂದು ವೇಳೆ "ಶಿಷ್ಯನ ದೃಷ್ಟಿಯಿಂದ" ಎಂದು ಹೇಳಿದರೆ ಆ ಶಿಷ್ಯನು ಜ್ಞಾನಿಯೆ? ಅಜ್ಞಾನಿಯೆ? ಎಂದು ಕೇಳ ಬೇಕು ಒಂದು ಪಕ್ಷ ಶಿಷ್ಯನು ಅಜ್ಞಾನಿಯೆಂದು ಹೇಳಿದರೆ ಅವನಿಗೆ ಶಿಷ್ಯತ್ವವು ಸಂಭವಿಸಲಾರದು ಯದ್ಯಪಿ ಉಪದೇಶ ಗುರುವಿನ ಅಪೇಕ್ಷೆ ಯಿಂದ ಸರ್ವ ಜ್ಞಾನಿಗಳಿಗೂ ಶಿಷ್ಯತ್ವವು ಸಂಭವಿಸುತ್ತದೆ, ತಥಾಪಿ ಅವನಿಗೆ ಜ್ಞಾನಾಧಿಕಾರವಿರುವುದರಿಂದ ಶಿಕ್ಷೆಗೆ ಯೋಗ್ಯವಾದ ಶಿಷ್ಯತ್ವವು ಸಂಭವಿಸ ಲಾರದು

ಒಂದು ವೇಳೆ ಆ ಶಿಷ್ಯನು ಅಜ್ಞಾನಿಯೆಂದು ಹೇಳಿದರೆ ಅವನಿಗೆ ಮಿಥ್ಯೆಯೆಂದು ತಿಳಿದ ವೇದಗುರುಗಳ ವಿಷಯದಲ್ಲಿ ಶ್ರದ್ಧಾಪೂರ್ವಕವಾದ ಪ್ರವೃತ್ತಿಯು ಅಸಂಭವದಿಂದ ಬೋಧಪ್ರಾಪ್ತಿಯು ಆಗುವುದು ಸಂದೇಹ ವಾಗಿದೆ ಇಲ್ಲವೇ ಅಜ್ಞಾನಿ ಪುರುಷನಿಗೆ ವೇದಾಂತ ಶ್ರವಣಕ್ಕಿಂತ ಪೂರ್ವ ಜಗತ್ಪದಾರ್ಥದಲ್ಲಿ ಮಿಥ್ಯತ್ವ ಬುದ್ಧಿಯು ಸಂಭವಿಸಲಾರದು. ಈ ರೀತಿ ಯಿಂದ ಶಿಷ್ಯನ ದೃಷ್ಟಿಯಿಂದ ವೇದಗುರುಗಳು ಮಿಥ್ಯೆಯೆಂಬುದು ಸಂಭವಿಸಲಾರದು.

ಇನ್ನು ಗುರುದೃಷ್ಟಿಯಿಂದ ವೇದಗುರುಗಳು ಮಿಥ್ಯೆಯೆಂದು ಹೇಳಿದವನನ್ನು ಆ ಗುರುವು ಜ್ಞಾನಿಯೋ ? ಅಜ್ಞಾನಿಯೋ ? ಎಂದು ಕೇಳಿದರೆ ಆ ಗುರುವು ಅಜ್ಞಾನಿಯೆಂದು ಹೇಳಿದರೆ ಅವನನ್ನು ಗುರುವೆನ್ನುವುದು ಸಂಭವಿಸುವುದಿಲ್ಲ ಎಷ್ಟೋ ಜನ ಅಜ್ಞಾನಿಗಳು ಜಗತ್ತಿನಲ್ಲಿ ಮೂರ್ಖರ ದೃಷ್ಟಿಯಿಂದ ಗುರುಗಳೆಂದು ಅನ್ನಿಸಿಕೊಂಡರೂ ವೇದವೇತ್ತರಾದ ವಿದ್ವಾಂಸರ ದೃಷ್ಟಿಯಿಂದ ಅವರು ಗುರುಪೆಂಬ ಪದಕ್ಕೆ ಅರ್ಹರಲ್ಲ. ಈ ವಿಷಯುವು ತೃತೀಯ ತರಂಗದಲ್ಲಿ ಸ್ಪಷ್ಟವಾಗಿ ನಿರೂಪಿಸಲ್ಪಟ್ಟಿದೆ ಅಜ್ಞಾನಿಗಳ ದೃಷ್ಟಿಯಿಂದಲೂ ವೇದಗುರುಗಳು ಮಿಥ್ಯೆ ಎಂಬುವುದು ಸಂಭವಿಸುವುದಿಲ್ಲ ಅವರ ದೃಷ್ಟಿಯಲ್ಲಿ ವೇದಗುರುಗಳೂ, ಜಗತ್ತೂ ಸತ್ಯವೆಂದು ಅವರ ನಿಶ್ಚಯು

ವೇದಗುರುಗಳು ಮಿಥ್ಯೆಯೆಂಬುವವರು ಜ್ಞಾನಿಗಳೆಂದು ಹೇಳಿದರೆ ಆ ಜ್ಞಾನಿಗೆ ವೇದಗುರುಗಳೂ, ಜಗತ್ತೂ ಬ್ರಹ್ಮಕ್ಕಿಂತ ಭಿನ್ನವಾಗಿ ಪ್ರತೀತಿಯಾಗಿರುವುದೇ ? ಇಲ್ಲವೇ ಅಭಿನ್ನವೆಂದು ಪ್ರತೀತಿಯಾಗಿರುವುದೇ ? ಪ್ರಥಮ ಪಕ್ಷದಲ್ಲಿ ಹೇಳಿದ ಆ ಭೇದವಾದಿಯನ್ನು ಜ್ಞಾನಿಯೆಂದು ಹೇಳುವುದು ಸಮೀಚೀನವಲ್ಲ. ಎರಡನೇ ಪಕ್ಷದಲ್ಲಿ ಸಕಲ ಜಗತ್ತನ್ನೂ ತನ್ನನ್ನೂ ಪರಮಾರ್ಥ ಸತ್ತಾರೂಪವಾದ ಬ್ರಹ್ಮವೆಂದು ತಿಳಿದ ಅದ್ವೈತವಾದಿಯಾದ ಗುರುವಿನ ದೃಷ್ಟಿಯಿಂದ ವೇದಗುರುಗಳು ಮಿಥ್ಯೆಯೆಂದು ಹೇಳುವುದು ಘಟಿಸಲಾರದು. ಅವನ ದೃಷ್ಟಿಯಲ್ಲಿ ಅವರು ಬ್ರಹ್ಮಸ್ವರೂಪರು.

ಆದುದರಿಂದ ವೇದಗುರುಗಳು ಮಿಥ್ಯೆಯೆಂಬುವವನು ಅಜ್ಞನೂ ಅಲ್ಲ, ತಜ್ಞನೂ ಅಲ್ಲ. ಅರ್ಧದಗ್ಧ ಕಾಷ್ಟದಂತೆ ವೇದಾಂತ ಶ್ರವಣ ಮನನವನ್ನು ಮಾಡುವವನಾದ ಅರ್ಧ ಪ್ರಬುದ್ಧ ಪುರುಷನೆಂದು ತಿಳಿಯಬೇಕು. ಇಲ್ಲವೇ ಬಾಹ್ಯ ವ್ಯವಹಾರರತನಾದ ಬಹಿರ್ಮುಖ ಜ್ಞಾನಿಯೆಂದು ತಿಳಿಯಬೇಕು. ಈ ಪ್ರತಿಪಾದನೆಯು ವೇದಗುರು ಸತ್ಯವೆಂಬ ಪಕ್ಷದಲ್ಲಿ ಅದ್ವೈತ ಹಾನಿಯಾಗದೆ ಯುಕ್ತಿಯುಕ್ತವಾಗಿದೆ.

ಶಿಷ್ಯನ ಪ್ರಶ್ನೆ

ಚೌಪಾಈ – ಬ್ರಹ್ಮ ಭಿನ್ನ ಮಿಥ್ಯಾ ಸಬ ಭಾಖೌ ।
ತಿನಕೊ ಭೇದ ಹೇತು ಕಿಹಿ ರಾಖೌ ॥
ಉಪಜ್ಯೊ ಯಹ ಮೋಕು ಸಂದೇಹಾ ।
ಪ್ರಭು ತಾಕೊ ಅಬ ಕೀಜೈ ಛೇಹಾ ॥ ॥೧೪೯॥

ಅರ್ಥ · ಹೇ ಪ್ರಭು ! ತಾವು ಬ್ರಹ್ಮಕ್ಕಿಂತ ಭಿನ್ನವಾದದ್ದು ಸರ್ವವೂ ಮಿಥ್ಯೆಯೆನ್ನುತ್ತೀರಿ ಈ ಮಿಥ್ಯಾ ಪದಾರ್ಥಗಳಲ್ಲಿ ಶುಕ್ತಿ ರಜತಾದಿಗಳು ಬ್ರಹ್ಮಜ್ಞಾನಕ್ಕಿಂತ ಮೊದಲೇ ಬಾಧೆಯಾಗುವವೆಂತಲೂ, ಸಂಸಾರ ದುಃಖವು ಬ್ರಹ್ಮಜ್ಞಾನಾನಂತರ ಬಾಧೆಯಾಗುತ್ತದೆಂತಲೂ ಹೇಳುತ್ತೀರಿ. ಈ ಭೇದಕ್ಕೆ ಕಾರಣವೇನು ?

ಸಮಾಧಾನ .

ಚೌಪಾಈ – ಸಕಲ ಅವಿದ್ಯಾಕಾರಜ ಮಿಥ್ಯಾ ।
ಸಿಷ ! ತಾಮೈ ರಂಚಕಹು ನ ತಥ್ಯಾ ॥
ಜಾ ಅಜ್ಞಾನ ತೈ ಉಪಜತ ಜೂಈ ।
ತಾಕೆ ಜ್ಞಾನ ಬಾಧ ತಿಹಿ ಹೋಈ ॥ ॥೧೫೦॥

ಅರ್ಥ ಹೇ ಶಿಷ್ಯನೆ ! ಬ್ರಹ್ಮಕ್ಕಿಂತ ಭಿನ್ನವಾದ ಸಕಲ ಪದಾರ್ಥಗಳು ಅವಿದ್ಯಾ ಕಾರ್ಯವಾದುದರಿಂದ ಮಿಥ್ಯೆ ಎಂಬುದು ಸತ್ಯವಾದರೂ ಯಾವುದರ ಅಜ್ಞಾನದಿಂದ ಯಾವುದು ಹುಟ್ಟುವುದೋ ಅದು ಅದರ ಜ್ಞಾನದಿಂದ ಬಾಧೆಯಾಗುವುದು ನಿಯಮ. ಶುಕ್ತಿ ರಜ್ಜುವಿನ ಅಜ್ಞಾನದಿಂದ ತೋರಿದ ರಜತ, ಸರ್ಪ ಇವು ಶುಕ್ತಿ ಮತ್ತು ರಜ್ಜುವಿನ ಜ್ಞಾನದಿಂದಲೇ ಬಾಧೆಯಾಗುತ್ತವೆ. ಇದರಂತೆ ಬ್ರಹ್ಮದ ಅಜ್ಞಾನದಿಂದ ಜನ್ಮ ಮರಣಾದಿ ಸಂಸಾರ ದುಃಖವು ಉತ್ಪನ್ನವಾಗುತ್ತದೆ. ಇದು ಬ್ರಹ್ಮಜ್ಞಾನದಿಂದಲೇ ಬಾಧೆಯಾಗುತ್ತದೆ.

ಶಿಷ್ಯ ಉವಾಚ :

ದೋಹಾ – ಭಗವನ್ ಬ್ರಹ್ಮ–ಅಜ್ಞಾನ ತೈ ।
ಜೊ ಉಪಜೈ ಸಂಸಾರ ॥
ಸೋ ಕಿಹಿ ಕ್ರಮತೈ ಹೊತ ಹೈ ।
ಕಹೌ ಮೋಹಿ ನಿರ್ಧಾರ ॥ ॥೧೫೧॥

ಅರ್ಥ : ಹೇ ಭಗವಂತನೇ ! ಬ್ರಹ್ಮದ ಅಜ್ಞಾನದಿಂದ ಸಂಸಾರವು ಉತ್ಪತ್ತಿಯಾಗುವುದೆಂದು ತಾವು ಹೇಳಿದಿರಿ ಅದು ಸತ್ಯವಾದರೆ ಆ ಸಂಸಾರೋತ್ಪತ್ತಿಗೆ ಕ್ರಮ ಯಾವುದು ?

ಉತ್ತರ :

**ಶ್ರೀಗುರು ಉವಾಚ**

ಚೌಪಾಈ – ಜೈಸೆ ಸ್ವಪ್ನ ಹೋತ ಬಿನ ಕ್ರಮತೈ ।
ತ್ಯ ಮಿಥ್ಯಾ ಜಗ ಭಾಸತ ಭ್ರಮತೈ ॥
ಜೋ ತಾಕೊ ಕ್ರಮ ಜಾನ್ಯೋ ಲೌರೈ ।
ಸೊ ಮರುಸ್ಥಲ–ಜಲ ವಸನ ನಿಚೌರೈ ॥ ॥೧೫೨॥

ಅರ್ಥ : ಹೇ ಶಿಷ್ಯನೆ ! ಮಿಥ್ಯೆಯಾದ ಸ್ವಪ್ನವು ಕ್ರಮವಿಲ್ಲದೆ ತೋರುವಂತೆ ಮಿಥ್ಯೆಯಾದ ಜಗತ್ತೂ ಸಹ ಕ್ರಮವಿಲ್ಲದೆ ಪ್ರತೀತಿಯಾಗುತ್ತದೆ ಆದರಲ್ಲಿ ಕ್ರಮವನ್ನು ಕೇಳುವುದು ಬುದ್ಧಿವಂತರ ಲಕ್ಷಣವಲ್ಲ. ಹೇ ಶಿಷ್ಯನೆ ! ಜಗತ್ತಿಗೆ ಕ್ರಮವನ್ನು ಹುಡುಕುವವನು ವಂಧ್ಯಾಪುತ್ರನ ವಸ್ತ್ರವನ್ನು ಮೃಗಜಲದಲ್ಲಿ ತೊಳೆಯುವವನಂತೆ ಎಂದು ತಿಳಿಯಬೇಕು.

ದೋಹಾ – ಉಪನಿಷದನಮೈ ಬಹುತ ವಿಧಿ ।
ಜಗ ಉತ್ಪತ್ತಿ ಪ್ರಕಾರ ॥
ಅಭಿಪ್ರಾಯ ತಿನಕೊ ಯಹಿ ।
ಚೇತನ–ಭಿನ್ನ ಅಸಾರ ॥ ॥೧೫೩॥

ಅರ್ಥ ಅನೇಕ ಉಪನಿಷತ್ತುಗಳಲ್ಲಿ ಜಗದುತ್ಪತ್ತಿಯನ್ನು ಅನೇಕ ಪ್ರಕಾರವಾಗಿ ಹೇಳಿದ್ದು ಕಂಡುಬರುತ್ತದೆ

೧. ಛಾಂದೋಗ್ಯ ಉಪನಿಷತ್ತಿನಲ್ಲಿ, ಸದ್ರೂಪ ಪರಮಾತ್ಮನಿಂದ ಅಗ್ನಿ, ಜಲ, ಪೃಥ್ವಿ ಕ್ರಮವಾಗಿ ಉತ್ಪತ್ತಿಯಾದವೆಂದು ತ್ರಿವೃತ್ಕರಣವನ್ನು ಹೇಳಿದೆ

೨ ತೈತ್ತರೀಯೋಪನಿಷತ್ತಿನಲ್ಲಿ ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ ಈ ಕ್ರಮದಿಂದ ಪಂಚೀಕರಣವನ್ನು ಹೇಳಿದೆ.

ಈ ರೀತಿ ಜಗದುತ್ಪತ್ತಿಯನ್ನು ವೇದವು ಅನೇಕ ಪ್ರಕಾರವಾಗಿ ಹೇಳಿರುವುದನ್ನು ನೋಡಿದರೆ ಜಗತ್ತು ಮಿಥ್ಯೆ ಎಂದು ತಿಳಿದುಬರುತ್ತದೆ. ಜಗತ್ತು ಸತ್ಯವಾಗಿರುವ ಪಕ್ಷದಲ್ಲಿ ವೇದವು ಜಗದುತ್ಪತ್ತಿಯ ಕ್ರಮವನ್ನು ಅನೇಕ ಪ್ರಕಾರವಾಗಿ ಹೇಳುತ್ತಿರಲಿಲ್ಲ.

ಜಗದುತ್ಪತ್ತಿಯನ್ನು ಅನೇಕ ಪ್ರಕಾರವಾಗಿ ಹೇಳಿರುವುದರಿಂದ ಜಗತ್ತಿನ ಉತ್ಪತ್ತಿಯನ್ನು ಪ್ರತಿಪಾದನೆ ಮಾಡುವುದರಲ್ಲಿ ವೇದದ ತಾತ್ಪರ್ಯವಿಲ್ಲವಾದರೂ ಜಗನ್ನಿಷೇಧ ದ್ವಾರಾ ಅದ್ವೈತ ಬ್ರಹ್ಮದ ಬೋಧೆಗಾಗಿ ಮಿಥ್ಯಾ ಜಗತ್ತಿನ ಆರೋಪವನ್ನು ವೇದವು ಹೇಗೆ ಹೇಗೋ ಮಾಡಿದೆ. ವಿನೋದಕ್ಕಾಗಿ ಆಡಿಸಲು ಮಾಡಿದ ಮರದ ಆನೆಯ ಬಾಲ ಸೊಂಡಿಲಾದಿಗಳು ಡೊಂಕು ಡೊಂಕಾಗಿದ್ದರೂ ಅವನ್ನು ಸರಿಮಾಡಲು ಯಾರೂ ಪ್ರಯತ್ನವನ್ನು ಮಾಡದಂತೆ, ಪ್ರಪಂಚ ನಿಷೇಧದ ದ್ವಾರಾ ಅದ್ವೈತ ಬೋಧೆಗಾಗಿ ಹೇಳಿದ ಪ್ರಪಂಚದ ಆರೋಪದ ವಿಷಯದಲ್ಲಿ ವೇದವು ಉತ್ಪತ್ತಿ ಕ್ರಮವನ್ನು ಏಕ ರೂಪದಿಂದ ಪ್ರತಿಪಾದಿಸಲು ಪ್ರಯತ್ನ ಮಾಡುವುದಿಲ್ಲ

**ಜಗದುತ್ಪತ್ತಿಯಲ್ಲಿ ಏಕರೂಪತಾ ಪ್ರತಿಪಾದಕವಾದ ಭಾಷ್ಯಕಾರರ ಅಭಿಪ್ರಾಯ**

ಬ್ರಹ್ಮಸೂತ್ರಕ್ಕೆ ಭಾಷ್ಯ ಬರೆದ ಶ್ರೀ ಶಂಕರ ಭಗವತ್ಪಾದರು ಬ್ರಹ್ಮ ಸೂತ್ರದ ದ್ವಿತೀಯಾಧ್ಯಾಯದಲ್ಲಿ ಉತ್ಪತ್ತಿಯನ್ನು ಪ್ರತಿಪಾದಿಸುವ ಶ್ರುತಿ ವಚನಗಳ ವಿರೋಧವನ್ನು ದೂರೀಕರಿಸಿ, ತೈತ್ತರೀಯೋಪನಿಷತ್ತಿನ ಪ್ರಕಾರವಾಗಿ ಒಂದೇ ವಿಧದಿಂದ ಎಲ್ಲಾ ಉಪನಿಷತ್ತುಗಳ ಅಭಿಪ್ರಾಯವನ್ನು

ಕುರಿತು ಹೇಳಿದ್ದು ಮಂದ ಜಿಜ್ಞಾಸುಗಳಿಗೆ ಮಾತ್ರ ಮಂದ ಬುದ್ಧಿಯುಳ್ಳ ಜಿಜ್ಞಾಸುಗಳು ಉತ್ಪತ್ತಿ ವಾಕ್ಯಗಳ ಪೂರ್ವೋಕ್ತ ಅಭಿಪ್ರಾಯವನ್ನು ತಿಳಿಯದುದರಿಂದ ಉಪನಿಷತ್ತುಗಳಲ್ಲಿ ನಾನಾ ಪ್ರಕಾರವಾಗಿ ಜಗದುತ್ಪತ್ತಿಯನ್ನು ಹೇಳಿರುವುದನ್ನು ನೋಡಿ ಮನಸ್ಸಿನಲ್ಲಿ ಉಪನಿಷತ್ತುಗಳು ಪರಸ್ಪರ ವಿರೋಧವುಳ್ಳವುಗಳೆಂದು ಭ್ರಾಂತಿಪಡುತ್ತಾರೆ ಆ ಭ್ರಾಂತಿಯನ್ನು ಪರಿಹಾರ ಮಾಡುವುದಕ್ಕಾಗಿ ಸರ್ವೋಪನಿಷತ್ತುಗಳಲ್ಲಿ ಏಕರೂಪದಿಂದ ಜಗದುತ್ಪತ್ತಿಯನ್ನು ಪ್ರತಿಪಾದಿಸಿದೆ ಎಂದು ತಿಳಿಯಬೇಕು ಮತ್ತು ಬುದ್ಧಿ ಮಾಂದ್ಯಾದಿ ದೋಷದಿಂದ ಯಾವನಿಗೆ ಬ್ರಹ್ಮವಿಚಾರದಿಂದ ಯಥಾರ್ಥ ಜ್ಞಾನವಾಗುವುದಿಲ್ಲವೋ ಅವನು ಉತ್ಪತ್ತಿ ಕ್ರಮಕ್ಕಿಂತ ವಿಪರೀತ ಕ್ರಮದಿಂದ ಲಯಚಿಂತನವನ್ನು ಮಾಡಬೇಕೆಂಬ ಅಭಿಪ್ರಾಯದಿಂದ ಕ್ರಮದಿಂದ ಜಗದುತ್ಪತ್ತಿಯನ್ನು ಹೇಳಿದೆ. ಆ ಲಯಚಿಂತನದಿಂದ ಮಂದಬುದ್ಧಿಯುಳ್ಳವರಿಗೆ ಅದ್ವೈತ ಬ್ರಹ್ಮದಲ್ಲಿ ಸ್ಥಿತಿ ಉಂಟಾಗುತ್ತದೆ.

ಲಯಚಿಂತನದ ಪದ್ಧತಿಯನ್ನು ವಾರ್ತಿಕಕಾರರಾದ ಸುರೇಶ್ವರಾಚಾರ್ಯರು ಕ್ರಮ ಪದ್ಧತಿಯಿಂದ ಬೋಧಿಸಿರುತ್ತಾರೆ

ಪ್ರಶ್ನೆ : ವಾರ್ತಿಕಕಾರರೆಂದರೆ ಯಾರು ? ಅವರು ಲಯಚಿಂತನದ ಪದ್ಧತಿಯನ್ನು ಹೇಗೆ ಬೋಧಿಸುತ್ತಾರೆ ?

ಉತ್ತರ : ಶ್ರೀ ಶಂಕರ ಭಗವತ್ಪಾದರ ಮುಖ್ಯ ಶಿಷ್ಯರಾದ ಶ್ರೀ ಸುರೇಶ್ವರಾಚಾರ್ಯರಿಗೆ ವಾರ್ತಿಕಕಾರರೆನ್ನುತ್ತಾರೆ. ಅವರು ವಾರ್ತಿಕ ಗ್ರಂಥದಲ್ಲಿ ಲಯಚಿಂತನೆಯನ್ನು ಶಾಸ್ತ್ರೀಯವಾಗಿ ಬೋಧಿಸಿರುತ್ತಾರೆ ಅದರ ಕ್ರಮ ಕೆಳಗೆ ಕಂಡಂತೆ ಇದೆ

ಶ್ಲೋಕ – ಸಮಾಧಿಕಾಲಾತ್ ಪ್ರಾಗೇವಂ ವಿಚಿಂತ್ಯಾತಿ ಪ್ರಯತ್ನತಃ ।
ಸ್ಥೂಲ ಸೂಕ್ಷ್ಮ ಕ್ರಮಾತ್ ಸರ್ವಂ ಚಿದಾತ್ಮನಿ ವಿಲಾಪಯೇತ್ ॥

ಅರ್ಥ ಸಮಾಧಿಗಿಂತ ಮೊದಲು ಲಯಚಿಂತನ ಮಾಡುವಾಗ ಜಾಗರೂಕತೆಯಿಂದ ವರ್ತಿಸಬೇಕು ಲಯಚಿಂತನದ ಕ್ರಮವೇನೆಂದರೆ, ಸ್ಥೂಲ ಅಂದರೆ ಸ್ಥೂಲ ಕಾರ್ಯವಾದ ಜಗತ್ತನ್ನು ಅದಕ್ಕೆ ಸೂಕ್ಷ್ಮವಾದ ಕಾರಣ

ರೂಪದಲ್ಲಿ ಲಯ ಮಾಡುತ್ತ ಸಮಸ್ತಕ್ಕೂ ಕಾರಣವಾದ ಚಿದಾತ್ಮನಲ್ಲಿ ಸೂಕ್ಷ್ಮ ಪ್ರಪಂಚವನ್ನೂ ಸಹ ಲಯ ಮಾಡಬೇಕು.

ಶ್ಲೋಕ – ಅಕಾರಂ ಪುರುಷಂ ವಿಶ್ವಮುಕಾರೇ ಪ್ರವಿಲಾಪಯೇತ್ ।
ಉಕಾರಂ ತೈಜಸಂ ಸೂಕ್ಷ್ಮಂ ಮಕಾರೆ ಪ್ರವಿಲಾಪಯೇತ್ ।
ಮಕಾರಂ ಕಾರಣಂ ಪ್ರಾಜ್ಞಂ ಚಿದಾತ್ಮನಿ ವಿಲಾಪಯೇತ್ ।
ಚಿದಾತ್ಮಾಹಂ ನಿತ್ಯ ಶುದ್ಧ ಬುದ್ಧ ಮುಕ್ತ ಸದದ್ವಯಃ ॥

| ಜಗತ್ತು | ಅವಸ್ಥಾ | ಅಭಿಮಾನ | ಅಕ್ಷರ |
|---|---|---|---|
| ಪಂಚೀಕೃತ ಭೂತ | ಜಾಗ್ರತ್ತು | ವಿಶ್ವ | ಅ |
| ಅಪಂಚೀಕೃತ ಭೂತ | ಸ್ವಪ್ನ | ತೈಜಸ | ಉ |
| ಅವ್ಯಕ್ತ | ಸುಷುಪ್ತಿ | ಪ್ರಾಜ್ಞ | ಮ್ |

ಅರ್ಥ : ಸಮಸ್ತ ಕಾರ್ಯಸಹಿತ ಪಂಚೀಭೂತಗಳನ್ನು, ಜಾಗ್ರದವಸ್ಥೆಯನ್ನು ಮತ್ತು ಆ ಅವಸ್ಥೆಯ ಅಭಿಮಾನಿಯಾದ ವಿಶ್ವನನ್ನು– ಈ ಎಲ್ಲವನ್ನೂ ಪ್ರಣವದಲ್ಲಿಯ "ಅ"ಕಾರವೆಂದು ಭಾವಿಸಬೇಕು ಮತ್ತು ಇದರಂತೆ ಅಪಂಚೀಕೃತ ಭೂತಗಳನ್ನು, ಸ್ವಪ್ನಾವಸ್ಥೆಯನ್ನು, ಆ ಸ್ವಪ್ನಾವಸ್ಥೆಯ ಅಭಿಮಾನಿಯಾದ ತೈಜಸ – ಈ ಎಲ್ಲವನ್ನು ಪ್ರಣವದಲ್ಲಿಯ "ಉ"ಕಾರವೆಂದು ಭಾವಿಸಬೇಕು ಹಾಗೂ ತ್ರಿಗುಣಾತ್ಮಕವಾದ ಅವ್ಯಕ್ತವನ್ನು, ಸುಷುಪ್ತಿ ಅವಸ್ಥೆಯನ್ನು, ಆ ಸುಷುಪ್ತಿ ಅವಸ್ಥೆಯ ಅಭಿಮಾನಿಯಾದ ಪ್ರಾಜ್ಞ – ಈ ಎಲ್ಲವುಗಳನ್ನು ಪ್ರಣವದಲ್ಲಿಯ "ಮ"ಕಾರವೆಂದು ಭಾವಿಸಬೇಕು ನಂತರ "ಅ"ಕಾರದ ಪೂರ್ಣ ಸ್ವರೂಪವನ್ನು "ಉ"ಕಾರ

ವೆಂದೂ, "ಉ"ಕಾರದ ಸಮಸ್ತ ಪರಿವಾರವನ್ನು "ಮ" ಕಾರವೆಂದೂ ಭಾವಿಸಬೇಕು ಮತ್ತು "ಮ"ಕಾರದ ಸಮಸ್ತ ವಸ್ತುವನ್ನು ತ್ರಿಗುಣಾತೀತವಾದ ಶುದ್ಧ ಬ್ರಹ್ಮದಲ್ಲಿ ಲಯ ಮಾಡಬೇಕು ಇದೇ ವಿಷಯವನ್ನು ವಿಷ್ಣುಪುರಾಣದಲ್ಲಿ ಹೀಗೆ ಹೇಳಿದೆ.

ಶ್ಲೋಕ – ಜಗತ್ ಪ್ರತಿಷ್ಠಾ ದೇವರ್ಷೆ! ಪೃಥ್ವಿವ್ಯಾಪ್ಸು ಪ್ರಲೀಯತೇ ।
ಆಪಸ್ತೇಜಸಿಲೀಯಂತೆ ತೇಜೊ ವಾಯೌ ವಿಲೀಯತೇ ॥
ವಾಯುಶ್ಚ ಲೀಯತೇ ವ್ಯೋಮ್ನಿ ತಚ್ಚಾವ್ಯಕ್ತೆ ಪ್ರಲೀಯತೇ।
ಅವ್ಯಕ್ತಂ ಪುರುಷೇ ಬ್ರಹ್ಮನ್ ನಿಷ್ಕಲೇ ಸಂಪ್ರಲೀಯತೆ ॥
ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾಗತಿಃ ॥

ಅರ್ಥ ಹೇ ದೇವರ್ಷಿ! ಪೃಥ್ವಿಯು ನೀರಿನಲ್ಲಿ, ಜಲವು ತೇಜಸ್ಸಿನಲ್ಲಿ, ತೇಜಸ್ಸು ವಾಯುವಿನಲ್ಲಿ, ವಾಯುವು ಆಕಾಶದಲ್ಲಿ, ಆಕಾಶವು ಅವ್ಯಕ್ತದಲ್ಲಿ, ಅವ್ಯಕ್ತವು ಪುರುಷನಲ್ಲಿ ಲಯವಾಗುತ್ತವೆ ಪುರುಷನೇ ಪರಾಕಾಷ್ಠ. ಅವನೇ ಪರಮ ಗತಿ.

ಮೇಲೆ ಹೇಳಿದ ಲಯಚಿಂತನವು ಸ್ಥಿರವಾದ ಮೇಲೆ ಸವಿಕಲ್ಪ ನಿರ್ವಿಕಲ್ಪ ಸಮಾಧಿಗಳು ಪ್ರಾಪ್ತಿಯಾಗುತ್ತವೆ.

ಶ್ಲೋಕ – ಪರಮಾನಂದ ಸಂದೋಹ ವಾಸುದೇವೋಽಹ ಮೋಮಿತಿ ।
ಜ್ಞಾತ್ವಾ ವಿವೇಚಕಂ ಚಿತಂ ತತ್ ಸಾಕ್ಷಿಣಿ ವಿಲಾಪಯೇತ್॥

ಅರ್ಥ. "ನಾನು ಪರಮಾನಂದ ಘನಸ್ವರೂಪನಾದ, ವಾಸುದೇವನಾದ 'ಓಂ' ಆಗಿದ್ದೇನೆ" ಈ ಪ್ರಕಾರ ಮಾಡುವ ನಿರಂತರ ಚಿಂತನ ಪ್ರವಾಹದಿಂದ ಸವಿಕಲ್ಪ ಸಮಾಧಿಯು ಸಿದ್ಧಿಯಾದ ಮೇಲೆ ಧ್ಯಾನ ಮಾಡುವವನು ಮಾಡುವ ಧ್ಯಾನ ಮತ್ತು ಧ್ಯೇಯಸ್ವರೂಪ ತ್ರಿಪುಟಿಗಳನ್ನು ಚಿದಾತ್ಮನಲ್ಲಿ ವಿಲೀನ ಮಾಡಿದರೆ ನಿರ್ವಿಕಲ್ಪ ಸಮಾಧಿಯುಂಟಾಗುತ್ತದೆ.

ಶ್ಲೋಕ – ಚಿದಾತ್ಮನಿ ವಿಲೀನಂ ಚೇತ್ ತಚ್ಚಿತ್ತಂ ನೈವ ಚಾಲಯೇತ್ ।
ಪೂರ್ಣ ಬೋಧಾತ್ಮನಾಽಽಸೀತ ಪೂರ್ಣಾಚಲ ಸಮುದ್ರವತ್ ॥

ಅರ್ಥ : ಚಿತ್ತವು ಸರ್ವದಾ ಪೂರ್ಣ ಆತ್ಮನಲ್ಲಿ ಲಯವಾದರೆ ನಂತರ ಆ ಚಿತ್ತವನ್ನು ಆತ್ಮನಿಂದ ಬೇರೆಯಾಗುವುದಕ್ಕೆ ಅವಕಾಶವನ್ನು ಕೊಡಬಾರದು. ಅಚಲ ಪ್ರತಿಷ್ಟವಾದ ಸಮುದ್ರವು ತನ್ನ ಗಂಭೀರಾವಸ್ಥೆಯಲ್ಲಿ ಇದ್ದಂತೆ ಚಿತ್ತವೂ ಸಹ ಪೂರ್ಣ ಭೋಗಸ್ವರೂಪನಾದ ಆತ್ಮನಲ್ಲಿ ಸ್ಥಿತವಾಗಿರಬೇಕು.

ಶ್ಲೋಕ – ಏವಂ ಸಮಾಹಿತೋ ಯೋಗೀ ಶ್ರದ್ಧಾಭಕ್ತಿ ಸಮನ್ವಿತಃ ।
ಜಿತೇಂದ್ರಿಯೊ ಜಿತಕ್ರೋಧಃ ಪಶ್ಯೇದಾತ್ಮಾನಮದ್ವಯಮ್ ॥

ಅರ್ಥ ಜಿತೇಂದ್ರಿಯನೂ, ಜಿತಕ್ರೋಧನೂ, ಶ್ರದ್ಧಾಭಕ್ತಿಯಿಂದ ಕೂಡಿದವನೂ ಆದ ಯೋಗಿಯು ನಿರ್ವಿಕಲ್ಪ ಸಮಾಧಿಯನ್ನು ಪಡೆದುಕೊಂಡು ತನ್ನ ಸ್ವರೂಪವನ್ನು ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾನೆ.

ಇದೇ ಗ್ರಂಥದಲ್ಲಿ ಮುಂದೆ ೧೬೭ನೇ ಪದ್ಯದಲ್ಲಿ ಲಯಚಿಂತನದ ರೀತಿಯು ಪ್ರತಿಪಾದಿಸಲ್ಪಟ್ಟಿದೆ

ಇಲ್ಲಿಯವರೆಗೂ ಹೇಳಿದ ವಾರ್ತಿಕಕಾರರ ಲಯಚಿಂತನೆಯು ಮಂದ ಜಿಜ್ಞಾಸುಗಳಿಗಾಗಿ ಹೇಳಿದ್ದು. ಈ ಗ್ರಂಥವಾದರೋ ಮುಖ್ಯವಾಗಿ ಉತ್ತಮ ಜಿಜ್ಞಾಸುಗಳಿಗಾಗಿ ರಚಿಸಲ್ಪಟ್ಟಿದೆ. ಆದುದರಿಂದ ಇಲ್ಲಿ ಉತ್ಪತ್ತಿ ಲಯದ ರೀತಿಯನ್ನು ವಿಶೇಷವಾಗಿ ಬರೆಯಲಿಲ್ಲ. ಆ ಉತ್ಪತ್ತಿ ಲಯ ಪ್ರಕಾರವಾದರೋ ಸಾಗರದಂತೆ ಅನಂತವಾಗಿದೆ ಅದರಲ್ಲಿ ಲೇಶಮಾತ್ರವನ್ನು ಇಲ್ಲಿ ನಿರೂಪಿಸಿದೆ.

ಪ್ರಶ್ನೆ : ಉತ್ತಮ ಜಿಜ್ಞಾಸು ಎಂದರೆ ಯಾರು ?

ಉತ್ತರ : ದೃಷ್ಟಿಸೃಷ್ಟಿ ವಾದದ ರೀತಿಯಂತೆ ಪರಬ್ರಹ್ಮದಲ್ಲಿ ಪ್ರಪಂಚವನ್ನು ಆರೋಪ ಮಾಡಿ ಪುನಃ ಅಪವಾದ ಪೂರ್ವಕವಾಗಿ ಪಂಚಮ ಭೂಮಿಕೆಯಲ್ಲಿ ಆರೂಢನಾದ ಉತ್ತಮ ಸಂಸ್ಕಾರವುಳ್ಳವನು ಉತ್ತಮ ಜಿಜ್ಞಾಸು.

ಶುದ್ಧಬ್ರಹ್ಮವು ಅಸಂಗ, ಅಕ್ರಿಯವಾದುದರಿಂದ ಜಗದುತ್ಪತ್ತಿಯು ಸಂಭವಿಸಲಾರದು ಮಾಯಾ ವಿಶಿಷ್ಟನಾದ ಈಶ್ವರನಿಂದಲೇ ಜಗದುತ್ಪತ್ತಿಯನ್ನು ಹೇಳಬೇಕು.

ಇನ್ನು ಮುಂದೆ ಆ ಮಾಯೆಯ ಮತ್ತು ಈಶ್ವರನ ಸ್ವರೂಪವು ಪ್ರತಿಪಾದಿಸಲ್ಪಡುತ್ತದೆ

ವಿಶೇಷ ವಿಚಾರ : ಮಾಯಾ ವಿಶಿಷ್ಟನಾದ ಈಶ್ವರನಿಂದ ಜಗದುತ್ಪತ್ತಿಯೆಂದು ಹೇಳಿದ ವಿಷಯದಲ್ಲಿ ಶಂಕಾ – ಸಮಾಧಾನಗಳು ಇರುತ್ತವೆ ಹೇಗೆಂದರೆ, ಜಗತ್ತಿನ ವಿವರ್ತೋಪಾದಾನದ ಅಧಿಷ್ಠಾನವು ಮಾಯೋಪಾಧಿಕ ಚೈತನ್ಯವಾಗಿದೆ ಮಾಯಾ ವಿಶಿಷ್ಟ ಚೈತನ್ಯವಲ್ಲ ಇದು ಸಿದ್ಧಾಂತ. ಆದರೂ ಮಾಯಾ ವಿಶಿಷ್ಟ ಚೇತನವನ್ನು ವಿವರ್ತೋಪಾದಾನವೆಂದು ಅಂಗೀಕರಿಸಿ, ಆದರಿಂದ ಜಗದುತ್ಪತ್ತಿಯೆಂದು ಹೇಳಿದ್ದು ಅವಿವೇಕಿ ಪುರುಷರ ದೃಷ್ಟಿಗನುಸಾರವಾಗಿ ಮಾತ್ರ. ವಿವೇಕಿ ಪುರುಷರ ದೃಷ್ಟಿಯಿಂದಲಾದರೋ ಜಗತ್ತಿನ ಪರಿಣಾಮಿ ಉಪಾದಾನತ್ವವು, ಇಲ್ಲವೇ ವಿವರ್ತ ಉಪಾದಾನತ್ವವು ಮಾಯಾ ವಿಶಿಷ್ಟ ಚೇತನದಲ್ಲಿ ಸಂಭವಿಸುವುದಿಲ್ಲ ನೆನಪಿಟ್ಟುಕೊಳ್ಳುವ ವಿಷಯವೇನೆಂದರೆ, ಜಗತ್ತಿನ ಪರಿಣಾಮಿ ಉಪಾದಾನತ್ವವು ಕೇವಲ ಮಾಯೆಯಲ್ಲಿಯೂ ಮತ್ತು ವಿವರ್ತೋಪಾದಾನತ್ವವು ಮಾಯ ಉಪಹಿತ ಚೇತನದಲ್ಲಿಯೂ ಸಂಭವಿಸುತ್ತದೆ ಆದರೂ ಅವಿವೇಕಿ ಜನಗಳಿಗೆ ಈ ಎರಡೂ ಧರ್ಮಗಳು ಮಾಯಾ ವಿಶಿಷ್ಟ ಚೇತನದಲ್ಲಿ ಭ್ರಾಂತಿಯಿಂದ ತೋರುತ್ತವೆ. ಗ್ರಂಥಕರ್ತರಾದ ಶ್ರೀ ನಿಶ್ಚಲದಾಸರು ಇಲ್ಲಿ ಅವಿವೇಕಿ ಜನರ ದೃಷ್ಟಿಯನ್ನು ಅನುವಾದ ಮಾತ್ರ ಮಾಡಿರುವರೆಂದು ತಿಳಿಯಬೇಕು.

ಈಗ ಮಾಯಾ ಸ್ವರೂಪವು ನಿರೂಪಿಸಲ್ಪಡುತ್ತದೆ.

ಕವಿತಾ – ಜೀವ ಈಶ ಭೇದ ಹೀನ ಚೇತನ ಸ್ವರೂಪ ಮಾಹಿ ।
ಮಾಯಾ ಸೊ ಅನಾದಿ ಏಕ ಸಾಂತ ತಾಹಿ ಮಾನಿಯೆ ॥
ಸತ ಔ ಅಸತತೈ ವಿಲಚ್ಛನ ಸ್ವರೂಪ ತಾಕೊ ।
ತಾಹಿ ಕೂಂ ಅವಿದ್ಯಾ ಔ ಅಜ್ಞಾನಹು ಬಖಾನಿಯೆ ॥
ಚೇತನ ಸಾಮಾನ್ಯ ನ ವಿರೋಧಿ ತಾಕೊ ಸಾಧಕ ಹೈ ।
ವೃತ್ತಿಮೈ ಆರೂಢ ವಾ ವಿರೋಧಿ ವೃತ್ತಿ ಜಾನೀಯೆ ॥

ಮಾಯಾ ಮೈ ಆಭಾಸ ಅಧಿಷ್ಠಾನ ಅರು ಮಾಯಾಮಿಲ ।
ಈಸ ಸರವಜ್ಞ ಜಗ–ಹೇತು ಮಹಚಾನೀಯೆ ॥೧೫೪॥

ಅರ್ಥ ಮಾಯೆಯು ಜೀವೇಶ್ವರ ಭೇದರಹಿತವಾದ ಶುದ್ಧ ಚೇತನವನ್ನು ಆಶ್ರಯಿಸಿಕೊಂಡಿದೆ. ಆ ಮಾಯೆಯು ಅನಾದಿ ಎಂದರೆ ಉತ್ಪತ್ತಿ ಇಲ್ಲದ್ದು. ಒಂದು ವೇಳೆ ಆ ಮಾಯೆಗೆ ಉತ್ಪತ್ತಿ ಉಳ್ಳದ್ದೆಂದು ಹೇಳಿದರೆ ಅದನ್ನು ಉತ್ಪತ್ತಿ ಮಾಡುವವರು ಯಾರು ? ಪ್ರಪಂಚದಿಂದ ಮಾಯೆ ಉತ್ಪತ್ತಿ ಎಂದು ಹೇಳಿದರೆ ಪುತ್ರನಿಂದ ತಂದೆಯ ಉತ್ಪತ್ತಿಯೆಂದು ಹೇಳಿದಂತೆ ಅಸಮಂಜಸ ವಾಗುತ್ತದೆ ಏಕೆಂದರೆ, ಪುತ್ರನು ತಂದೆಯ ಕಾರ್ಯವಾಗಿರುವಂತೆ ಪ್ರಪಂಚವೂ ಸಹ ಮಾಯಾ ಕಾರ್ಯ ಆದುದರಿಂದ ಪ್ರಪಂಚದಿಂದ ಮಾಯೆಯು ಉತ್ಪತ್ತಿಯಾಗಿರುವುದೆಂದು ಹೇಳಕೂಡದು. ಜಡವಾದ ಪ್ರಪಂಚ ದಿಂದ ಮಾಯೆಯು ಉತ್ಪತ್ತಿಯಾಗಿಲ್ಲ ಚೇತನದಿಂದ ಉತ್ಪತ್ತಿಯಾಗಿರುವು ದೆಂದರೆ ಆ ಚೇತನವು ಮೂರು ವಿಧ. ಅವುಗಳಲ್ಲಿ ಜೀವಭಾವ, ಈಶ್ವರ ಭಾವವಾದರೋ ಮಾಯಾ ಕಾರ್ಯವಾದುದರಿಂದ ಮಾಯೆಯ ಸಿದ್ಧಿ ಇಲ್ಲದೆ ಜೀವೇಶ್ವರರ ಸ್ವರೂಪವು ಸಿದ್ಧವಾಗಲಾರದು. ಆದ್ದರಿಂದ ಜೀವೇಶ್ವರರಿಂದ ಮಾಯೆಯು ಉತ್ಪತ್ತಿಯಾಗಿರುವುದೆಂದು ಹೇಳಕೂಡದು. ಇನ್ನು ಉಳಿದ ಶುದ್ಧ ಚೈತನ್ಯವಾದರೋ ನಿರ್ವಿಕಾರವಾದುದರಿಂದ ಅದರಿಂದ ಮಾಯೋತ್ಪತ್ತಿ ಯನ್ನು ಅಂಗೀಕರಿಸಿದರೆ ಚೈತನ್ಯವು ವಿಕಾರಿಯಾಗುತ್ತದೆ ಅಲ್ಲದೆ ಶುದ್ಧ ಚೈತನ್ಯದಿಂದ ಮಾಯೆ ಉತ್ಪತ್ತಿಯನ್ನು ಅಂಗೀಕರಿಸಿದರೆ ಆ ಮಾಯೆಯು ಮೋಕ್ಷ ದೆಸೆಯಲ್ಲಿ ಪುನರುತ್ಪತ್ತಿಯಾಗಿ ಅದರಿಂದ ಮೋಕ್ಷವು ಅಸಿದ್ಧವಾಗಿ ಮೋಕ್ಷ ಸಾಧನಗಳೂ ಸಹ ನಿಷ್ಫಲವಾಗುತ್ತವೆ. ಈ ರೀತಿ ಮಾಯೆಯು ಉತ್ಪತ್ತಿ ರಹಿತವಾದುದರಿಂದ ಅನಾದಿ ಎನಿಸಿಕೊಳ್ಳುತ್ತದೆ ಮತ್ತು ಆ ಮಾಯೆಯು ಏಕ ಅಂದರೆ ಎರಡನೆ ಮಾಯೆ ಇಲ್ಲದ್ದು, ಮತ್ತು ಆ ಮಾಯೆಯು ಸಾಂತ ಅಂದರೆ ಜ್ಞಾನದಿಂದ ಅಂತವಾಗುತ್ತದೆ, ಮತ್ತು ಆ ಮಾಯೆಯು ಸದಸದ್ವಿಲಕ್ಷಣ, ಅಂದರೆ ತ್ರಿಕಾಲದಲ್ಲಿ ಬಾಧೆಯಿಲ್ಲದ ಪದಾರ್ಥಕ್ಕೆ ಸತ್ತು ಎನ್ನುತ್ತಾರೆ ಇಂಥಾದ್ದು ಚೇತನ. ಮಾಯೆಯು ಜ್ಞಾನದಿಂದ ಬಾಧೆಯಾಗು

ವುದರಿಂದ ಸತ್ತಿಗಿಂತ ವಿಲಕ್ಷಣವಾಗಿದೆ ಇನ್ನು ತ್ರಿಕಾಲದಲ್ಲಿಯೂ ಪ್ರತೀತಿಯಾಗದ ಶಶಶೃಂಗ ವಂಧ್ಯಾಪುತ್ರಾದಿಗಳಿಗೆ ಅಸತ್ತೆನ್ನುತ್ತಾರೆ ಬ್ರಹ್ಮಜ್ಞಾನಕ್ಕಿಂತ ಮೊದಲು ಕಾರ್ಯಸಹಿತ ಮಾಯೆಯು ಪ್ರತೀತಿಯಾಗುವುದರಿಂದ ಅದು ಅಸತ್ತಿಗಿಂತ ವಿಲಕ್ಷಣ ಅದು ಹೇಗೆಂದರೆ, ಜಾಗ್ರತ್ತಿನಲ್ಲಿ "ನಾನು ಅಜ್ಞಾನಿ, ಬ್ರಹ್ಮವನ್ನು ತಿಳಿಯಲಾರೆನು" ಎಂಬ ರೀತಿಯಿಂದ ಮಾಯೆಯು ಪ್ರತೀತವಾಗುತ್ತದೆ. ಸ್ವಪ್ನದಲ್ಲಿ ಕಂಡ ನಾನಾ ಪದಾರ್ಥಗಳು ಪ್ರತೀತಿಯಾಗುತ್ತವೆಯಲ್ಲವೆ ? ಅವುಗಳಿಗೆ ಉಪಾದಾನ ಕಾರಣವು ಮಾಯೆ. ಮತ್ತು ಮಲಗಿ ಎದ್ದಮೇಲೆ ಏನೂ ತಿಳಿಯಲಿಲ್ಲ ಎಂಬ ಸ್ಮೃತಿ ಉಂಟಾಗುತ್ತದೆ. ಆ ಸ್ಮೃತಿಯ ವಿಷಯವಾದ ಮಾಯೆಯು ಸುಷುಪ್ತಿಯಲ್ಲಿ ಇರುತ್ತದೆ. ಈ ಪ್ರಕಾರವಾಗಿ ಮೂರೂ ಸ್ಥಳಗಳಲ್ಲಿಯೂ ಮಾಯೆಯು ಪ್ರತೀತಿಯಾದುದರಿಂದ ಮಾಯೆಯು ಅಸತ್ತಿಗಿಂತ ವಿಲಕ್ಷಣವೆಂದು ತಿಳಿಯಬೇಕು.

ಸದಸದ್ವಿಲಕ್ಷಣವಾದ ಮಾಯೆಯ ಕಾರ್ಯವೂ ಸದಸದ್ವಿಲಕ್ಷಣವಾಗಿದೆ. ಈ ಸದಸದ್ವಿಲಕ್ಷಣ ಪದಾರ್ಥವನ್ನೇ ಅದ್ವೈತ ಮತದಲ್ಲಿ ಮಿಥ್ಯೆಯೆಂತಲೂ, ಅನಿರ್ವಚನೀಯವೆಂತಲೂ ಅನ್ನುತ್ತಾರೆ ಈ ಕಾರಣದಿಂದಲೇ ಮಾಯೆಯಿಂದಲೂ, ಮಾಯೆಯ ಕಾರ್ಯದಿಂದಲೂ ದ್ವೈತ ಸಿದ್ಧಿಯಾಗಲಾರದು. ಚೇತನವು ಸದ್ರೂಪವಾದಂತೆ, ಮಾಯೆಯೂ ಮಾಯಾ ಕಾರ್ಯವೂ ಸದ್ರೂಪವಾಗಿದ್ದರೆ ದ್ವೈತ ಸಿದ್ಧಿಯಾಗುತ್ತಿತ್ತು ಮಿಥ್ಯಾ ಸ್ವಪ್ನ ಪದಾರ್ಥಗಳು, ಶುಕ್ತಿ ರಜತಾದಿಗಳು ಮಿಥ್ಯೆಯಾಗಿರುವುದರಿಂದ ಅವುಗಳಿಂದ ದ್ವೈತ ಸಿದ್ಧಿಯಾಗದಂತೆ ಮಿಥ್ಯೆಯಾದ ಮಾಯಾ ಮತ್ತು ತತ್ಕಾರ್ಯದಿಂದ ದ್ವೈತ ಸಿದ್ಧಿಯಾಗಲಾರದು

## ಅಜ್ಞಾನದ ಸ್ವಾಶ್ರಯ ಸ್ವವಿಷಯ

ಮೇಲೆ ಹೇಳಿದ ಮಾಯೆಯು ಜೀವೇಶ್ವರ ವಿಭಾಗವಿಲ್ಲದ ಶುದ್ಧ ಬ್ರಹ್ಮವನ್ನು ಆಶ್ರಯಿಸಿ, ಶುದ್ಧ ಬ್ರಹ್ಮವನ್ನೇ ಆಚ್ಛಾದಿಸುತ್ತದೆ ಗೃಹವನ್ನು ಆಶ್ರಯಿಸಿದ ಅಂಧಕಾರವು ಗೃಹವನ್ನೇ ಆಚ್ಛಾದಿಸುವಂತೆ ಚೇತನವನ್ನು ಆಶ್ರಯಿಸಿದ ಮಾಯೆಯು ಚೇತನವನ್ನೇ ಆಚ್ಛಾದಿಸುತ್ತದೆ. ಈ ಪಕ್ಷಕ್ಕೆ ಸ್ವಾಶ್ರಯ ಸ್ವವಿಷಯ ಪಕ್ಷವೆನ್ನುತ್ತಾರೆ.

ಪ್ರಶ್ನೆ ಸ್ವಾಶ್ರಯ, ಸ್ವವಿಷಯವೆಂದರೇನು ?

ಉತ್ತರ ಸ್ವಾ ಎಂದರೆ ಶುದ್ಧ ಬ್ರಹ್ಮ, ಅದೇ ಆಶ್ರಯ. ಮತ್ತು ಸ್ವ ಎಂದರೆ ಶುದ್ಧ ಬ್ರಹ್ಮ, ಅದೇ ವಿಷಯ ಇದೇ ಸ್ವಾಶ್ರಯ ಸ್ವವಿಷಯ ಪಕ್ಷ ಸಂಕ್ಷೇಪ ಶಾರೀರಕ, ವಿವರಣ ವೇದಾಂತ ಮುಕ್ತಾವಳಿ, ಅದ್ವೈತ ಸಿದ್ಧಿ, ಅದ್ವೈತದೀಪಿಕ ಇತ್ಯಾದಿ ಈ ಗ್ರಂಥಕಾರರಿಂದ ಸ್ವಾಶ್ರಯ ಸ್ವವಿಷಯ ಪಕ್ಷವೇ ಅಂಗೀಕರಿಸಲ್ಪಟ್ಟಿದೆ.

## ವಾಚಸ್ಪತಿ ಮಿಶ್ರರ ಮತ

ಈ ಮತದಲ್ಲಿ ಅಜ್ಞಾನವು ಜೀವನ ಆಶ್ರಯದಲ್ಲಿದ್ದು ಬ್ರಹ್ಮವನ್ನು ವಿಷಯೀಕರಿಸುತ್ತದೆ ಹೇಗೆಂದರೆ, "ನಾನು ಅಜ್ಞಾನಿ, ಬ್ರಹ್ಮವನ್ನು ತಿಳಿಯು ವುದಿಲ್ಲ." ಈ ಪ್ರತೀತಿಯಿಂದ ತಿಳಿಯಬರುವುದೇನೆಂದರೆ, 'ನಾನು' ಎಂಬ ಶಬ್ದಕ್ಕೆ ಜೀವನೆಂದರ್ಥ, 'ಅಜ್ಞಾನಿ' ಎಂದು ಹೇಳುವುದರಿಂದ ಜೀವನು ಅಜ್ಞಾನಕ್ಕೆ ಆಶ್ರಯನೆಂದು ತಿಳಿದುಬರುತ್ತದೆ ಮತ್ತು "ಬ್ರಹ್ಮವನ್ನು ತಿಳಿಯುವುದಿಲ್ಲ'' ಎಂದು ಹೇಳುವುದರಿಂದ ಅಜ್ಞಾನಕ್ಕೆ ಬ್ರಹ್ಮವು ವಿಷಯ ವೆಂದು ತಿಳಿದುಬರುತ್ತದೆ ಈ ರೀತಿಯಾಗಿ ಅಜ್ಞಾನವು ಜೀವನ ಆಶ್ರಯ ದಲ್ಲಿದ್ದು, ಬ್ರಹ್ಮವನ್ನು ವಿಷಯೀಕರಿಸುತ್ತದೆಂದು ಹೇಳಬೇಕಾಗುತ್ತದೆ.

ಈ ಅಜ್ಞಾನವು ಏಕವಲ್ಲ, ಅನಂತ ಅಜ್ಞಾನವು ಒಂದೇ ಎಂದು ಅಂಗೀಕರಿಸಿದ ಪಕ್ಷದಲ್ಲಿ, ಒಬ್ಬ ಜೀವನ ಸ್ವರೂಪ ಜ್ಞಾನದಿಂದ ಆ ಒಂದಾದ ಅಜ್ಞಾನವು ನಿವೃತ್ತಿಯಾದ ಮೇಲೆ ಇತರ ಜೀವರುಗಳಿಗೆ ಅಜ್ಞಾನವಾಗಲಿ, ತತ್ಕಾರ್ಯವಾದ ಸಂಸಾರವಾಗಲಿ ಪ್ರತೀತಿಯಾಗಕೂಡದು ಮತ್ತು ಈವರೆಗೆ ಯಾರಿಗೂ ಜ್ಞಾನವು ಆಗಿಲ್ಲವೆಂಬ ಪಕ್ಷದಲ್ಲಿ ಮುಂದೆಯೂ ಯಾರಿಗೂ ಜ್ಞಾನವುಂಟಾಗಲಾರದೆಂದು ಹೇಳಬೇಕಾಗುತ್ತದೆ. ಹೀಗೆ ಹೇಳುವುದರಿಂದ ಜ್ಞಾನ ಸಾಧನಗಳಾದ ಶ್ರವಣಾದಿಗಳು ನಿಷ್ಫಲವಾಗುತ್ತವೆ. ಆದುದರಿಂದ ಅನಂತ ಜೀವರುಗಳಿಗೆ ಆಶ್ರಿತವಾದ ಅಜ್ಞಾನಗಳೂ ಅನಂತವೆಂದು ಒಪ್ಪಿಕೊಳ್ಳ ಬೇಕು. ಮತ್ತು ಅನಂತ ಜೀವರುಗಳ ಅನಂತ ಅಜ್ಞಾನಗಳಿಂದ ಕಲ್ಪಿತರಾದ ಈಶ್ವರರುಗಳು ಅನಂತರೆಂದೇ ಹೇಳಬೇಕು. ಹಾಗೂ ಬ್ರಹ್ಮಾಂಡಗಳೂ

ಅನಂತಗಳು ಯಾವ ಜೀವನಿಗೆ ಜ್ಞಾನವಾಗುವುದೋ ಅವನ ಅಜ್ಞಾನ. ಈಶ್ವರ, ಬ್ರಹ್ಮಾಂಡ ಇವುಗಳೆಲ್ಲವೂ ನಿವೃತ್ತಿಯಾಗಿ ಹೋಗುತ್ತವೆ ಯಾವನಿಗೆ ಜ್ಞಾನವಾಗಿಲ್ಲವೋ ಅವನಿಗೆ ಬಂಧವು ತಪ್ಪಿದ್ದಲ್ಲ ಇದು ವಾಚಸ್ಪತಿ ಮತ. ಈ ಮತವು ಸಮೀಚೀನವಲ್ಲವೆಂಬದು ಮುಂದಿನ ನಿರೂಪಣೆಯಿಂದ ತಿಳಿದುಬರುತ್ತದೆ.

"ಈಶ್ವರನು ಜೀವನ ಅಜ್ಞಾನದಿಂದ ಕಲ್ಪಿತನು" ಎಂದು ಹೇಳುವುದು ಶ್ರುತಿ, ಸ್ಮೃತಿ, ಪುರಾಣಗಳಿಗೆ ವಿರುದ್ಧವಾಗಿದೆ ಇಷ್ಟೇ ಅಲ್ಲ, ಈಶ್ವರರು ಅನಂತರು, ಪ್ರತ್ಯೇಕ ಜೀವನಿಗೆ ಬೇರೆ ಬೇರೆ ಸೃಷ್ಟಿಯೆನ್ನುವುದೂ ನಹ ಅತ್ಯಂತ ವಿರುದ್ಧ. ಈ ರೀತಿಯಂತೆ ನಾನಾ ಅಜ್ಞಾನವನ್ನು ಅಂಗೀಕರಿಸಿ ಈಶ್ವರನನ್ನು, ಸೃಷ್ಟಿಯನ್ನು ಒಂದೇ ಎಂದು ಅಂಗೀಕರಿಸುವುದು ಘಟಿಸುವುದಿಲ್ಲ. ಏಕೆಂದರೆ ಜೀವ, ಈಶ್ವರ, ಪ್ರಪಂಚ ಇವೆಲ್ಲ ಅಜ್ಞಾನ ಕಲ್ಪಿತಗಳು ಅನಂತ ಅಜ್ಞಾನಗಳನ್ನು ಅಂಗೀಕರಿಸುವುದರಿಂದ ಒಬ್ಬೊಬ್ಬ ಜೀವನಿಗೆ ಒಂದೊಂದು ಅಜ್ಞಾನ. ಆ ಅಜ್ಞಾನದಿಂದ ಕಲ್ಪಿತವಾದ ಈಶ್ವರ, ಪ್ರಪಂಚಗಳು ಅನಂತವಾಗಿಯೇ ಇರಬೇಕು ಆಗ ಒಬ್ಬೊಬ್ಬ ಜೀವನಿಗೆ ಒಂದೊಂದು ಪ್ರತ್ಯೇಕವಾದ ಪ್ರಪಂಚವೇ ಕಾಣಬೇಕು. ಹಾಗೆ ಕಾಣಿಸುವುದಿಲ್ಲ ಎಲ್ಲಾ ಜೀವರಿಗೂ ಒಂದೇ ವಿಧ ಪ್ರಪಂಚ ಕಾಣಿಸುತ್ತದೆ ವಾಚಸ್ಪತಿಯು ಅನಂತ ಈಶ್ವರರನ್ನೂ ಅನಂತ ಸೃಷ್ಟಿಗಳನ್ನೂ ಅಂಗೀಕರಿಸಿದ್ದಾನೆ ಇದರಲ್ಲಿ ದೋಷ ಕಂಡುಬರುತ್ತದೆ. ಈ ರೀತಿಯಾಗಿ ಅಜ್ಞಾನಗಳು ಅನಂತವೆಂಬ ಮತವು ಅಸಂಗತ. ಅಜ್ಞಾನವು ಏಕವೆಂಬ ಮತವೇ ಸಮೀಚೀನವಾಗಿದೆ

ವಿಶೇಷ ವಿಚಾರ ಅಂಶ ರೂಪವಾದ ಅಂಧಕಾರವು ಒಂದೇ ಆಗಿದ್ದರೂ ಅದರ ಅಂಶ ರೂಪಗಳಾದ ನಾನಾ ಅಂಧಕಾರಗಳು ಪ್ರತಿ ಗೃಹದಲ್ಲಿಯೂ ಇರುತ್ತವೆ. ಯಾವ ಗೃಹದಲ್ಲಿ ದೀಪವಿರುವುದೋ ಆ ಗೃಹದಲ್ಲಿರುವ ಅಂಶ ರೂಪವಾದ ಅಂಧಕಾರವು ನಾಶವಾಗುತ್ತದೆ ಆ ಅಜ್ಞಾನವು ಒಂದೇ ಅದರ ಅಂಶ ರೂಪಗಳಾದ ಅನೇಕ ಅಜ್ಞಾನಗಳು, ಅನೇಕ ಅಂತಃಕರಣಗಳು ದೇಶಗತವಾದ ಸಾಕ್ಷಿ ಚೈತನ್ಯದಲ್ಲಿ ಇರುತ್ತವೆ ಯಾವ ಅಂತಃಕರಣದಲ್ಲಿ ಜ್ಞಾನ

ವೆಂಬ ಜ್ಯೋತಿಯು ಉತ್ಪನ್ನವಾಗಿರುವುದೋ ಆ ಅಂತಃಕರಣ ದೇಶದಲ್ಲಿರುವ ಅಜ್ಞಾನದ ಅಂಶವು ನಾಶವಾಗುತ್ತದೆ ಉಳಿದ ಅಜ್ಞಾನದ ಅಂಶಗಳು ಹಾಗೇ ಇರುತ್ತವೆ ಆದ್ದರಿಂದ ಒಬ್ಬನಿಗೆ ಜ್ಞಾನವಾಗುವುದರಿಂದ ಎಲ್ಲರಿಗೂ ಅಜ್ಞಾನ ನಿವೃತ್ತಿಯಾಗಬೇಕೆಂಬ ಮಾತು ಒಪ್ಪತಕ್ಕದ್ದಲ್ಲ

ಈ ರೀತಿಯಾಗಿ ಏಕ ಅಜ್ಞಾನವನ್ನು ಅಂಗೀಕರಿಸುವುದರಿಂದ ಬಂಧ ಮೋಕ್ಷಗಳ ವ್ಯವಸ್ಥೆಯೂ ಸಹ ಉಂಟಾಗುತ್ತದೆ. ಮತ್ತು ಜೀವನ ಅಜ್ಞಾನ ದಿಂದ ಕಲ್ಪಿತಗಳಾದ ಈಶ್ವರರು ಅನಂತರು, ಸೃಷ್ಟಿಗಳೂ ಸಹ ಅನಂತ ಎಂಬ ಶ್ರುತಿ, ಸ್ಮೃತಿ, ಪುರಾಣಕ್ಕೆ ವಿರುದ್ಧವಾದ ಪಕ್ಷವನ್ನು ಅಂಗೀಕರಿಸಿದಂತಾಗ ಲಿಲ್ಲ. ಆದುದರಿಂದ ಅಜ್ಞಾನವು ಏಕವೆಂದು ಅಂಗೀಕರಿಸುವುದೇ ಸಮೀ ಚೀನವಾಗಿದೆ

ಒಂದೇ ಆದ ಅಜ್ಞಾನವು ಜೀವಾಶ್ರಿತವಲ್ಲ. ಅದು ಶುದ್ಧಬ್ರಹ್ಮಾಶ್ರಿತ. ಏಕೆಂದರೆ, ಜೀವಭಾವವು ಅಜ್ಞಾನದ ಕಾರ್ಯ. ಆ ಅಜ್ಞಾನವು ಯಾವ ಆಶ್ರಯವೂ ಇಲ್ಲದೆ ಸ್ವತಂತ್ರವಾಗಿ ಇರಲಾರದು ನಿರಾಶ್ರಯವಾದ ಅಜ್ಞಾನ ದಿಂದ ಜೀವ ಭಾವವು ಸಂಭವಿಸುವುದಿಲ್ಲ. ಮೊದಲು ಯಾವುದಾದರೊಂದರ ಆಶ್ರಯದ ಬಲದಿಂದಲೇ ಅಜ್ಞಾನದ ಕಾರ್ಯದ ಜೀವಭಾವವು ಉಂಟಾಗು ತ್ತದೆ ಜೀವಭಾವದಂತೆ ಈಶ್ವರ ಭಾವವೂ ಸಹ ಅಜ್ಞಾನವೇ ಅಜ್ಞಾನದ ಕಾರ್ಯವಾದ ಈಶ್ವರನ ಆಶ್ರಯದಲ್ಲಿ ಅಜ್ಞಾನ ಇರುವುದೆಂಬುದು ಸಮೀ ಚೀನವಲ್ಲ. ಆದುದರಿಂದ ಅಜ್ಞಾನವು ಶುದ್ಧ ಬ್ರಹ್ಮಾಶ್ರಿತವಾಗಿದೆ

ಈ ರೀತಿಯಾಗಿ ಅನಾದಿಯಾದ ಚೇತನ ಮತ್ತು ಅನಾದಿಯಾದ ಅಜ್ಞಾನ – ಇವುಗಳ ಸಂಬಂಧವೂ ಸಹ ಅನಾದಿಯೇ ಈ ಅನಾದಿ ಸಂಬಂಧದಿಂದ ಉಂಟಾದ ಜೀವ ಭಾವ ಮತ್ತು ಈಶ್ವರ ಭಾವವು ಅನಾದಿ ಯೆಂತಲೇ ತಿಳಿಯಬೇಕು ಇದು ನಿಜವಾಗಿದ್ದರೂ ಜೀವ–ಈಶ್ವರ ಭಾವಗಳು ಅಜ್ಞಾನಕ್ಕೆ ಅಧೀನವಾಗಿರುವುದರಿಂದ ಅವುಗಳನ್ನು ಅಜ್ಞಾನದ ಕಾರ್ಯ ಗಳೆನ್ನುತ್ತಾರೆ. "ನಾನು ಅಜ್ಞಾನಿ" – ಈ ರೀತಿಯಂತೆ ಜೀವನಿಗೆ ಆಶ್ರಿತವಾಗಿ ಅಜ್ಞಾನವು ಪ್ರತೀತಿಯಾದರೂ ಜೀವನಿಗೆ ನಾನು ಅಜ್ಞಾನಿ ಎಂದು ಅಭಿಮಾನ

ವಾಗುತ್ತದೆ ಅಷ್ಟೆ ಶುದ್ಧ ಬ್ರಹ್ಮವನ್ನು ಆಶ್ರಯಿಸಿದ ಅಜ್ಞಾನದ ಕಾರ್ಯ ವಾದುದರಿಂದ ಜೀವನು ಆ ಅಜ್ಞಾನಕ್ಕೆ ಅಧಿಷ್ಠಾನ ರೂಪ ಆಶ್ರಯನೆಂಬುದು ಸಂಭವಿಸಲಾರದು. ಅದಕ್ಕೆ ಶುದ್ಧ ಬ್ರಹ್ಮವೇ ಅಧಿಷ್ಠಾನ ರೂಪವಾಗಿರುತ್ತದೆ

ಶುದ್ಧ ಬ್ರಹ್ಮದ ಆಶ್ರಯದಲ್ಲಿರುವ ಅಜ್ಞಾನವು ಮೊದಲು ಬ್ರಹ್ಮವನ್ನು ಆಚ್ಛಾದಿಸುತ್ತದೆ. ಅನಂತರ ನಾನು ಅಜ್ಞಾನಿ ಎಂಬ ರೀತಿಯಂತೆ ಅಜ್ಞಾನದ ಅಭಿಮಾನದ ಆಶ್ರಯವು ಜೀವನಿಂದಾಗುತ್ತದೆ ಈ ರೀತಿಯಿಂದ ನೋಡಿದರೆ ಅಜ್ಞಾನವು ಸ್ವಾಶ್ರಯವಾಗಿ, ಸ್ವವಿಷಯವಾಗಿ ಇರುತ್ತದೆಂದು ಸಿದ್ಧವಾಯಿತು.

ಶಂಕಾ ವಾಚಸ್ಪತಿಯವರ ಅಭಿಪ್ರಾಯದಂತೆ "ನಾನು ಅಜ್ಞಾನಿ" ಎಂಬುದರ ಅಭಿಪ್ರಾಯವೇನು ?

ಸಮಾಧಾನ . "ನಾನು ಅಜ್ಞಾನಿ" ಎಂಬ ಈ ಅನುಭವದಿಂದ ವಾಚಸ್ಪತಿಯು ಅಜ್ಞಾನಕ್ಕೆ ಆಶ್ರಯವು ಜೀವನೆಂದು ಹೇಳಿರುವುದು ಮುಮುಕ್ಷುಗಳ ಬುದ್ಧಿಗೆ ಸುಗಮವಾಗಿ ಬೋಧೆಯಾಗಲಿ ಎಂಬ ಅಭಿಪ್ರಾಯದಿಂದ ಹೇಳಿದ್ದು ಆದರೂ ಅದರಲ್ಲಿ ವಾಚಸ್ಪತಿಯವರ ಗೂಢವಾದ ಅಭಿಪ್ರಾಯವಿರುವುದು ಏನೆಂದರೆ ''ನಾನು'' ಎಂಬ ಶಬ್ದಕ್ಕೆ ವಾಚ್ಯನಾದ ಜೀವನು ಎಂದರೆ ಅಂತಃ ಕರಣ ವಿಶಿಷ್ಟವಾದ ಚೈತನ್ಯದ ವಿಶೇಷ್ಯಭಾಗವಾದ ಸಾಕ್ಷಿ ಚೈತನ್ಯವೇ ಬ್ರಹ್ಮ ಅದೇ ಅಜ್ಞಾನಕ್ಕೆ ಆಶ್ರಯ. ಅದರ ಎಂದರೆ ವಿಶೇಷ್ಯದ ವ್ಯವಹಾರವು ವಿಶಿಷ್ಟದಲ್ಲಿ ಸಂಭವಿಸುತ್ತದೆ

## ಏಕ ಅಜ್ಞಾನ ಪಕ್ಷದಲ್ಲಿ ಬಂದ ಮೋಕ್ಷ ವ್ಯವಸ್ಥಾ

ಅಜ್ಞಾನವು ಏಕ. ಅದು ಜ್ಞಾನದಿಂದ ನಿವೃತ್ತಿಯಾಗುತ್ತದೆ ಎಂಬ ವಿಷಯವು ಸತ್ಯ ಆದರೂ ಯಾವನ ಅಂತಃಕರಣದಲ್ಲಿ ಜ್ಞಾನೋತ್ಪತ್ತಿ ಯಾಗುತ್ತದೋ ಅವನ ಅಂತಃಕರಣಾವಚ್ಛಿನ್ನ ಚೈತನ್ಯದಲ್ಲಿರುವ ಅಜ್ಞಾನದ ಅಂಶವು ನಿವೃತ್ತಿಯಾಗಿ ಅವನು ಮುಕ್ತನಾಗುತ್ತಾನೆ. ಯಾವ ಅಂತಃಕರಣ ದಲ್ಲಿ ಜ್ಞಾನವು ಉತ್ಪತ್ತಿಯಾಗಿರುವುದಿಲ್ಲವೋ ಆ ಅಂತಃಕರಣದಲ್ಲಿ ಅಜ್ಞಾನವು ಹಾಗೆಯೇ ಉಳಿದುಕೊಳ್ಳುವುದು. ಅಲ್ಲಿ ಬಂಧವು ತಪ್ಪಿದ್ದಲ್ಲ. ಈ ರೀತಿಯಾಗಿ ಅಜ್ಞಾನವು ಏಕವೆಂಬ ಪಕ್ಷದಲ್ಲಿ ಬಂಧ ಮೋಕ್ಷದ ವ್ಯವಹಾರವು ಸಿದ್ಧಿಸುತ್ತದೆ.

ವಾಚಸ್ಪತಿಯವರ ರೀತಿಯಿಂದ ಅಜ್ಞಾನವು ಅನೇಕವೆಂಬ ವಾದದಲ್ಲಿ ಬುದ್ಧಿಯು ಪ್ರವೇಶವಾದರೆ ಇದೂ ಸಹ ಅದ್ವೈತ ಜ್ಞಾನಕ್ಕೆ ಉಪಾಯವೇ ಆಗುತ್ತದೆ. ಅದನ್ನು ಖಂಡಿಸುವುದರಲ್ಲಿ ಯಾವ ಆಗ್ರಹವೂ ಇಲ್ಲ ಯಾವ ರೀತಿಯಿಂದಲಾದರೂ ಜಿಜ್ಞಾಸುಗಳಿಗೆ ಅದ್ವೈತ ಜ್ಞಾನವಾದರೆ ಸಾಕು. ಇದೇ ವಿಷಯವನ್ನು ನೈಷ್ಕರ್ಮ ಸಿದ್ಧಿಯಲ್ಲಿ ಹೀಗೆ ಹೇಳಿದೆ:

ಶ್ಲೋಕ – ಯಯಾ ಯಯಾ ಭವೇತ್ ಪುಂಸಾನ್ ವ್ಯುತ್ಪತ್ತಿಃ ಪ್ರತ್ಯಗಾತ್ಮನಿ ।
ಸಾಸೈವ ಪ್ರಕ್ರಿಯೆಹ ಸ್ಯಾತ್ ಸಾಧ್ವಿ ಸಾಚ ವ್ಯವಸ್ಥಿತಿಃ ॥

ಅರ್ಥ. ಪುರುಷನಿಗೆ ಯಾವ ಯಾವ ಪ್ರಕ್ರಿಯೆಯಿಂದ ಪ್ರತ್ಯಗಾತ್ಮನ ಸ್ವರೂಪದ ಬೋಧೆಯಾಗುವುದೋ ಆಯಾ ಪ್ರಕ್ರಿಯೆಗಳು ಇಲ್ಲಿ ಅಂದರೆ ವೇದಾಂತ ಸಿದ್ಧಾಂತ ಜ್ಞಾನದಲ್ಲಿ ಶ್ರೇಷ್ಠವಾಗಿರುತ್ತವೆ. ಇದೇ ವ್ಯವಸ್ಥೆಯು ಉತ್ತಮವಾದದ್ದು. ಅಭಿಪ್ರಾಯವೇನೆಂದರೆ, ಈ ವ್ಯವಸ್ಥೆಯಲ್ಲಿ ಖಂಡನ ಮಂಡನದ ಅವಶ್ಯಕತೆಯಿಲ್ಲ

ಶುದ್ಧ ಬ್ರಹ್ಮದ ಆಶ್ರಯದಲ್ಲಿರುವ ಮಾಯೆಯನ್ನು ಅವಿದ್ಯಾ, ಇಲ್ಲವೇ ಅಜ್ಞಾನವೆಂದು ಕರೆಯುತ್ತಾರೆ ಇದು ಅಚಿಂತ್ಯ ಶಕ್ತಿಯುಳ್ಳದ್ದಾದರೂ ಯುಕ್ತಿಯಿಂದ ಸಂಹರಿಸಲ್ಪಡುವುದರಿಂದ ಮಾಯೆಯೆನ್ನುತ್ತಾರೆ. ವಿದ್ಯೆಯಿಂದ ನಾಶವಾಗುವುದರಿಂದ ಅವಿದ್ಯೆಯೆನ್ನುತ್ತಾರೆ. ಸ್ವರೂಪವನ್ನು ಆಚ್ಛಾದಿಸುವುದರಿಂದ ಅಜ್ಞಾನವೆನ್ನುತ್ತಾರೆ ಯಾವ ಚೈತನ್ಯದ ಆಶ್ರಯದಲ್ಲಿ ಆಜ್ಞಾನವಿರುವುದೋ ಆ ಚೈತನ್ಯಕ್ಕೆ ಸಾಮಾನ್ಯವೆಂದು ಹೆಸರು. ಆ ಸಾಮಾನ್ಯ ಚೈತನ್ಯವು ಅಜ್ಞಾನಕ್ಕೆ ವಿರೋಧಿಯಲ್ಲ. ಆ ಸಾಮಾನ್ಯ ಚೈತನ್ಯವು ಸತ್ತಾಸ್ಫೂರ್ತಿಯನ್ನು ಕೊಡುವುದರ ಮೂಲಕ ಅಜ್ಞಾನಕ್ಕೆ ಸಾಧಕವಾಗಿದೆ. ವಿಶೇಷ ಚೈತನ್ಯವು ಮಾತ್ರ ಅಜ್ಞಾನಕ್ಕೆ ವಿರೋಧಿಯಾಗಿದೆ.

ಪ್ರಶ್ನೆ : ವಿಶೇಷ ಚೈತನ್ಯವೆಂದರೇನು ?

ಉತ್ತರ : ವೃತ್ತಿಯಲ್ಲಿ ಆರೂಢವಾದ ಚೈತನ್ಯ ಇಲ್ಲವೇ ಚೈತನ್ಯ ಸಹಿತವಾದ ವೃತ್ತಿಯನ್ನು ವಿಶೇಷ ಚೈತನ್ಯವೆನ್ನುತ್ತಾರೆ.

## ಈಶ್ವರ ಸ್ವರೂಪ, ದ್ವಿವಿಧಕಾರಣ ಲಕ್ಷಣ

ಶುದ್ಧ ಸತ್ವಗುಣ ಸಹಿತವಾದ ಮಾಯೆ, ಮಾಯಾ ಅಧಿಷ್ಠಾನವಾದ ಚೈತನ್ಯ, ಮಾಯೆಯಲ್ಲಿ ಬಿದ್ದ ಚೇತನದ ಆಭಾಸ – ಈ ಮೂರೂ ಸೇರಿದರೆ ಈಶ್ವರನೆನ್ನುತ್ತಾರೆ. ಆ ಈಶ್ವರನು ಸರ್ವಜ್ಞ, ಅವನಿಗೆ ಜಗತ್ ಕಾರಣ ನೆನ್ನುತ್ತಾರೆ.

ಕಾರಣವು ಎರಡು ವಿಧ ಒಂದು ಉಪಾದಾನ ಕಾರಣ, ಎರಡು ನಿಮಿತ್ತಕಾರಣ

ಪ್ರಶ್ನೆ · ಉಪಾದಾನ ಕಾರಣವೆಂದರೇನು ?

ಉತ್ತರ : ಇದಕ್ಕೆ ಎರಡು ಲಕ್ಷಣಗಳು . (೧) ಕಾರ್ಯದ ಉತ್ಪತ್ತಿ, ಸ್ಥಿತಿ, ಲಯಕ್ಕೆ ಕಾರಣವಾದದ್ದು ಉಪಾದಾನ ಕಾರಣ.

(೨) ಯಾವುದು ಕಾರ್ಯದ ಸ್ವರೂಪದಲ್ಲಿ ಪ್ರವೇಶವಾಗುವುದೋ, ಯಾವುದು ಇಲ್ಲದಿದ್ದರೆ ಕಾರ್ಯದ ಸ್ಥಿತಿಯು ಸಂಭವಿಸಲಾರದೋ ಅದಕ್ಕೆ ಉಪಾದಾನ ಕಾರಣವೆನ್ನುತ್ತಾರೆ

ಉದಾಹರಣೆ : ಘಟ ಸ್ವರೂಪದಲ್ಲಿ ಮೃತ್ತಿಕೆಯು ಪ್ರವೇಶವಾಗಿದ್ದು, ಮೃತ್ತಿಕೆಯು ಇಲ್ಲದಿದ್ದರೆ ಘಟದ ಸ್ಥಿತಿಯೇ ಸಂಭವಿಸುವುದಿಲ್ಲ. ಆದುದರಿಂದ ಘಟಕ್ಕೆ ಮೃತ್ತಿಕೆ ಉಪಾದಾನ ಕಾರಣ.

ಪ್ರಶ್ನೆ : ನಿಮಿತ್ತ ಕಾರಣವೆಂದರೇನು ?

ಉತ್ತರ: ಕಾರ್ಯೋತ್ಪತ್ತಿಗೆ ಮಾತ್ರ ಕಾರಣವಾಗಿದ್ದು ಕಾರ್ಯೋತ್ಪತ್ತಿಯಾದ ನಂತರ ಬೇರೆ ಆಗಿರುವುದು ನಿಮಿತ್ತಕಾರಣ.

ನಿಮಿತ್ತಕಾರಣದ ಎರಡನೇ ಲಕ್ಷಣ ಯಾವುದು ಕಾರ್ಯಸ್ವರೂಪ ದಲ್ಲಿ ಪ್ರವೇಶವಾಗದೇ ಕಾರ್ಯಕ್ಕಿಂತ ಭಿನ್ನವಾಗಿದ್ದು ಕಾರ್ಯವನ್ನು ಮಾಡುವುದೋ, ಯಾವುದರ ನಾಶದಿಂದ ಕಾರ್ಯ ನಾಶವಾಗುವುದಿಲ್ಲವೋ ಅದು ನಿಮಿತ್ತಕಾರಣ.

ಉದಾಹರಣೆ : ಘಟ ಸ್ವರೂಪದಲ್ಲಿ ಕುಲಾಲದಂಡ ಚಕ್ರಾದಿಗಳಿಗೆ ಪ್ರವೇಶವಿಲ್ಲ. ಅವು ಘಟಕ್ಕಿಂತ ಬೇರೆಯಾಗಿದ್ದು ಘಟೋತ್ಪತ್ತಿಗೆ ಸಾಧನ

ವಾಗಿರುತ್ತವೆ ಘಟವು ಆದನಂತರ ಅವುಗಳ ನಾಶವಾದರೂ, ಘಟವು ನಾಶವಾಗದೆ ಹಾಗೆಯೇ ಇರುತ್ತದೆ ಆದುದರಿಂದ ಕುಲಾಲದಂಡ ಚಕ್ರಾದಿಗಳು ಘಟಕ್ಕೆ ನಿಮಿತ್ತ ಕಾರಣಗಳು

ಪ್ರಶ್ನೆ ಘಟಕ್ಕೆ ಉಪಾದಾನ ಕಾರಣವು ಮೃತ್ತಿಕೆ, ನಿಮಿತ್ತಕಾರಣ ಕುಲಾಲನು ಹೀಗಿರುವುದರಿಂದ ಘಟವು ನಿಮಿತ್ತೋಪಾದಾನ ಕಾರಣವುಳ್ಳದ್ದು ಎಂದು ತಿಳಿದುಬರುತ್ತದೆ ಇಂತಹ ಕಾರಣಗಳು ಮಾತ್ರ ಜಗತ್ತಿನಲ್ಲಿವೆ. ನೀವು ಈಶ್ವರನೊಬ್ಬನೇ ಜಗತ್ತಿಗೆ ಅಭಿನ್ನ ನಿಮಿತ್ತೋಪಾದಾನ ಕಾರಣವೆನ್ನುತ್ತೀರಿ ಅದು ಹೇಗೆ? ಹಾಗಿರುವುದನ್ನು ಜಗತ್ತಿನಲ್ಲಿ ಎಲ್ಲೂ ಕಂಡಿಲ್ಲವಲ್ಲಾ?

ಜಗತ್ತಿನಲ್ಲಿ ಯಾವುದೇ ಒಂದು ಕಾರ್ಯಕ್ಕೆ ಉಪಾದಾನಕಾರಣ, ನಿಮಿತ್ತಕಾರಣಗಳು ಬೇರೆಬೇರೆಯಾಗಿರುವುದೂ, ಎರಡೂ ಒಂದೇ ಆಗಿರುವುದೂ ಕಂಡುಬರುತ್ತದೆ. ಅದು ಯಾವುದೆಂದರೆ, "ಊರ್ಣನಾಭಿ" ಅಂದರೆ ಜೇಡರ ಹುಳು ಊರ್ಣನಾಭಿಯ ಜಡ ಶರೀರವು ಜಾಲಕ್ಕೆ ಉಪಾದಾನ ಕಾರಣ; ಊರ್ಣನಾಭಿ ಶರೀರದಲ್ಲಿರುವ ಚೈತನ್ಯ ಭಾಗವು ಜಾಲಕ್ಕೆ ನಿಮಿತ್ತ ಕಾರಣ. ಈ ರೀತಿ ಒಬ್ಬ ಈಶ್ವರನನ್ನು ಜಗತ್ತಿಗೆ ಉಪಾದಾನಕಾರಣನೆಂತಲೂ, ನಿಮಿತ್ತಕಾರಣನೆಂತಲೂ ಅಂಗೀಕರಿಸಬಹುದೇ?

ಸಮಾಧಾನ . ಊರ್ಣನಾಭಿಯಂತೆ ಈಶ್ವರನ ಶರೀರವಾದ ಜಡ ಮಾಯೆಯು ಜಗತ್ತಿಗೆ ಉಪಾದಾನಕಾರಣವಾಗಿದೆ. ಈಶ್ವರನ ಚೈತನ್ಯ ಭಾಗವು ನಿಮಿತ್ತಕಾರಣವಾಗಿದೆ. ಈ ರೀತಿಯಾಗಿ ಒಬ್ಬ ಈಶ್ವರನೇ ಈ ಜಗತ್ತಿಗೆ ಉಪಾದಾನಕಾರಣನೂ, ನಿಮಿತ್ತ ಕಾರಣನೂ ಆಗಿದ್ದಾನೆ ಇಲ್ಲಿ ಊರ್ಣನಾಭಿ ದೃಷ್ಟಾಂತಕ್ಕಿಂತಲೂ ಸ್ವಪ್ನ ದೃಷ್ಟಾಂತವು ಇನ್ನೂ ಸಮಂಜಸವಾಗಿದೆ

**ಈ ಉಪಾದಾನ ನಿಮಿತ್ತ ಕಾರಣಗಳನ್ನು ಕುರಿತು ವಿಶೇಷ ವಿಚಾರ**

ಊರ್ಣನಾಭಿಯ ಶರೀರವು ಪಟಕ್ಕೆ ಉಪಾದಾನಕಾರಣ, ಮತ್ತು ಊರ್ಣನಾಭಿಯ ಅಂತಃಕರಣ ಸಹಿತ ಚೈತನ್ಯ ಭಾಗ ನಿಮಿತ್ತಕಾರಣವಾಗಿರುವಂತೆ ತಮಃಪ್ರಧಾನ ಪ್ರಕೃತಿಯಾದ ಮಾಯೆಯು ಜಗತ್ತಿಗೆ ಉಪಾದಾನ ಕಾರಣ ಮತ್ತು ಶುದ್ಧಸತ್ವ ಪ್ರಧಾನವಾದ ಮಾಯಾ ಸಹಿತ

ಚೈತನ್ಯ ಭಾಗ ನಿಮಿತ್ತ ಕಾರಣವಾಗಿದೆ. ಕೇವಲ ಚೈತನ್ಯ ಭಾಗದಲ್ಲಿ ಜಗತ್ ಕಾರಣವೂ ಸಂಭವಿಸಲಾರದು

ನ್ಯಾಯಮತದಲ್ಲಿ ಘಟದೊಂದಿಗೆ ಆಗುವ ಈಶ್ವರನ ಸಂಯೋಗಕ್ಕೆ ಈಶ್ವರನು ಅಭಿನ್ನ ನಿಮಿತ್ತೋಪಾದಾನ ಕಾರಣವೆನ್ನುತ್ತಾರೆ ಮತ್ತು ಜೀವಾತ್ಮಗತವಾದ ಜ್ಞಾನಾದಿ ಗುಣಗಳಲ್ಲಿ ಜೀವಾತ್ಮನು ಅಭಿನ್ನ ನಿಮಿತ್ತೋಪಾದಾನ ಕಾರಣವೆನ್ನುತ್ತಾರೆ. ಶ್ರೀಮದ್ ಭಾಗವತ ಮಹಾ ಪುರಾಣದಲ್ಲಿ, ಬ್ರಹ್ಮದೇವನು ಹಸುಗಳನ್ನೂ ಹಸುವಿನ ಕರುಗಳನ್ನೂ ಹರಣ ಮಾಡಿದಾಗ ಶ್ರೀಕೃಷ್ಣ ಪರಮಾತ್ಮನು ಹಸುಗಳ ಮತ್ತು ಹಸುವಿನಕರುಗಳ ಸರ್ವರೂಪವನ್ನು ತಾನೇ ಧರಿಸಿದನು ಅಲ್ಲಿ ಶ್ರೀಕೃಷ್ಣ ಪರಮಾತ್ಮನು ಹಸುಗಳಿಗೂ ಹಸುವಿನ ಕರುಗಳಿಗೂ ಅಭಿನ್ನ ನಿಮಿತ್ತೋಪಾದಾನ ಕಾರಣನೆಂದು ತಿಳಿದುಬರುತ್ತದೆ.

ಮತ್ತೊಂದು ಉದಾಹರಣೆ : ಒಬ್ಬ ಚಿತ್ರಕಾರನು ತನ್ನ ನಖರೂಪ ಲೇಖನಿಯಿಂದ ತನ್ನ ಶರೀರದ ಮೇಲೆ ಚಿತ್ರವನ್ನು ಬರೆಯುತ್ತಾನೆ ಆ ಚಿತ್ರಕ್ಕೆ ಚಿತ್ರಕಾರನು ಅಭಿನ್ನ ನಿಮಿತ್ತೋಪಾದಾನ ಕಾರಣನಲ್ಲವೆ ?

ಇನ್ನೊಂದು ಉದಾಹರಣೆ. ಸಾಕ್ಷಿ ಚೈತನ್ಯವು ಸ್ವಪ್ನ ಪ್ರಪಂಚಕ್ಕೆ ತಾನೇ ನಿಮಿತ್ತಕಾರಣವೂ, ಉಪಾದಾನ ಕಾರಣವೂ ಆಗಿರುವುದೆಂಬುದನ್ನು ಸರ್ವರೂ ದಿನವೂ ಅನುಭವಿಸುತ್ತಾರೆ ಈ ರೀತಿಯಾಗಿ ಜಗತ್ತಿಗೆ ಈಶ್ವರನು ಅಭಿನ್ನ ನಿಮಿತ್ತೋಪಾದಾನ ಕಾರಣನಾಗಿದ್ದಾನೆ

ಜೀವನ ಕರ್ಮವು ಫಲವನ್ನು ಕೊಡುವುದಕ್ಕೆ ಸಮ್ಮುಖವಾಗದೇ ಇದ್ದಾಗ ಪ್ರಳಯವಾಗುತ್ತದೆ ಕರ್ಮವು ಫಲ ಕೊಡಲು ಸಮ್ಮುಖವಾದಾಗ ಸೃಷ್ಟಿಯಾಗುತ್ತದೆ. ಈ ರೀತಿಯಾಗಿ ಸೃಷ್ಟಿಯು ಜೀವನ ಕರ್ಮಕ್ಕೆ ಅಧೀನವಾಗಿದೆ. ಈಶ್ವರನಿಗೆ ಯಾವ ಸಂಬಂಧವೂ ಇಲ್ಲ

ಪೃಥ್ವಿಯಲ್ಲಿ ಜೇಡರಹುಳುವು ತನ್ನ ಬಲೆಯನ್ನು ಸೃಷ್ಟಿಸಬೇಕಾದರೆ, ತಾನೇ ಉಪಾದಾನಕಾರಣ, ನಿಮಿತ್ತಕಾರಣ, ಸಹಕಾರಿ ಕಾರಣಗಳೆಂಬ ಮೂರು ಕಾರಣಗಳೂ ಆಗಿರುತ್ತದೆ. ಅದರಂತೆ ಉಪನಿಷತ್ ಪ್ರತಿಪಾದಿತವಾದ, ಸನಾತನವಾದ ಪರಮಾತ್ಮನೊಬ್ಬನೇ ಜಗತ್ತಿಗೆ ಉಪಾದಾನ ನಿಮಿತ್ತ,

ಸಹಕಾರಿಗಳೆಂಬ ಕಾರಣತ್ರಯರೂಪದಿಂದ ಅನೇಕ ಬ್ರಹ್ಮಾಂಡಗಳನ್ನು ಸೃಷ್ಟಿಸಿರುತ್ತಾನೆಂಬುದು ಶಾಸ್ತ್ರಗಳ ಸಿದ್ಧಾಂತ.

ಈ ವಿಷಯದಲ್ಲಿ ವಿಶೇಷ ವಿಚಾರವೇನೆಂದರೆ, ಜೇಡರಹುಳು ತನ್ನ ನಿವಾಸಕ್ಕಾಗಿ ಮನೆಯನ್ನು ಅಂದರೆ ಬಲೆಯನ್ನು ಸೃಷ್ಟಿಸಬೇಕಾದಾಗ ತನ್ನ ಉದರದಲ್ಲಿದ್ದ ತಂತುವನ್ನು ಗುದದ್ವಾರದಿಂದ ಬಿಡುತ್ತಾ ತನ್ನ ಪಾದಗಳಿಂದ ಎಣಿಕ ಹಾಕುತ್ತಾ ತನಗೆಷ್ಟು ಸ್ಥಳ ಬೇಕೋ ಅಷ್ಟು ಸ್ಥಳವನ್ನು ಆಕ್ರಮಿಸಿ ಕೊಂಡು ಮನೆ ಮಾಡಿ ಅದರಲ್ಲಿ ನಿವಾಸ ಮಾಡುತ್ತದೆ. ಅಂದರೆ ತಾನು ಮನೆ ನಿರ್ಮಿಸಿಕೊಳ್ಳುವಾಗ ಕಾಗೆ ಗುಬ್ಬಿಗಳು ಹೊರಗಿನಿಂದ ಬೇರೆ ಕಸಕಡ್ಡಿ ಗಳನ್ನು ತಂದು ಗೂಡು ಕಟ್ಟಿಕೊಳ್ಳುವಂತೆ ಬೇರೆ ಯಾವ ವಸ್ತುವನ್ನೂ ಅದು ತಂದುಕೊಳ್ಳುವುದಿಲ್ಲ ಇದು ಜಗತ್ ಪ್ರಸಿದ್ಧಿ. ಇಲ್ಲಿ ತಿಳಿದುಕೊಳ್ಳ ಬೇಕಾದ ಅಂಶವೇನೆಂದರೆ, ಜೇಡರ ಹುಳುವಿಗೆ ತನ್ನ ಮನೆ ರೂಪ ಕಾರ್ಯ ನಿರ್ಮಿಸುವಾಗ ಆ ಮನೆಗೆ ತನ್ನ ಉದರದಲ್ಲಿದ್ದ ತಂತುವು ಉಪಾದಾನ ಕಾರಣವಾಗಿರುತ್ತದೆ. ಮತ್ತು ಇಂತಿಷ್ಟು ಅಳತೆಯಲ್ಲಿ ಮನೆ ನಿರ್ಮಿಸ ಬೇಕಂಬ ಬುದ್ಧಿಯು ಆ ಮನೆಗೆ ನಿಮಿತ್ತ ಕಾರಣವಾಗಿರುತ್ತದೆ ಮತ್ತು ಆ ಮನೆಯನ್ನು ತನ್ನ ಕಾಲುಗಳಿಂದ ಹೆಣೆದು ಕಟ್ಟುವುದರಿಂದ ಆ ಕಾಲುಗಳು ಸಹಕಾರಿ ಕಾರಣವಾಗಿರುತ್ತವೆ ಆದರೆ ಸಹಕಾರಿ ಕಾರಣವು ನಿಮಿತ್ತ ಕಾರಣ ದಲ್ಲಿಯೇ ಅಂತರ್ಭಾವವೆಂದು ವೇದಾಂತದ ನಿರ್ಣಯ. ಈ ಜೇಡರ ಹುಳ ದಂತೆ ಈಶ್ವರನು ಜಗತ್‌ರೂಪಕಾರ್ಯಕ್ಕೆ ಮೂರೂ ಕಾರಣಗಳೂ ತಾನೇ ಆಗಿರುತ್ತಾನೆ ಹೇಗೆಂದರೆ, ಮಾಯಾವಿಶಿಷ್ಟನಾದ ಪರಮಾತ್ಮನಲ್ಲಿ ಜ್ಞಾನ, ಇಚ್ಛಾ, ಕ್ರಿಯೆಗಳೆಂಬ ಮೂರು ಶಕ್ತಿಗಳಿರುತ್ತವೆ. ಜಗತ್‌ರೂಪಕಾರ್ಯಕ್ಕೆ ಆ ಪರಮಾತ್ಮನು ಜ್ಞಾನರೂಪ ಶಕ್ತಿಯಿಂದ ನಿಮಿತ್ತಕಾರಣನಾಗಿಯೂ, ಇಚ್ಛಾರೂಪ ಶಕ್ತಿ ಅಂದರೆ ವಿಕ್ಷೇಪ ಶಕ್ತಿಯಿಂದ ಉಪಾದಾನ ಕಾರಣ ನಾಗಿಯೂ, ಕ್ರಿಯಾರೂಪ ಶಕ್ತಿಯಿಂದ ಸಹಕಾರಿ ಕಾರಣನಾಗಿಯೂ ಇರು ತ್ತಾನೆ. ಕ್ರಿಯಾಶಕ್ತಿಯು ಇಚ್ಛಾಶಕ್ತಿಯಲ್ಲಿ ಅಂತರ್ಭೂತವಾಗಿರುವುದರಿಂದ ಜ್ಞಾನ, ಇಚ್ಛಾ ಈ ಎರಡನ್ನೇ ಸ್ವೀಕಾರ ಮಾಡಿಕೊಂಡು ವೇದಾಂತ ಶಾಸ್ತ್ರವು ಜಗತ್ತಿಗೆ ನಿಮಿತ್ತಕಾರಣನೂ, ಉಪಾದಾನ ಕಾರಣನೂ ಪರಮಾತ್ಮ ಒಬ್ಬನೇ ಎಂದು ಜೇಡರ ಹುಳು ದೃಷ್ಟಾಂತದಿಂದ ತಿಳಿಸುತ್ತದೆ ಇದೇ ವಿಷಯವನ್ನು

ಶ್ರುತಿಯಲ್ಲಿ "ಯಥೋರ್ಣನಾಭಿ ಸೃಜತೇ ಗೃಹ್ಣಾತಿಚ" ಎಂದು ಹೇಳಿದೆ ಜೇಡರ ಹುಳುವೆಂಬ ಜಂತು ತನ್ನಿಂದಲೇ ತಂತು ಉಂಟುಮಾಡುತ್ತದೆ ಎಂದು ಇದರ ಅರ್ಥ. ತನ್ನಲ್ಲಿಯು ಆ ತಂತುವನ್ನು ತನ್ನಿಂದಲೇ ಲಯ ಮಾಡಿಕೊಳ್ಳುತ್ತದೆ. ಇದರಂತೆ ಪರಮಾತ್ಮನು ತನ್ನಿಂದಲೇ ಜಗತ್ತನ್ನುಂಟುಮಾಡಿ ಪುನಃ ತನ್ನಲ್ಲಿಯೇ ಲಯ ಮಾಡಿಕೊಳ್ಳುತ್ತಾನೆ.

## ಜೀವಸ್ವರೂಪ ವರ್ಣನೆ

ದೋಹಾ – ಮಲಿನಸತ್ತ್ವ ಅಜ್ಞಾನ ಸ್ಯೈ, ಜೊ ಚೇತನ ಆಭಾಸ ।
ಅಧಿಷ್ಠಾನ ಯುತ ಜೀವ ಸೊ, ಕರತ ಕರ್ಮ ಫಲ ಆಸ ॥೧೫೫॥

ಅರ್ಥ · ಮಲಿನ ಸತ್ವಗುಣ ಸಹಿತವಾದ ಅಜ್ಞಾನಾಂಶದಲ್ಲಿಯು ಚೇತನದ ಆಭಾಸ, ಅಜ್ಞಾನ, ಅಜ್ಞಾನಕ್ಕೆ ಅಧಿಷ್ಠಾನವಾದ ಕೂಟಸ್ಥ – ಈ ಮೂರೂ ಸೇರಿ ಜೀವನೆನ್ನುತ್ತಾರೆ. ಈ ಜೀವನ ಸ್ವಭಾವವೇನೆಂದರೆ, ಇವನು ಶುಭಾಶುಭ ಕರ್ಮಗಳ ಕರ್ತ, ಮತ್ತು ಶುಭಾಶುಭ ಕರ್ಮಗಳ ಫಲವಾದ ಸುಖದುಃಖಗಳ ಭೋಕ್ತಾ. ಇದರ ಮೇಲೆ ತಿಳಿದುಬರುವ ಅಂಶವೇನೆಂದರೆ, ಜೀವನ ಕರ್ಮಾನುಸಾರವಾಗಿ ಉತ್ತಮ ಅಧಮ ಭೋಗಗಳಿಗಾಗಿ ಈಶ್ವರನು ಸೃಷ್ಟಿಯನ್ನು ರಚಿಸುತ್ತಾನೆ. ಆದುದರಿಂದ ಈಶ್ವರನಲ್ಲಿ ವಿಷಮ ದೃಷ್ಟಿಯೂ ಕ್ರೂರತ್ವವೂ ಇಲ್ಲ.

ಶಂಕಾ ಸರ್ವಕ್ಕಿಂತಲೂ ಮೊದಲು ಅಂದರೆ ಸೃಷ್ಟಿಗಿಂತಲೂ ಮೊದಲು ಕರ್ಮವಿಲ್ಲದ್ದರಿಂದ ಈಶ್ವರನು ಪ್ರಥಮ ಸೃಷ್ಟಿಯಲ್ಲಿ ಉತ್ತಮ ಅಧಮ ಶರೀರಗಳನ್ನೂ ಭೋಗಗಳನ್ನೂ ಸೃಷ್ಟಿ ಮಾಡಿದನು. ಆದುದರಿಂದ ಈಶ್ವರನು ವಿಷಮ ದೃಷ್ಟಿಯುಳ್ಳವನಾಗಿದ್ದಾನೆ.

ಸಮಾಧಾನ: ಸಂಸಾರವು ಅನಾದಿ. ಉತ್ತರೋತ್ತರ ಸೃಷ್ಟಿಗೆ ಪೂರ್ವ ಸೃಷ್ಟಿಯ ಕರ್ಮವು ಕಾರಣವಾಗಿದೆ. ಸರ್ವಕ್ಕಿಂತ ಮೊದಲಿನ ಸೃಷ್ಟಿಯೆಂಬುದೇ ಘಟಿಸಲಾರದು. ಆದುದರಿಂದ ಈಶ್ವರನಲ್ಲಿ ಯಾವ ದೋಷವೂ ಇಲ್ಲ.

## ಜೀವನ ಭೋಗದ ನಿಮಿತ್ತವಾಗಿ ಈಶ್ವರನಿಗೆ ಜಗದುತ್ಪತ್ತಿಯ ಇಚ್ಛೆ

ಕವಿತಾ – ಜೀವನ ಕೆ ಪೂರ್ವ ಸೃಷ್ಟಿ ಕರ್ಮ ಅನುಸಾರ ಈಸ–
ಇಚ್ಛಾ ಹೋಯ ಜೀವ ಭೋಗ ಜಗ ಉಪಜಾಈಯೆ
ನಭ, ವಾಯು, ತೇಜ, ಜಲ. ಭೂಮಿ ಭೂತ ರಚ್ಯೆ ತಹಾಂ,
ಶಬ್ದ, ಸ್ಪರ್ಶ, ರೂಪ, ರಸ, ಗಂಧ ಗುನ ಗಾಇಯೆ ||
ಸತ್ತ್ವ ಅಂಶ ಪಂಚನ ಕೊ ಮೇಲಿ ಉಪಜತ ಸತ್ತ್ವ
ರಜೋಗುನ ಅಂಸ ಮಿಲಿ ಪ್ರಾನ ತ್ಯೋಂ ಉಪಾಈಯೆ
ಏಕ ಏಕ ಭೂತ ಸತ್ತ್ವ–ಅಂಶ ಜ್ಞಾನ–ಇಂದ್ರಿ ರಚ್ಯೆ
ಕರ್ಮ ಇಂದ್ರಿ ರಜೋಗುನ ಅಂಸ ತ್ಯೆಂ ಲಖಾಈಯೆ ||೧೫೬||

ಅರ್ಥ : ಜೀವನ ಕರ್ಮವು ಭೋಗ ಕೊಡುವುದರಲ್ಲಿ ಉದಾಸೀನವಾದಾಗ ಪ್ರಲಯವಾಗುತ್ತದೆ ಪ್ರಲಯದಲ್ಲಿ ಸರ್ವ ಪದಾರ್ಥಗಳ ಸಂಸ್ಕಾರಗಳು ಮಾಯೆಯಲ್ಲಿ ಇರುತ್ತವೆ ಆಗ ಅವಶೇಷವಾದ ಜೀವನ ಕರ್ಮಗಳೂ ಸಹ ಸೂಕ್ಷ್ಮ ರೂಪದಿಂದ ಮಾಯೆಯಲ್ಲಿ ಇರುತ್ತವೆ ಆ ಕರ್ಮಗಳು ಭೋಗ ಕೊಡುವುದಕ್ಕಾಗಿ ಸಮ್ಮುಖವಾದಾಗ ಈಶ್ವರನಿಗೆ ಜೀವನ ಭೋಗಕ್ಕಾಗಿ ಜಗತ್ತನ್ನು ಸೃಷ್ಟಿಸಬೇಕೆಂಬ ಇಚ್ಛೆಯಾಗುತ್ತದೆ

ಇಚ್ಛೆಯಾಗುತ್ತದೆ ಎಂಬ ವಿಷಯದಲ್ಲಿ ಶಂಕಾ ಸಮಾಧಾನಗಳು: ಈಶ್ವರನಿಗೆ ಇಚ್ಛೆ ಏಕೆ ಆಗುತ್ತದೆ ? ಇದೊಂದು ವಿಚಾರಣೀಯ ವಿಷಯವಾಗಿದೆ ಇದರ ವಿಷಯವು ಬ್ರಹ್ಮಸೂತ್ರದ ಎರಡನೇ ಅಧ್ಯಾಯದ ಪ್ರಥಮ ಪಾದದ ಹನ್ನೊಂದನೆಯ ಅಧಿಕಾರಣದಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಅಲ್ಲಿಯ ಪೂರ್ವ ಪಕ್ಷದ ಸಾರವೇನೆಂದರೆ, ಸಾಧಾರಣಕ್ಕಿಂತಲೂ ಸಾಧಾರಣವಾದ ಇಚ್ಛೆಯು ನಿಷ್ಪ್ರಯೋಜನವಾಗುವುದಿಲ್ಲ ಹಾಗಾದರೆ ಮಹಾ ಈಶ್ವರನ ಮಹಾ ಇಚ್ಛೆಯು ಹೇಗೆ ನಿಷ್ಪ್ರಯೋಜನವಾಗುತ್ತದೆ ?

ಚೇತನೋ ಹಿ ಲೋಕೆ ಬುದ್ಧಿಪೂರ್ವಕಾರೀ ಪುರುಷಃ
ಪ್ರವರ್ತಮಾನೋ ನ ಮಂದೋಪಕ್ರಮಾಮಪಿ
ತಾವತ್ಪ್ರವೃತ್ತಿಮಾತ್ಮಪ್ರಯೋಜನಾ–

ನುಗಯೋಗಿ ನೀವಾರಭವಾಣೋದೃಷ್ಟಃ ।
ಕಿಮುತ ಗುರುತರ ಸಂರಂಭಾವರ್ ॥

ಸಾರಾಂಶ – ದುಃಖದ, ದುಃಖಸಾಧನದ ನಿವೃತ್ತಿಗಾಗಿ, ಇಲ್ಲವೇ ಸುಖದ ಮತ್ತು ಸುಖಸಾಧನದ ಪ್ರಾಪ್ತಿಗಾಗಿ ಇಚ್ಛೆಯುಂಟಾಗುವುದು ಕಂಡುಬರುತ್ತದೆ. ಲೋಕದಲ್ಲಿ ಈ ನಾಲ್ಕನ್ನು ಬಿಟ್ಟು ಅನ್ಯ ಇಚ್ಛೆಗಳೇ ಕಂಡುಬರುವುದಿಲ್ಲ. ಇದು ಸರ್ವರಿಗೂ ತಿಳಿದ ನಿಯಮ. ಈಶ್ವರನಲ್ಲಿ ದುಃಖದ ಮತ್ತು ದುಃಖಸಾಧನದ ಅಭಾವವಿರುವುದರಿಂದ ಈಶ್ವರನಿಗೆ ದುಃಖ ನಿವೃತ್ತಿಗಾಗಿಯೂ, ದುಃಖಸಾಧನ ನಿವೃತ್ತಿಗಾಗಿಯೂ ಇಚ್ಛೆಯು ಸಂಭವಿಸ ಲಾರದು ಮತ್ತು ಈಶ್ವರನು ಪೂರ್ಣಕಾಮನಾದುದರಿಂದ ಅವನಿಗೆ ಸುಖೇಚ್ಛೆಯೂ, ಸುಖಸಾಧನ ಇಚ್ಛೆಯೂ ಸಂಭವಿಸುವುದಿಲ್ಲ

ಮತ್ತೊಂದು ಶಂಕೆ ಬಾಲಕನಿಗೆ ವಿನೋದಕ್ಕಾಗಿ ಆಟದಲ್ಲಿ ಇಚ್ಛೆ ಯುಂಟಾಗುವಂತೆ ಈಶ್ವರನಿಗೆ ಜಗದ್ರಚನಾ ರೂಪವಾದ ವಿನೋದವೆಂಬ ಇಚ್ಛೆಯು ನಿರ್ನಿಮಿತ್ತವಾಗಿ ಆಗಬಹುದಲ್ಲವೆ?

ಸಮಾಧಾನ : ಇದೂ ಸಂಭವಿಸುವುದಿಲ್ಲ. ಹೇಗೆಂದರೆ, ಬಾಲಕನಿಗೆ ಚಿತ್ತದ ಆಹ್ಲಾದಕ್ಕಾಗಿ ಇಚ್ಛೆಯೊಗುವಂತೆ ಸಚ್ಚಿದಾನಂದ ರೂಪನಾದ, ಪೂರ್ಣಕಾಮನಾದ ಈಶ್ವರನಿಗೆ ಆಹ್ಲಾದ ರೂಪವಾದ ಸುಖದ ಪ್ರಾಪ್ತಿಯ ಇಚ್ಛೆಯು ಸಂಭವಿಸಲಾರದು

ಉಪಮಾನ : ಒಬ್ಬ ಮನುಷ್ಯನು ಬೇಸಿಗೆ ಕಾಲದಲ್ಲಿ ನಡೆದು ಹೋಗು ತ್ತಿದ್ದಾಗ ಬೇಸಿಗೆಯ ಬಿಸಿಲಿನ ಬಳಲಿಕೆಯನ್ನು ತೀರಿಸಿಕೊಳ್ಳಲು ಒಂದು ಮರದ ನೆರಳಿನಲ್ಲಿ ಕುಳಿತುಕೊಂಡನು. ಅವನು ಕುಳಿತಿದ್ದ ಮರವು ಕಲ್ಪವೃಕ್ಷ ವಾಗಿತ್ತು. ಅದು ಅವನಿಗೆ ತಿಳಿದಿರಲಿಲ್ಲ ಆ ವೃಕ್ಷದ ಕಳಗೆ ಕುಳಿತು ಕೊಂಡು ಅವನು ಕುಡಿಯಲು ನೀರು ಬೇಡಲು ಅದು ಕಲ್ಪವೃಕ್ಷವಾದುದರಿಂದ ಅವನ ಇಚ್ಛೆಯಂತೆ ನೀರು ಸಿದ್ಧವಾಯಿತು. ನಂತರ ಆಹಾರ ಬೇಡಲು ಅದೂ ಸಿದ್ಧವಾಯಿತು. ನಂತರ ಮಲಗಲು ಹಾಸಿಗೆಯನ್ನು ಬೇಡಲು ಅದೂ ಸಿದ್ಧವಾಯಿತು. ಹೀಗೆ ಬೇಡಿದ್ದೆಲ್ಲಾ ಸಿದ್ಧವಾದದ್ದನ್ನು ನೋಡಿ ವಿಸ್ಮಯ ದಿಂದ ಭೂತವೇನೋ ಅಂದುಕೊಂಡರೆ ಭೂತವೂ ಆಯಿತು ! ತಿನ್ನುತ್ತ ದೇನೋ ಅಂದರೆ ತಿಂದೇಬಿಟ್ಟಿತು!

ನೋಡಿರಿ, ಕಲ್ಪವೃಕ್ಷವು ಅನ್ಯಪುರುಷರ ಸಂಕಲ್ಪ ರೂಪ ನಿಮಿತ್ತದಿಂದ ಸ್ವಸ್ವಭಾವದಿಂದ ಬೇಡಿದ ಫಲವನ್ನು ಕೊಡುವಂತೆ ಈಶ್ವರನೂ ಸಹ ಫಲವನ್ನು ಕೊಡಲು ಸಮ್ಮುಖವಾದ ಜೀವರ ಅದೃಷ್ಟ ರೂಪ ನಿಮಿತ್ತದಿಂದ ಸ್ವಭಾವಾನುಸಾರವಾಗಿ ಇಚ್ಛಾ, ಜ್ಞಾನ, ಪ್ರಯತ್ನಗಳನ್ನು ಮಾಡುತ್ತಾನೆ. ಆ ಈಶ್ವರ, ಇಚ್ಛಾ ಮೊದಲಾದ ಒಂದೊಂದು ವೃತ್ತಿಯೂ ಸೃಷ್ಟಿಯ ಆರಂಭ ಕಾಲದಲ್ಲಿ ಉತ್ಪನ್ನವಾಗುತ್ತದೆ ಉತ್ಪನ್ನವಾದ ಆ ವೃತ್ತಿಯು ಪ್ರಳಯದವರೆಗೆ ನಾಶವಾಗದೆ ಹಾಗೆಯೇ ಇರುತ್ತದೆ. ಆದುದರಿಂದ ಅದಕ್ಕೆ ನಿತ್ಯವೆನ್ನುತ್ತಾರೆ. ಮತ್ತು ಆ ವೃತ್ತಿಯು ಭೂತ, ಭವಿಷ್ಯ, ವರ್ತಮಾನ ಕಾಲಗತಗಳಾದ ಸರ್ವ ಪದಾರ್ಥಗಳನ್ನೂ ವಿಷಯೀಕರಿಸುತ್ತದೆ. ಆದುದರಿಂದ ಸರ್ವ ಕಾಲದಲ್ಲಿಯೂ ಸೃಷ್ಟಿ-ಪ್ರಲಯ, ಶೀತ-ಉಷ್ಣ, ವೃಷ್ಟಿ ಆಗದೆ ಸಮಯಾನುಸಾರವಾಗಿ ಉಂಟಾಗುತ್ತದೆ.

## ಸೂಕ್ಷ್ಮ ಸೃಷ್ಟಿ ನಿರೂಪಣಾ

ಗುಣಸಹಿತ ಪಂಚಭೂತಗಳ ಉತ್ಪತ್ತಿ ಈಶ್ವರನ ಇಚ್ಛೆಯಿಂದ ಮಾಯೆಯು ತಮೋಗುಣ ಪ್ರಧಾನವಾಗುತ್ತದೆ. ಅಂದರೆ ಸ್ವಪತಿಯು ಶುಕ್ರರೂಪ ಬೀಜವನ್ನು ಧರಿಸಿ, ಪುತ್ರರೂಪ ಗರ್ಭವನ್ನು ಧರಿಸಿದ ಗರ್ಭವತಿ ಸ್ತ್ರೀಯು ಪ್ರಸವಕ್ಕಿಂತ ಪೂರ್ವ ಸಂತತಿ ಲಾಭದ ನಿಮಿತ್ತದಿಂದ ಪ್ರಸನ್ನವಾಗಿರುವುದರಿಂದ ಸತ್ವಗುಣ ಪ್ರಧಾನದಂತಿರುವಳು ನಂತರ ಪ್ರಸವ ಕಾಲದಲ್ಲಿ ವೇದನಾರೂಪ ನಿಮಿತ್ತದಿಂದ ಪ್ರಸನ್ನತೆಯು ತಿರೋಧಾನವಾಗಿ ಶೂನ್ಯಚಿತ್ತದವಳಾದುದರಿಂದ ತಮೋಗುಣ ಪ್ರಧಾನದಂತೆ ಇರುವಳು.

ಮತ್ತೊಂದು ರೀತಿ ಮೊದಲು ಬಿಳೀ ಬಣ್ಣವುಳ್ಳ ಮೇಘವು ಮಳೆಗಾಲದಲ್ಲಿ ಕಪ್ಪು ಬಣ್ಣದ್ದಾಗುವುದು ಇದರಂತೆ ಸೃಷ್ಟಿಗಿಂತ ಮೊದಲು ಬ್ರಹ್ಮದ ಪ್ರತಿಬಿಂಬ ರೂಪವಾದ ಜಗದ್ಬೀಜವನ್ನು ಧರಿಸಿದ್ದಾಗಿಯೂ, ಮತ್ತು ಅನಂತ ಜೀವರನ್ನು ಧರಿಸಿದ್ದಾಗಿಯೂ, ಗರ್ಭವತಿಯಾದ ಶುದ್ಧ ಸತ್ವ ಪ್ರಧಾನವಾದ ಮಾಯೆಯು ಇರುತ್ತದೆ ಆ ಮಾಯೆಯು ಸೃಷ್ಟಿಯ ಆರಂಭ ಕಾಲದಲ್ಲಿ

ಶುದ್ಧ ಸತ್ವ ಪ್ರಧಾನವಾದ ತನ್ನ ಸ್ವರೂಪವನ್ನು ತಿರೋಧಾನ ಮಾಡಿಕೊಂಡು, ಸೃಷ್ಟಿಗೆ ಯೋಗ್ಯವಾದ ತಮೋಗುಣ ಪ್ರಧಾನವಾದ ಪ್ರಕೃತಿ ರೂಪವನ್ನು ಧರಿಸುತ್ತದೆ.

ಈ ರೀತಿ ಮಾಯೆಯು ಈಶ್ವರನ ಇಚ್ಛೆಯಿಂದ ತಮಃಪ್ರಧಾನವಾದ ಮೇಲೆ, ಅದರಿಂದ ಆಕಾಶ, ವಾಯು, ತೇಜಸ್ಸು, ಜಲ, ಪೃಥ್ವಿಗಳೆಂಬ ಪಂಚಭೂತಗಳು ರಚಿಸಲ್ಪಟ್ಟವು ಈ ಭೂತಗಳಲ್ಲಿ ಕ್ರಮವಾಗಿ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಐದು ಗುಣಗಳಿರುತ್ತವೆ ಈ ಐದು ಗುಣಗಳಲ್ಲಿ ಪ್ರತ್ಯೇಕವಾಗಿ ಒಂದೊಂದು ಗುಣವು ಸ್ವಾಭಾವಿಕವಾಗಿರುತ್ತದೆ, ಅಂದರೆ ಸ್ವತಃಸಿದ್ಧವಾಗಿರುತ್ತದೆ. ಮತ್ತು ಒಂದರಿಂದೊಂದು ಉತ್ಪನ್ನವಾಗುವುದರಿಂದ ಕಾರಣ ಪದಾರ್ಥದ ಗುಣವು ಕಾರ್ಯದಲ್ಲಿಯೂ ಬರುತ್ತದೆ. ಈ ಕಾರ್ಯದಲ್ಲಿ ಬಂದ ಗುಣವನ್ನು ಆನುಸಂಗಿಕವೆನ್ನುತ್ತಾರೆ. ಈ ಪ್ರಕಾರವಾಗಿ ನೋಡಿದರೆ ಆಕಾಶದಲ್ಲಿ ಒಂದು ಗುಣ, ವಾಯುವಿನಲ್ಲಿ ಎರಡು, ತೇಜಸ್ಸಿನಲ್ಲಿ ಮೂರು, ಜಲದಲ್ಲಿ ನಾಲ್ಕು, ಪೃಥ್ವಿಯಲ್ಲಿ ಐದು ಗುಣಗಳಿರುತ್ತವೆ ಇವುಗಳ ವಿವರವು ಕೆಳಗಿನಂತೆ ಇದೆ.

೧. ಆಕಾಶದಲ್ಲಿ ಪ್ರತಿಧ್ವನಿರೂಪ ಶಬ್ದ.

೨. ವಾಯುವಿನಲ್ಲಿ ಬಿಸ್ ಬಿಸ್ ಎಂಬ ಶಬ್ದ. ಶೀತೋಷ್ಣ ಮೃದು ಕಠೋರಕ್ಕಿಂತ ಭಿನ್ನವಾದ ಸ್ಪರ್ಶ ಇದರಲ್ಲಿ ಶಬ್ದ ಪಿತ್ರಾರ್ಜಿತ, ಸ್ಪರ್ಶ ಸ್ವಯಾರ್ಜಿತ.

೩. ತೇಜಸ್ಸಿನಲ್ಲಿ ಭುಗು ಭುಗು ಶಬ್ದ. ಉಷ್ಣಸ್ಪರ್ಶ, ಪ್ರಭಾರೂಪ; ಇವುಗಳಲ್ಲಿ ಶಬ್ದ, ಸ್ಪರ್ಶ ಈ ಎರಡು ಪಿತ್ರಾರ್ಜಿತ, ರೂಪ ಸ್ವಂತದ್ದು.

೪. ಜಲದಲ್ಲಿ ಜುಳು ಜುಳು ಶಬ್ದ. ಶೀತ ಸ್ಪರ್ಶ, ಶುಕ್ಲರೂಪ, ಮಧುರ ರಸ ಇವುಗಳಿರುತ್ತವೆ. ಇವುಗಳಲ್ಲಿ ಶಬ್ದ, ಸ್ಪರ್ಶ, ರೂಪ ಈ ಮೂರು ಪಿತ್ರಾರ್ಜಿತ, ರಸ ಸ್ವಂತದ್ದು.

೫. ಪೃಥ್ವಿಯಲ್ಲಿ ಕಡ ಕಡ ಶಬ್ದ. ಉಷ್ಣಶೀತಲಗಳಿಂದ ವಿಲಕ್ಷಣ

ವಾದ ಕಠಿಣ ಸ್ಪರ್ಶ, ಶ್ವೇತ ಪೀತಾದಿ ಸಪ್ತವಿಧ ರೂಪ, ಮಧುರ ಆಮ್ಲಾದಿ ಷಡ್ವಿಧ ರಸ, ಸುಗಂಧ ದುರ್ಗಂಧ ರೂಪವಾದ ದ್ವಿವಿಧ ಗಂಧ ಇರುತ್ತವೆ. ಇವುಗಳಲ್ಲಿ ಶಬ್ದ, ಸ್ಪರ್ಶ, ರೂಪ ಮತ್ತು ರಸಗಳು ಪಿತ್ರಾರ್ಜಿತ, ಗಂಧ ಸ್ವಯಾರ್ಜಿತ

ಈ ವಿಧವಾಗಿ ಆಕಾಶದಲ್ಲಿ ಒಂದು, ವಾಯುವಿನಲ್ಲಿ ಎರಡು, ಅಗ್ನಿಯಲ್ಲಿ ಮೂರು, ಜಲದಲ್ಲಿ ನಾಲ್ಕು, ಪೃಥ್ವಿಯಲ್ಲಿ ಐದು ಗುಣಗಳಿರುತ್ತವೆ.

ಸರ್ವಭೂತಗಳಿಗೆ ಮೂಲಕಾರಣನು ಈಶ್ವರ ಅವನಲ್ಲಿ ಮಾಯಾ ಭಾಗ ಮತ್ತು ಚೈತನ್ಯಭಾಗವೆಂದು ಎರಡು ವಿಭಾಗಗಳಿರುತ್ತವೆ. ಅವುಗಳಲ್ಲಿ ಮಿಥ್ಯತ್ವವು ಮಾಯೆಗೆ ಸಂಬಂಧಪಟ್ಟದ್ದು ಸತ್ತಾ ಸ್ಫೂರ್ತಿಯು ಚೈತನ್ಯಕ್ಕೆ ಸೇರಿದ್ದು. ಈ ಎರಡೂ ಸರ್ವಭೂತಗಳಲ್ಲಿ ಪರಿಪೂರ್ಣವಾಗಿ ತುಂಬಿರುತ್ತವೆ.

## ಅಂತಃಕರಣದ ಉತ್ಪತ್ತಿ

ಪಂಚಭೂತಗಳ ಸತ್ವಗುಣಗಳು ಸೇರಿ ಅಂತಃಕರಣವು ಉತ್ಪನ್ನವಾಗುತ್ತದೆ. ಅಂತಃಕರಣವು ಜ್ಞಾನಕ್ಕೆ ಹೇತುವಾಗಿದೆ ಸತ್ವಗುಣದಿಂದಲೇ ಜ್ಞಾನೋತ್ಪತ್ತಿಯೆಂದು ಅಂಗೀಕರಿಸಲ್ಪಟ್ಟಿದೆ. ಈ ಕಾರಣದಿಂದ ಅಂತಃಕರಣವು ಭೂತಗಳ ಸತ್ವಗುಣದ ಕಾರ್ಯವೆಂದು ಸ್ಪಷ್ಟವಾಗುತ್ತದೆ ಪಂಚಭೂತಗಳ ಕಾರ್ಯವಾದ ಪಂಚಜ್ಞಾನೇಂದ್ರಿಯಗಳಿಗೆ ಸಹಾಯವಾಗುವುದರಿಂದ ಪಂಚಭೂತಗಳ ಮಿಶ್ರಸತ್ವ ಗುಣದಿಂದ ಅಂತಃಕರಣದ ಉತ್ಪತ್ತಿಯೆಂದು ಹೇಳಲ್ಪಟ್ಟಿದೆ.

ಪ್ರಶ್ನೆ ಇದಕ್ಕೆ ಅಂತಃಕರಣವೆಂದು ಹೆಸರು ಬರಲು ಕಾರಣವೇನು ?

ಉತ್ತರ : "ಅಂತಃ" ಅಂದರೆ ಒಳಗೆ ಇದ್ದು ಅಂದರೆ ದೇಹದೊಳಗೆ ಇದ್ದು, ಜ್ಞಾನಕ್ಕೆ ಹೇತುವಾಗಿರುವುದರಿಂದ ಅಂದರೆ ಕರಣವಾಗಿರುವುದರಿಂದ ಇದಕ್ಕೆ ಅಂತಃಕರಣವೆಂದು ಹೆಸರು. ಮತ್ತು ಇದು ಭೂತಗಳ ಸತ್ವಗುಣ ಕಾರ್ಯವಾದುದರಿಂದ ಇದಕ್ಕೆ ಸತ್ವವೆಂದು ಮತ್ತೊಂದು ಹೆಸರು

ಅಂತಃಕರಣದ ಪರಿಣಾಮ ಅಂದರೆ ಕಾರ್ಯಕ್ಕೆ ವೃತ್ತಿಯೆನ್ನುತ್ತಾರೆ. ಈ ವೃತ್ತಿಯು ನಾಲ್ಕು ವಿಧ.

೧. ಸಂಕಲ್ಪ ವಿಕಲ್ಪ ವೃತ್ತಿ ಮನಸ್ಸು

೨) ಪದಾರ್ಥಗಳ ಮೇಲು ಕೀಳುಗಳ ಸ್ವರೂಪವನ್ನು ನಿಶ್ಚಯಿಸುವ ವೃತ್ತಿಗೆ ಬುದ್ಧಿಯೆನ್ನುತ್ತಾರೆ.

೩) ಚಿಂತನ ಮಾಡುವ ವೃತ್ತಿಯೇ ಚಿತ್ತ

೪) "ಅಹಂ" ಎಂಬ ಅಭಿಮಾನ ವೃತ್ತಿಯು ಅಹಂಕಾರ

## ಪಂಚಪ್ರಾಣಗಳ ಉತ್ಪತ್ತಿ

ಪಂಚಭೂತಗಳ ಮಿಶ್ರ ರಜೋಗುಣದ ಅಂಶದಿಂದ ಪ್ರಾಣದ ಉತ್ಪತ್ತಿಯಾಗುತ್ತದೆ. ಆ ಪ್ರಾಣವು ಒಂದೇ ಆದರೂ ಕ್ರಿಯಾಭೇದದಿಂದಲೂ, ಸ್ಥಾನಭೇದದಿಂದಲೂ ಐದು ಪ್ರಕಾರವಾಗಿದೆ.

೧) ಹೃದಯ ಸ್ಥಾನದಲ್ಲಿದ್ದು, ಕ್ಷುತ್ಪಿಪಾಸೆಗಳನ್ನು ಮಾಡುವುದಕ್ಕೆ ಪ್ರಾಣವೆನ್ನುತ್ತಾರೆ.

೨) ಗುದಸ್ಥಾನದಲ್ಲಿದ್ದು, ಮಲ ಮೂತ್ರಗಳನ್ನೂ ಅಧೋನಯನವನ್ನೂ ಮಾಡುವ ಕರ್ಮವುಳ್ಳದ್ದು ಅಪಾನ.

೩) ನಾಭಿ ಸ್ಥಾನದಲ್ಲಿದ್ದು, ತಿಂದ ಅನ್ನ, ಜಲವನ್ನು ಸಮೀಕರಣ ಮಾಡುವ ಕರ್ಮವುಳ್ಳದ್ದು ಸಮಾನ.

೪) ಕಂಠ ಸ್ಥಾನದಲ್ಲಿದ್ದು, ಶ್ವಾಸೋಚ್ಛ್ವಾಸಗಳನ್ನು ಮಾಡುವ ಕರ್ಮವುಳ್ಳದ್ದು ಉದಾನ.

೫) ಸರ್ವ ಶರೀರದಲ್ಲಿದ್ದು, ರಸದ ಮೇಲನವನ್ನು ಮಾಡುವ ಕರ್ಮವುಳ್ಳದ್ದು ವ್ಯಾನ.

ಕೆಲವು ಗ್ರಂಥಗಳಲ್ಲಿ ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ ಈ ಐದನ್ನು ಉಪಪ್ರಾಣವೆನ್ನುತ್ತಾರೆ. ಇವುಗಳನ್ನು ಸೇರಿಸಿದರೆ ಪ್ರಾಣಗಳು ಹತ್ತು ಎಂದು ಹೇಳಬೇಕಾಗುತ್ತದೆ. ಇವುಗಳಲ್ಲಿ ಉದ್ಗಾರ ಮಾಡುವ ವಾಯುವಿಗೆ ನಾಗವೆನ್ನುತ್ತಾರೆ ನೇತ್ರಗಳನ್ನು ಮುಚ್ಚಿ ತೆರೆಯಲು ಸಾಧನವಾದ ವಾಯುವಿಗೆ ಕೂರ್ಮವೆಂದೂ, ಸೀನು ಬರುವಂತೆ ಮಾಡುವ ವಾಯುವಿಗೆ ಕೃಕರವೆಂದೂ, ಆಕಳಿಕೆಯನ್ನುಂಟುಮಾಡುವ ವಾಯುವಿಗೆ ಧನಂಜಯವೆಂದೂ ಹೆಸರು. ಇವುಗಳು ಪಂಚಭೂತಗಳ ಬೇರೆ ಬೇರೆ ರಜೋಗುಣದಿಂದ

ಒಂದೊಂದು ವಾಯುವು ಉತ್ಪತ್ತಿಯಾಗುವುದೆಂದೂ ಹೇಳಿದೆ ಮತ್ತು ಮೇಲೆ ಹೇಳಿದ ಪಂಚಪ್ರಾಣಗಳಿಗೂ ಪೃಥಕ್ ಅಂಶದಿಂದ ಉತ್ಪತ್ತಿಯನ್ನು ಹೇಳಿದೆ ಹೀಗಿದ್ದರೂ ಅದ್ವೈತ ಸಿದ್ಧಾಂತದಲ್ಲಿ ಈ ಪ್ರಕ್ರಿಯೆ ಇಲ್ಲ. ಶ್ರೀ ವಿದ್ಯಾರಣ್ಯ ಸ್ವಾಮಿಗಳೂ, ಶ್ರೀ ವಾರ್ತಿಕಕಾರರೂ ಸೂಕ್ಷ್ಮಶರೀರ ದಲ್ಲಿಯೂ ಪಂಚಕೋಶದಲ್ಲಿಯೂ ನಾಗ, ಕೂರ್ಮ ಮೊದಲಾದವುಗಳನ್ನೂ ಗ್ರಹಿಸಿಲ್ಲ ಇವರೆಲ್ಲರೂ ಪ್ರಾಣಾದಿಗಳ ಉತ್ಪತ್ತಿ ಮಿಶ್ರ ರಜೋಗುಣಾಂಶದಿಂದ ಎಂದು ಹೇಳಿದ್ದಾರೆ

ಪ್ರಾಣವು ವಿಕ್ಷೇಪರೂಪವಾಗಿದೆ ವಿಕ್ಷೇಪವು ರಜೋಗುಣದ ಸ್ವಭಾವ ಆದುದರಿಂದ ಭೂತಗಳ ರಜೋಗುಣದ ಅಂಶದಿಂದ ಪ್ರಾಣದ ಉತ್ಪತ್ತಿಯೆಂದು ಹೇಳಿದೆ.

## ದಶೇಂದ್ರಿಯಗಳ ಉತ್ಪತ್ತಿ

ಪ್ರಶ್ನೆ . ದಶೇಂದ್ರಿಯಗಳ ಉತ್ಪತ್ತಿಯು ಹೇಗೆ?

ಉತ್ತರ : ಒಂದೊಂದು ಭೂತದ ಬೇರೆ ಬೇರೆ ಸತ್ವಗುಣಾಂಶದಿಂದ ಐದು ಜ್ಞಾನೇಂದ್ರಿಯಗಳೂ, ಒಂದೊಂದು ಭೂತದ ರಜೋಗುಣಾಂಶದಿಂದ ಐದು ಕರ್ಮೇಂದ್ರಿಯಗಳೂ ಉತ್ಪತ್ತಿಯಾಗುತ್ತವೆ ಹೇಗೆಂದರೆ –

೧) ಆಕಾಶ ಭೂತದ ಸತ್ವಗುಣಾಂಶದಿಂದ ಶ್ರೋತ್ರ, ರಜೋ ಗುಣಾಂಶದಿಂದ ವಾಕ್ಕು ಉತ್ಪತ್ತಿಯಾದವು ಶ್ರೋತ್ರವು ಶಬ್ದವನ್ನು ಗ್ರಹಿಸಿದರೆ ವಾಕ್ಕು ಶಬ್ದವನ್ನು ಬಿಡುತ್ತದೆ

೨) ವಾಯು ಭೂತದ ಸತ್ವಗುಣಾಂಶದಿಂದ ತ್ವಕ್ಕು, ವಾಯು ರಜೋಗುಣಾಂಶದಿಂದ ಹಸ್ತಗಳು ಉತ್ಪತ್ತಿಯಾದವು ತ್ವಗೀಂದ್ರಿಯವು ಸ್ಪರ್ಶವನ್ನು ಗ್ರಹಿಸುತ್ತದೆ. ಹಸ್ತವು ತೊಲಗಿಸುತ್ತದೆ.

ಉದಾ . ಬೆನ್ನ ಮೇಲೆ ಹುಳು ಹರಿದಾಡುತ್ತಿದ್ದರೆ ತ್ವಗೀಂದ್ರಿಯವು ತಿಳಿದುಕೊಳ್ಳುತ್ತದೆ ಹಸ್ತವು ಅದನ್ನು ತೊಲಗಿಸುತ್ತದೆ

೩) ತೇಜಸ್ಸಿನ ಸತ್ವಗುಣಾಂಶದಿಂದ ನೇತ್ರ, ತೇಜಸ್ಸಿನ ರಜೋ ಗುಣಾಂಶದಿಂದ ಪಾದ ಉತ್ಪತ್ತಿಯಾದವು. ರೂಪವೆಂಬ ವಿಷಯವನ್ನು ನೇತ್ರವು ಗ್ರಹಿಸುತ್ತದೆ. ಪಾದವು ತೊಲಗಿಸುತ್ತದೆ.

ಉದಾ : ದೂರದಲ್ಲಿ ಬಿದ್ದಿರುವ ಮಾವಿನ ಹಣ್ಣನ್ನು ನೇತ್ರವು ನೋಡುತ್ತದೆ. ಪಾದವು ಅಲ್ಲಿಗೆ ಹೋಗುತ್ತದೆ

೪) ಜಲ ಭೂತದ ಸತ್ವಗುಣಾಂಶದಿಂದ ರಸನ, ಜಲಭೂತದ ರಜೋಗುಣದಿಂದ ಉಪಸ್ಥ ಇವು ಉತ್ಪತ್ತಿಯಾಗುತ್ತವೆ ರಸನೇಂದ್ರಿಯವು ರಸವನ್ನು ಗ್ರಹಿಸಿದರೆ, ಉಪಸ್ಥೇಂದ್ರಿಯವು ರಸವನ್ನು ತ್ಯಜಿಸುತ್ತದೆ

೫) ಪೃಥ್ವಿಭೂತದ ಸತ್ವಗುಣಾಂಶದಿಂದ ಘ್ರಾಣ, ಪೃಥ್ವಿ ಭೂತದ ರಜೋಗುಣದಿಂದ ಗುದ ಇವು ಉತ್ಪತ್ತಿಯಾದವು. ಘ್ರಾಣವು ಗಂಧವನ್ನು ಗ್ರಹಿಸುತ್ತದೆ. ಗುದವು ಗಂಧವನ್ನು ತ್ಯಜಿಸುತ್ತದೆ.

ಸಾರಾಂಶ ಜ್ಞಾನವು ಸತ್ವಗುಣದಿಂದ, ಕ್ರಿಯೆಯು ರಜೋಗುಣದಿಂದ ಸಂಭವಿಸುವುದರಿಂದ ಭೂತಗಳ ಸತ್ವಗುಣಾಂಶದಿಂದ ಜ್ಞಾನೇಂದ್ರಿಯಗಳೂ, ರಜೋಗುಣಾಂಶದಿಂದ ಕರ್ಮೇಂದ್ರಿಯಗಳೂ ಉತ್ಪತ್ತಿಯಾದವೆಂದು ತಿಳಿಯಬೇಕು.

## ಸೂಕ್ಷ್ಮ ಸೃಷ್ಟಿಯ ಸಂಪೂರ್ಣತೆ

॥ಸವೈಯ ಛಂದ॥

ಭೂತ ಅಪಂಚೀಕೃತ ಔ ಕಾರಜ ।
ಇತನೀ ಸೂಛಮ ಸೃಷ್ಟಿ ಪಿಛಾನ ॥

ಪಂಚೀಕೃತ ಭೂತನ ತೈಂ ಉಪಜ್ಯೋ ।
ಸ್ಥೂಲ ಪಸಾರೋ ಸಾರೋ ಭಾನ ॥

ಕಾರನ ಸೂಛಮ ಥೂಲ ದೇಹ ಅರು ।
ಪಂಚ ಕೋಸ ಇನ ಹೀ ಮೈಂ ಜಾನ ॥

ಕರಿ ವಿವೇಕ ಲಖಿ ಆತಮ ನ್ಯಾರೋ ।
ಮುಂಜ ಇಷೀಕಾ ತೈಂ ಜ್ಯೂಂ ಭಾನ॥ ॥೧೫೭॥

ಅರ್ಥ : ಅಪಂಚೀಕೃತ ಭೂತಗಳು ಐದು. ಇವುಗಳ ಕಾರ್ಯವಾದ ಅಂತಃಕರಣ ಚತುಷ್ಟಯ. ಪಂಚಪ್ರಾಣಗಳು ಐದು ಪಂಚಕರ್ಮೇಂದ್ರಿಯ ಗಳು ಐದು. ಈ ಇಪ್ಪತ್ತೊಂದು ತತ್ತ್ವಗಳು ನೇರಿ ಸೂಕ್ಷ್ಮಸೃಷ್ಟಿಯೆನಿಸು ತ್ತದೆ

ಸೂಕ್ಷ್ಮ ಸೃಷ್ಟಿಯ ಜ್ಞಾನವು ಜ್ಞಾನೇಂದ್ರಿಯಗಳಿಂದ ಆಗಲಾರದು. ನೇತ್ರ ನಾಸಿಕ ಮೊದಲಾದ ಗೋಲಕಗಳು ಇಂದ್ರಿಯಗಳ ವಿಷಯಸ್ಥಾನವಾಗಿ ದ್ದರೂ ಆ ಗೋಲಕದಲ್ಲಿರುವ ಇಂದ್ರಿಯಗಳು ಯಾವ ಇಂದ್ರಿಯಗಳಿಗೂ ವಿಷಯಗಳಲ್ಲ.

ಸೂಕ್ಷ್ಮಸೃಷ್ಟಿಯ ಉತ್ಪತ್ತಿಯಾದ ನಂತರ ಈಶ್ವರೇಚ್ಛೆಯಿಂದ ಸ್ಥೂಲ ಸೃಷ್ಟಿಗಾಗಿ ಭೂತಗಳ ಪಂಚೀಕರಣವಾಗಿದೆ.

## ಪಂಚೀಕರಣ

ಪಂಚೀಕರಣವೆಂದರೇನು ? ಐದು ಪಂಚಭೂತಗಳನ್ನು ಸೇರಿಸಿ ಒಂದೇ ಭೂತವನ್ನಾಗಿ ಮಾಡುವುದಕ್ಕೆ ಪಂಚೀಕರಣವೆನ್ನುತ್ತಾರೆ ಪಂಚೀಕರಣ ಮಾಡಿದ್ದನ್ನು ಶಾಸ್ತ್ರದಲ್ಲಿ ಪಂಚೀಕೃತವೆನ್ನುತ್ತಾರೆ.

ಪಂಚೀಕರಣವು ಎರಡು ವಿಧ :

| | ಆಕಾಶ | | ವಾಯು | | ತೇಜಸ್ಸು | | ಜಲ | | ಪೃಥ್ವಿ | |
|---|---|---|---|---|---|---|---|---|---|---|
| ಪ್ರಥಮ ಪ್ರಕಾರ | $\frac{1}{2}$ | + | $\frac{1}{8}$ | + | $\frac{1}{8}$ | + | $\frac{1}{8}$ | + | $\frac{1}{8}$ | = 1 ಆಕಾಶ |

ಇದರಂತೆ ಎಲ್ಲಾ ಭೂತಗಳನ್ನು ತಿಳಿಯಬೇಕು

| | ಆಕಾಶ | | ವಾಯು | | ತೇಜಸ್ಸು | | ಜಲ | | ಪೃಥ್ವಿ |
|---|---|---|---|---|---|---|---|---|---|
| ದ್ವಿತೀಯ ಪ್ರಕಾರ | $\frac{21}{25}$ | + | $\frac{1}{25}$ | + | $\frac{1}{25}$ | + | $\frac{1}{25}$ | + | $\frac{1}{25}$ |

ಇದರಂತೆ ಮಿಕ್ಕ ನಾಲ್ಕು ಭೂತಗಳನ್ನು ತಿಳಿಯಬೇಕು. ಅನೇಕ ಗ್ರಂಥಗಳಲ್ಲಿ ಈ ಪಂಚೀಕರಣದ ರೀತಿಯು ಅನೇಕ ವಿಧವಾಗಿ ಹೇಳಲ್ಪಟ್ಟಿ ದ್ದರೂ ಅವೆಲ್ಲವೂ ಈ ಎರಡರಲ್ಲಿಯೇ ಅಂತರ್ಭೂತಗಳು.

ಪಂಚೀಕರಣದ ಪ್ರಥಮ ರೀತಿಯಂತೆ ಸರ್ವ ಭೂತಗಳಲ್ಲಿ ಅರ್ಧಾರ್ಧ ಭಾಗವು ತಮ್ಮ ತಮ್ಮದೇ ಆಗಿಯೂ, ಮಿಕ್ಕ ಅರ್ಧ ಭಾಗವು ಉಳಿದ ನಾಲ್ಕು ಭೂತಗಳದ್ದಾಗಿಯೂ ಇರುತ್ತದೆ. ಆದುದರಿಂದ ಅನ್ಯ ಭೂತಗಳ ನಾಲ್ಕು

ಭಾಗಗಳಿಂದ ತನ್ನ ಅರ್ಧಭಾಗವು ತಿರೋಧಾನವಾಗುವುದರಿಂದ ಆಕಾಶಾದಿ ಪ್ರತ್ಯೇಕ ಭೂತಗಳು ಪ್ರತ್ಯೇಕ ಆಗಬಾರದಲ್ಲವೆ? ಆದು ಆಗುತ್ತದೆ ಆದುದ ರಿಂದ ಮೇಲಿನ ಪಂಚೀಕರಣದ ರೀತಿಯು ಅಸಂಭಾವ್ಯ ಎಂಬ ಶಂಕೆಯು ಕೆಲವು ಮುಮುಕ್ಷುಗಳ ಮನಸ್ಸಿನಲ್ಲಿರುತ್ತದೆ ಅದರ ನಿವಾರಣೆಗಾಗಿ ಇಲ್ಲಿ ಪ್ರಕಾರಾಂತವನ್ನು ಹೇಳಿದೆ

ಪ್ರಥಮ ಪ್ರಕಾರದ ಪಂಚೀಕರಣಕ್ಕೆ ಉದಾಹರಣೆ:

ಶಿವ, ಶಂಕರ, ರಾಮ, ಕೃಷ್ಣ ಮತ್ತು ನಾರಾಯಣರೆಂಬ ಐದು ಜನ ಸ್ನೇಹಿತರಿದ್ದರು ಅವರಲ್ಲಿ ಪ್ರತಿ ಒಬ್ಬರಲ್ಲಿ ಒಂದೊಂದು ರೂಪಾಯಿಯಿತ್ತು ಅವರಲ್ಲಿ ಶಿವನು ತನ್ನ ರೂಪಾಯಿಯನ್ನು ಎರಡು ಭಾಗ ಮಾಡಿ ಅರ್ಧ ರೂಪಾಯಿಯನ್ನು ತನ್ನಲ್ಲಿ ಇಟ್ಟುಕೊಂಡು, ಉಳಿದ ಅರ್ಧ ರೂಪಾಯಿಯಲ್ಲಿ ಎರಡಾಣೆಯನ್ನು ಶಂಕರನಿಗೆ, ಎರಡಾಣೆಯನ್ನು ರಾಮನಿಗೆ, ಎರಡಾಣೆಯನ್ನು ಕೃಷ್ಣನಿಗೆ, ಎರಡಾಣೆಯನ್ನು ನಾರಾಯಣನಿಗೆ ಕೊಟ್ಟನು. ಶಂಕರನಿಂದ, ರಾಮನಿಂದ, ಕೃಷ್ಣನಿಂದ, ನಾರಾಯಣನಿಂದ ಶಿವನು ಎರಡೆರಡಾಣೆಗಳನ್ನು ತೆಗೆದುಕೊಂಡು ಒಂದು ರೂಪಾಯಿಯನ್ನು ಭರ್ತಿಮಾಡಿಕೊಂಡನು. ಮೊದಲು ತನ್ನದೇ ಆದ ಒಂದು ರೂಪಾಯಿ ಇತ್ತು ಈಗ ಐದೂ ಜನರಿಂದ ಸೇರಿದ ರೂಪಾಯಿ ಆಯಿತು ತನ್ನದೇ ಆದ ರೂಪಾಯಿಗೆ ಅಪಂಚೀಕೃತವೆಂದೂ, ಎಲ್ಲರದೂ ಸೇರಿದ ರೂಪಾಯಿಗೆ ಪಂಚೀಕೃತವೆಂದೂ ಅನ್ನಬಹುದು.

ಇದರಂತೆ ಐದೂ ಜನರು ಮಾಡಿದರು.

ಎರಡನೇ ಪ್ರಕಾರದ ಪಂಚೀಕರಣಕ್ಕೆ ಉಪಮಾನ:

ಆಕಾಶದ ಹತ್ತಿರ ಅಮೆರಿಕಾಕ್ಕೆ ಸಂಬಂಧಪಟ್ಟ ಇಪ್ಪತ್ತೈದು ಪೈಸೆ ಗಳಿರುತ್ತವೆ ವಾಯುವಿನಲ್ಲಿ ವಿಲಾಯತಿಯ ಇಪ್ಪತ್ತೈದು ಪೈಸೆಗಳಿವೆ. ಅದೇ ಪ್ರಕಾರ ತೇಜನಲ್ಲಿ ಟಿಬೇಟದ ಇಪ್ಪತ್ತೈದು ಪೈಸೆ, ಜಲದ ಹತ್ತಿರ ಜಪಾನದ ಇಪ್ಪತ್ತೈದು ಪೈಸೆ, ಪೃಥ್ವಿಯೆಂಬವನಲ್ಲಿ ಪಾಕಿಸ್ತಾನದ ಇಪ್ಪತ್ತೈದು ಪೈಸೆಗಳಿರುವುದೆಂದು ತಿಳಿಯಿರಿ ಆಕಾಶವು ಅಮೆರಿಕಾದ ಒಂದು ಪೈಸಾ ವಾಯುವಿಗೆ ಕೊಟ್ಟು ಅವನಿಂದ ವಿಲಾಯತಿಯ ಒಂದು ಪೈಸಾ ತೆಗೆದುಕೊಂಡನು. ಒಂದು ಪೈಸಾ ತೇಜಕ್ಕೆ ಕೊಟ್ಟು ಅವನಿಂದ

ಟಿಬೇಟಿನ ಒಂದು ಪೈಸಾ ತೆಗೆದುಕೊಂಡನು. ಮತ್ತೊಂದು ಪೈಸಾ ಜಲಕ್ಕೆ ಕೊಟ್ಟು ಅವನಿಂದ ಜಪಾನದ ಒಂದು ಪೈಸಾ ತೆಗೆದುಕೊಂಡನು. ಒಂದು ಪೈಸಾ ಪೃಥ್ವಿಗೆ ಕೊಟ್ಟು ಅವನಿಂದ ಪಾಕಿಸ್ತಾನದ ಒಂದು ಪೈಸಾ ತೆಗೆದು ಕೊಂಡನು. ಈ ಪ್ರಕಾರ ಆಕಾಶದಲ್ಲಿ ತನ್ನವೇ ಆದ ಇಪ್ಪತ್ತೊಂದು ಪೈಸೆ ಮತ್ತು ಮಿಕ್ಕ ನಾಲ್ವರಿಂದ ತೆಗೆದುಕೊಂಡ ನಾಲ್ಕು ಪೈಸೆ ಸೇರಿ ಇಪ್ಪತ್ತೈದು ಪೈಸೆಗಳಾದವು. ಮಿಕ್ಕ ಭೂತಗಳೂ ಇದರಂತೆ ಕೊಟ್ಟು ತೆಗೆದುಕೊಂಡ ನಂತರ ಎಲ್ಲರಲ್ಲಿಯೂ ಇಪ್ಪತ್ತೈದು ಪೈಸೆಗಳಾದವು ಇಪ್ಪತ್ತೊಂದು ತನ್ನವು, ನಾಲ್ಕು ಇತರೆಯವು – ಇವು ನೇರಿ ಇಪ್ಪತ್ತೈದು ಆದವು

ಒಂದೊಂದು ಭೂತದಲ್ಲಿ ಸಮನಾಗಿ ಎರಡು ಭಾಗ ಮಾಡಿ, ಒಂದು ಭಾಗವನ್ನು ಹಾಗೆಯೇ ಇಟ್ಟು ಎರಡನೇ ಭಾಗದಲ್ಲಿ ನಾಲ್ಕು ಭಾಗ ಮಾಡಿದರೆ ದೊಡ್ಡದೊಂದು, ಸಣ್ಣವು ನಾಲ್ಕು – ಈ ರೀತಿ ಐದು ಭಾಗಗಳಾಗುತ್ತವೆ. ದೊಡ್ಡ ಭಾಗವನ್ನು ಹಾಗೆಯೇ ಇಟ್ಟುಕೊಂಡು ಸಣ್ಣ ಭಾಗಗಳಲ್ಲಿ ಒಂದೊಂದು ಭಾಗವನ್ನು ಮಿಕ್ಕ ಭೂತಗಳ ದೊಡ್ಡ ಭಾಗದಲ್ಲಿ ಸೇರಿಸುತ್ತಾ ಹೋದರೆ, ಪ್ರತಿ ಒಂದು ಭೂತದಲ್ಲಿ ತನ್ನದಾದ ಅರ್ಧಭಾಗ, ಮಿಕ್ಕ ಭೂತಗಳ ಸಣ್ಣ ಭೂತಗಳು ನಾಲ್ಕು ನೇರಿ ಐದು – ಈ ರೀತಿ ಒಂದರಲ್ಲಿ ಒಂದನ್ನು ಕ್ರಮವಾಗಿ ನೇರಿಸುವ ಪದ್ಧತಿಗೆ ಪಂಚೀಕರಣವೆನ್ನುತ್ತಾರೆ.

ಎರಡನೇ ಪದ್ಧತಿ ಈ ಪದ್ಧತಿಯಲ್ಲಿಯೂ ಒಂದೊಂದು ಭೂತಗಳು ಎರಡು ಭಾಗವಾದವು, ಆದರೆ ಸಮನಾಗಿ ಅಲ್ಲ. ಒಂದು ಭೂತದಲ್ಲಿ ಐದು ಅಂಶಗಳನ್ನು ಮಾಡಿ ನಾಲ್ಕು ಅಂಶಗಳ ಭಾಗ ಒಂದು, ಒಂದು ಅಂಶದ ಭಾಗ ಒಂದು – ಈ ರೀತಿ ಭಾಗಗಳಾದವು ಇವುಗಳಲ್ಲಿ ನಾಲ್ಕು ಅಂಶದ ದೊಡ್ಡ ಭಾಗವನ್ನು ಹಾಗೆಯೇ ಇಟ್ಟು, ಉಳಿದ ಸಣ್ಣ ನಾಲ್ಕು ಭಾಗಗಳಲ್ಲಿ ಒಂದೊಂದು ಭೂತಕ್ಕೆ ಒಂದೊಂದು ಭಾಗವನ್ನು ಕೊಡುತ್ತಾ ಹೋಗುವುದಕ್ಕೆ ಪಂಚೀಕರಣವೆನ್ನುತ್ತಾರೆ.

## ಸ್ಥೂಲ ಬ್ರಹ್ಮಾಂಡದ ಉತ್ಪತ್ತಿ

ಪಂಚೀಕೃತ ಭೂತಗಳಿಂದ ಇಂದ್ರಿಯಗಳಿಗೆ ವಿಷಯವಾದ ಸ್ಥೂಲ

ಬ್ರಹ್ಮಾಂಡವು ಉತ್ಪತ್ತಿಯಾಗುತ್ತದೆ. ಹೀಗೆ ರಚಿತವಾದ ಬ್ರಹ್ಮಾಂಡದಲ್ಲಿ ೧. ಭೂಲೋಕ, ೨. ಭುವಲೋಕ, ೩. ಸ್ವಲ್ಲೋಕ, ೪ ಮಹಾಲ್ಲೋಕ, ೫ ಜನಲೋಕ, ೬ ತಪೋಲೋಕ ಮತ್ತು ೭ ಸತ್ಯಲೋಕಗಳೆಂಬ ಸಪ್ತ ಲೋಕಗಳು ಉಂಟಾದವು. ಇವುಗಳಿಗೆ ಊರ್ಧ್ವ ಲೋಕಗಳೆನ್ನುತ್ತಾರೆ. ಮತ್ತು ೧. ಅತಲ, ೨. ವಿತಲ, ೩. ಸುತಲ, ೪. ಪಾತಾಲ, ೫. ರಸಾತಲ, ೬. ತಲಾತಲ ಮತ್ತು ೭. ಮಹಾತಲ ಎಂಬ ಏಳು ಅಧೋಲೋಕಗಳು ಉಂಟಾದವು ಇವುಗಳಿಗೆ ಚತುರ್ದಶ ಲೋಕಗಳೆನ್ನುತ್ತಾರೆ.

ಈ ಚತುರ್ದಶ ಲೋಕಗಳಲ್ಲಿ ಜೀವರುಗಳಿಗೆ ಭೋಗ ಯೋಗ್ಯವಾದ ಅನ್ನಾದಿಗಳೂ, ಭೋಗ ಸ್ಥಾನವಾದ ದೇವ ಮನುಷ್ಯ ಪಶ್ವಾದಿಗಳ ಸ್ಥೂಲ ಶರೀರಗಳೂ ಉಂಟಾದವು. ಈ ಪ್ರಕಾರ ಸಂಕ್ಷೇಪವಾಗಿ ಸೃಷ್ಟಿಯನ್ನು ನಿರೂಪಿಸಿದ್ದಾಗಿದೆ ಮಾಯಾ ಕಾರ್ಯವಾದ ಒಂದು ಪದಾರ್ಥವನ್ನು ವಿಸ್ತಾರ ವಾಗಿ ನಿರೂಪಿಸುವುದಕ್ಕೆ ಕೋಟಿ ಬ್ರಹ್ಮರ ಆಯುಷ್ಯವಾದರೂ ಸಾಲದು. ಈ ವಿಷಯವನ್ನು ವಾಲ್ಮೀಕಿ ಋಷಿಯು ವಾಸಿಷ್ಟ ರಾಮಾಯಣದಲ್ಲಿ ಅನೇಕ ಇತಿಹಾಸಗಳಿಂದ ಪ್ರತಿಪಾದಿಸಿದ್ದಾರೆ.

## ಪಂಚಕೋಶ ವಿಚಾರ

ಮೇಲಿನ ಸಪ್ಪೈಯ ಛಂದದ ಮೂರನೇ ಪಾದದ ಅರ್ಥ. ಮೇಲೆ ಹೇಳಿದ ಮಾಯೆಯಲ್ಲಿಯೂ, ತತ್ಕಾರ್ಯದಲ್ಲಿಯೂ, ಮೂರು ಶರೀರಗಳೂ ಪಂಚ ಕೋಶಗಳೂ ಇರುತ್ತವೆ.

ಪ್ರಶ್ನೆ . ಈಶ್ವರನ ಕಾರಣ ಶರೀರ ಯಾವುದು?

ಉತ್ತರ : ಶುದ್ಧ ಸತ್ವಗುಣ ಸಹಿತವಾದ ಮಾಯೆಯು ಈಶ್ವರನಿಗೆ ಕಾರಣ ಶರೀರವೆನಿಸುತ್ತದೆ

ಪ್ರಶ್ನೆ : ಜೀವನ ಕಾರಣ ಶರೀರ ಯಾವುದು ?

ಉತ್ತರ : ಮಲಿನ ಸತ್ವಗುಣ ಸಹಿತವಾದ ಅವಿದ್ಯೆಯ ಅಂಶವು ಜೀವನಿಗೆ ಕಾರಣ ಶರೀರವೆನಿಸುತ್ತದೆ.

ಪ್ರಶ್ನೆ . ಜೀವನ ಸೂಕ್ಷ್ಮ ಶರೀರ ಯಾವುದು?

ಉತ್ತರ : ಮುಂದಿನ ಶರೀರದ ಆರಂಭಕಗಳಾದ ಪಂಚಸೂಕ್ಷ್ಮ ಭೂತಗಳು, ಮನೋಬುದ್ಧಿ ಚಿತ್ತ ಅಹಂಕಾರ ಚತುಷ್ಟಯವೆಂಬ ಅಂತಃಕರಣ, ಪಂಚಪ್ರಾಣಗಳು, ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು ಸೇರಿ ಜೀವನ ಸೂಕ್ಷ್ಮ ಶರೀರವೆನಿಸುತ್ತದೆ

ಪ್ರಶ್ನೆ ಈಶ್ವರನ ಸೂಕ್ಷ್ಮ ಶರೀರ ಯಾವುದು?

ಉತ್ತರ ಸರ್ವ ಜೀವರುಗಳ ಸೂಕ್ಷ್ಮ ಶರೀರಗಳೆಲ್ಲವೂ ಸೇರಿ ಈಶ್ವರನ ಸೂಕ್ಷ್ಮ ಶರೀರವೆನಿಸುತ್ತದೆ

ಪ್ರಶ್ನೆ . ಈಶ್ವರನ ಸ್ಥೂಲ ಶರೀರವೆಂದರೇನು ?

ಉತ್ತರ . ಸಂಪೂರ್ಣ ಸ್ಥೂಲ ಬ್ರಹ್ಮಾಂಡವೇ ಈಶ್ವರನ ಸ್ಥೂಲ ಶರೀರವೆನಿಸುತ್ತದೆ.

ಪ್ರಶ್ನೆ ಜೀವನ ಸ್ಥೂಲ ಶರೀರವೆಂದರೇನು ?

ಉತ್ತರ : ಜೀವನ ಸ್ಥೂಲ ಶರೀರವು ಸರ್ವರಿಗೆ ಪ್ರಸಿದ್ಧವಾಗಿಯೇ ಇದೆ

ಜೀವನ ಮೂರು ಶರೀರಗಳಲ್ಲಿ ಪಂಚಕೋಶಗಳು ಇರುತ್ತವೆ. ಕಾರಣ ಶರೀರವೇ ಆನಂದಮಯಕೋಶ; ಸೂಕ್ಷ್ಮ ಶರೀರದಲ್ಲಿ ವಿಜ್ಞಾನಮಯ, ಮನೋಮಯ, ಪ್ರಾಣಮಯಗಳೆಂದು ಮೂರು ಕೋಶಗಳಿರುತ್ತವೆ.

ಪ್ರಶ್ನೆ . ವಿಜ್ಞಾನಮಯ ಕೋಶವೆಂದರೇನು ?

ಉತ್ತರ : "ಜ್ಞಾನೇಂದ್ರಿಯಸ್ಸಹ ಬುದ್ಧಿರ್ವಿಜ್ಞಾನಮಯಕೋಶಃ" ಎಂದು ಉಪನಿಷತ್ತಿನಲ್ಲಿ ಹೇಳಿದಂತೆ, ಪಂಚಜ್ಞಾನೇಂದ್ರಿಯಗಳೂ ಬುದ್ಧಿಯೂ ಸೇರಿ ವಿಜ್ಞಾನಮಯ ಕೋಶವೆನಿಸುತ್ತದೆ.

ಪ್ರಶ್ನೆ . ವಿಜ್ಞಾನವೆಂದರೇನು ?

ಉತ್ತರ : ವಿಜ್ಞಾನವೆಂದರೆ ಬುದ್ಧಿ ; ಈ ಬುದ್ಧಿಯೆಂಬ ಉಪಾಧಿ, ಬುದ್ಧಿಗೆ ಅಧಿಷ್ಠಾನ ಚೇತನ, ಬುದ್ಧಿಯಲ್ಲಿಯ ಚೇತನದ ಪ್ರತಿಬಿಂಬ – ಈ ಮೂರೂ ಸೇರಿ ವಿಜ್ಞಾನಮಯವೆನಿಸುತ್ತದೆ.

ಪ್ರಶ್ನೆ ಮನೋಮಯಕೋಶವೆಂದರೇನು ?

ಉತ್ತರ · "ಜ್ಞಾನೇಂದ್ರಿಯೈಸ್ಸಹಮನಃ ಮನೋಮಯಕೋಶಃ" ಎಂದು ಉಪನಿಷತ್ತಿನಲ್ಲಿ ಹೇಳಿದಂತೆ, ಐದು ಜ್ಞಾನೇಂದ್ರಿಯಗಳೂ ಮನಸ್ಸೂ ಸೇರಿ ಮನೋಮಯ ಕೋಶವೆನಿಸುತ್ತದೆ.

ಪ್ರಶ್ನೆ : ಪ್ರಾಣಮಯಕೋಶವೆಂದರೇನು ?

ಉತ್ತರ : "ಕರ್ಮೇಂದ್ರಿಯೈಸ್ಸಹ ಪ್ರಾಣಾದಿ ಪಂಚಕಂ ಪ್ರಾಣಮಯ ಕೋಶಃ" ಎಂದು ಉಪನಿಷತ್ತಿನಲ್ಲಿ ಹೇಳಿದಂತೆ, ಪಂಚಕರ್ಮೇಂದ್ರಿಯ ಗಳೂ ಪಂಚಪ್ರಾಣಗಳೂ ಸೇರಿ ಪ್ರಾಣಮಯಕೋಶವೆನಿಸುತ್ತದೆ.

ಪ್ರಶ್ನೆ : ಅನ್ನಮಯಕೋಶವೆಂದರೇನು ?

ಉತ್ತರ : ಸ್ಥೂಲ ಶರೀರವೇ ಅನ್ನಮಯಕೋಶ. ಹೀಗೆಯೇ ಈಶ್ವರನ ಶರೀರತ್ರಯದಲ್ಲಿ ಪಂಚಕೋಶಗಳಿರುತ್ತವೆ.

ಪ್ರಶ್ನೆ . ಈಶ್ವರನ ಆನಂದಮಯಕೋಶ ಯಾವುದು ?

ಉತ್ತರ · ಸಮಷ್ಟಿ ಅಜ್ಞಾನ ರೂಪವಾದ, ಮಾಯೆಯು ಈಶ್ವರನ ಕಾರಣ ಶರೀರ. ಈ ಕಾರಣ ಶರೀರವೇ ಈಶ್ವರನ ಆನಂದಮಯಕೋಶ ವೆನಿಸುತ್ತದೆ.

ಪ್ರಶ್ನೆ . ಈಶ್ವರನ ಸೂಕ್ಷ್ಮ ಶರೀರವೆಂದರೇನು ?

ಉತ್ತರ : ಜೀವನ ಸೂಕ್ಷ್ಮ ಶರೀರದ ಸಮಷ್ಟಿಯಾದ ಹಿರಣ್ಯಗರ್ಭನು ಈಶ್ವರನ ಸೂಕ್ಷ್ಮ ಶರೀರ.

ಪ್ರಶ್ನೆ ಈಶ್ವರನ ವಿಜ್ಞಾನಮಯಕೋಶವೆಂದರೇನು ?

ಉತ್ತರ : ದಿಕ್ಪಾಲಕರು, ವಾಯು, ಸೂರ್ಯ, ವರುಣ, ಅಶ್ವಿನೀ ಕುಮಾರರು ಅಂದರೆ ಜೀವನ ಜ್ಞಾನೇಂದ್ರಿಯಗಳ ಅಧಿಷ್ಠಾನವೆನಿಸುವ ದೇವತೆಗಳು ಈಶ್ವರನ ಜ್ಞಾನೇಂದ್ರಿಯಗಳು. ಈ ಜ್ಞಾನೇಂದ್ರಿಯಗಳೈದು ಮತ್ತು ಸಮಷ್ಟಿ ಬುದ್ಧಿಯೆನ್ನುವ ಮಹತ್ತತ್ವವೂ ಸೇರಿ ಈಶ್ವರನ ವಿಜ್ಞಾನ ಮಯಕೋಶವೆನಿಸುತ್ತದೆ ಇಲ್ಲವೇ ಮೇಲೆ ಹೇಳಿದ ದೇವತಾರೂಪ ಇಂದ್ರಿಯ ಗಳೂ ಮತ್ತು ಸರ್ವರ ಬುದ್ಧಿಗೆ ಅಭಿಮಾನಿಯಾದ ಬ್ರಹ್ಮ ಎಂಬುವ ಈಶ್ವರನ ಬುದ್ಧಿಯೂ ಸೇರಿ ಈಶ್ವರನ ವಿಜ್ಞಾನಮಯಕೋಶವನಿಸುತ್ತದೆ

ಪ್ರಶ್ನೆ . ಈಶ್ವರನ ಮನೋಮಯಕೋಶವೆಂದರೇನು ?

ಉತ್ತರ : ಮೇಲೆ ಹೇಳಿದ ದೇವತಾ ರೂಪವಾದ ಪಂಚ ಜ್ಞಾನೇಂದ್ರಿಯ ಗಳೂ ಮತ್ತು ಸಮಷ್ಟಿ ಮನಸ್ಸೂ ಸೇರಿ ಈಶ್ವರನ ಮನೋಮಯಕೋಶ

ವೆನಿಸುತ್ತದೆ ಇಲ್ಲವೇ ಮೇಲೆ ಹೇಳಿದ ದೇವತಾ ರೂಪ ಜ್ಞಾನೇಂದ್ರಿಯಗಳೂ ಮತ್ತು ಸಮಷ್ಟಿ ಮನಸ್ಸಿಗೆ ಅಭಿಮಾನಿಯಾದ ಚಂದ್ರನೂ ಸೇರಿ ಈಶ್ವರನ ಮನೋಮಯಕೋಶವೆನಿಸುತ್ತದೆ

ಪ್ರಶ್ನೆ ಈಶ್ವರನ ಪ್ರಾಣಮಯಕೋಶವೆಂದರೇನು ?

ಉತ್ತರ : ಜೀವನ ಕರ್ಮೇಂದ್ರಿಯಗಳಿಗೆ ಅಧಿದೇವತೆಗಳಾದ ಅಗ್ನಿ, ಇಂದ್ರ, ಉಪೇಂದ್ರ ಪ್ರಜಾಪತಿ, ಯಮ – ಈ ಐವರು ಈಶ್ವರನ ಕರ್ಮೇಂದ್ರಿಯ ಗಳು. ಇವೂ ಮತ್ತು ಸಮಷ್ಟಿ ಪ್ರಾಣವೂ ಸೇರಿ ಈಶ್ವರನ ಪ್ರಾಣಮಯ ಕೋಶವೆನಿಸುತ್ತದೆ. ಇಲ್ಲವೇ ಮೇಲೆ ಹೇಳಿದ ದೇವತಾರೂಪ ಕರ್ಮೇಂದ್ರಿಯ ಗಳೂ ಮತ್ತು ಪ್ರಾಣಾಭಿಮಾನಿಯಾದ ಸಮಷ್ಟಿವಾಯುವೂ ಸೇರಿ ಈಶ್ವರನ ಪ್ರಾಣಮಯಕೋಶವೆನಿಸುತ್ತದೆ. ಇಲ್ಲವೇ ಮೇಲೆ ಹೇಳಿದ ದೇವತಾರೂಪ ಕರ್ಮೇಂದ್ರಿಯಗಳೂ ಮತ್ತು ಸೂತ್ರಾತ್ಮವೂ ಸೇರಿ ಈಶ್ವರನ ಪ್ರಾಣಮಯ ಕೋಶವೆನಿಸುತ್ತದೆ.

ಪ್ರಶ್ನೆ . ಈಶ್ವರನ ಅನ್ನಮಯಕೋಶವೆಂದರೇನು ?

ಉತ್ತರ ಸಮಷ್ಟಿ ಸ್ಥೂಲಸೃಷ್ಟಿರೂಪವಾದ ವಿರಾಟ್ ಈಶ್ವರನ ಸ್ಥೂಲ ಶರೀರ ; ಈ ಸ್ಥೂಲ ಶರೀರವೇ ಈಶ್ವರನ ಅನ್ನಮಯಕೋಶವೆನಿಸುತ್ತದೆ.

ವಿವೇಚನೆ : ಜೀವನ ಶರೀರದಲ್ಲಿ ಜೀವನ ಕೋಶಗಳಿರುತ್ತವೆ ಅವು ಜೀವನ ನಿಜರೂಪವಾದ ಪ್ರತ್ಯಗಾತ್ಮ ಸ್ವರೂಪವನ್ನು ಆಚ್ಛಾದಿಸಿ ಅದನ್ನು ತಿಳಿಯದಂತೆ ಮಾಡಿದೆ. ಹೀಗೆ ಈಶ್ವರನ ಶರೀರದಲ್ಲಿಯೂ ಈಶ್ವರನ ಕೋಶ ಗಳಿರುತ್ತವೆ. ಈ ಈಶ್ವರನ ಕೋಶಗಳು ಈಶ್ವರನ ದೃಷ್ಟಿಯಲ್ಲಿ ಈಶ್ವರನ ನಿಜರೂಪವಾದ ಬ್ರಹ್ಮವನ್ನು ಆಚ್ಛಾದಿಸದಿದ್ದರೂ ಜೀವನ ದೃಷ್ಟಿಯಿಂದ ಬ್ರಹ್ಮವನ್ನು ಆಚ್ಛಾದಿಸಿದಂತೆ ತೋರುತ್ತದೆ. ಆದುದರಿಂದ ಜೀವನ ವ್ಯಷ್ಟಿ ಪಂಚಕೋಶಗಳಿಗಿಂತ ಭಿನ್ನವಾದ ಪ್ರತ್ಯಗಾತ್ಮನ ವಿವೇಚನೆಯು ಜೀವನಿಗೆ ಅಗತ್ಯವಾಗಿರುವಂತೆ ಸಮಷ್ಟಿ ಪಂಚಕೋಶಗಳಿಗಿಂತ ಭಿನ್ನವಾದ ಈಶ್ವರನ ವಿವೇಚನೆಯೂ ಸಹ ಜೀವನಿಗೆ ಅಗತ್ಯವಾಗಿದೆ. ಈಶ್ವರನಿಗೆ ಆವರಣವು ಇಲ್ಲದ್ದರಿಂದ ಅವನು ಯಾವ ವಿವೇಚನೆಯನ್ನೂ ಮಾಡಬೇಕಾಗಿಲ್ಲ ರೋಗ ವಿದ್ದವನಿಗೆ ಔಷಧವು ಅಗತ್ಯವಾಗಿರುವಂತೆ ಆವರಣವಿರುವ ಜೀವನು ವ್ಯಷ್ಟಿ ಸಮಷ್ಟಿ ಪಂಚಕೋಶಗಳ ವಿವೇಚನೆಯನ್ನು ಅಗತ್ಯವಾಗಿ ಮಾಡಬೇಕು.

## ಕೋಶದ ಸ್ವರೂಪ

ಪ್ರಶ್ನೆ . ಕೋಶವೆಂದರೇನು ? ಸ್ಥೂಲ ದೇಹಾದಿಗಳಿಗೆ ಕೋಶವೆಂದು ಹೆಸರು ಬರಲು ಕಾರಣವೇನು ?

ಉತ್ತರ : ಕೋಶವೆಂದರೆ ಆವರಣ ಕತ್ತಿಯ ಮೇಲೆ ಇರುವ ಆವರಣವೆಂದರೆ ಒರೆ ದ್ರವ್ಯದ ಆವರಣ-ಹೆಂದರೆ ಪೆಟ್ಟಿಗೆ ಕತ್ತಿಯ ಮೇಲೆ ಇರುವ ಒರೆಯು ಕತ್ತಿಯನ್ನು ಮುಚ್ಚಿರುವಂತೆಯೂ, ದ್ರವ್ಯವನ್ನು ಪೆಟ್ಟಿಗೆಯು ಮುಚ್ಚಿರುವಂತೆಯೂ ಆತ್ಮನನ್ನು ಈ ಪಂಚಕೋಶಗಳು ಆವರಿಸಿ ಮುಚ್ಚಿರುವುದರಿಂದ ಕೋಶಗಳೆಂದು ಹೇಳಿಸಿಕೊಳ್ಳುತ್ತವೆ. ಪ್ರತ್ಯಗಾತ್ಮನನ್ನು ಮೊದಲು ಆನಂದಮಯಕೋಶವು ಮುಚ್ಚಿರುತ್ತದೆ. ನಂತರ ವಿಜ್ಞಾನಮಯ, ಮನೋಮಯ ಕೋಶಗಳು ಸೂಕ್ಷ್ಮರೂಪದಿಂದ ಆವರಿಸಿರುತ್ತವೆ. ಇವೆಲ್ಲವನ್ನು ಸ್ಥೂಲ ರೂಪವಾಗಿ ಪ್ರಾಣಮಯ, ಅನ್ನಮಯ ಕೋಶಗಳು ಆವರಿಸಿರುವವು.

ಉದಾಹರಣೆ : ಒಬ್ಬ ಮನುಷ್ಯನು ಐದು ವಿಧವಾದ ಹೊದಿಕೆಯನ್ನು ಹೊದ್ದುಕೊಂಡು ಮಲಗಿದ್ದರೆ, ಆ ಮನುಷ್ಯನನ್ನು ಐದು ಹೊದಿಕೆಗಳು ಆವರಿಸಿ ಮುಚ್ಚಿರುವಂತೆ, ಆ ಐದು ಹೊದಿಕೆಗಳನ್ನು ತೆಗೆದರೆ ಮನುಷ್ಯನು ಕಾಣುವಂತೆ, ಐದೂ ಕೋಶಗಳನ್ನು ವಿಚಾರ ದ್ವಾರಾ ತೆಗೆದು ಹಾಕಿದರೆ ಆತ್ಮನ ನಿರಾವರಣ ಸ್ವರೂಪದ ಜ್ಞಾನವಾಗುತ್ತದೆ.

ಮತ್ತೊಂದು ಉದಾಹರಣೆ . ಐದು ಬಾಗಿಲುಗಳುಳ್ಳ ಮನೆಯಲ್ಲಿ ಎಲ್ಲಾ ಬಾಗಿಲುಗಳನ್ನು ಮುಚ್ಚಿ ಐದನೆಯದಾದ ಕೋಣೆಯ ಬಾಗಿಲನ್ನೂ ಮುಚ್ಚಿ ಒಬ್ಬ ಮನುಷ್ಯನು ಮಲಗಿದ್ದರೆ, ಆ ಮನುಷ್ಯನ ಹತ್ತಿರ ಯಾರಾದರೂ ಹೋಗಬೇಕಾದರೂ ಅಥವಾ ಮಲಗಿದ ಮನುಷ್ಯನು ಹೊರಗೆ ಬರಬೇಕಾದರೂ ಆ ಐದೂ ಬಾಗಿಲುಗಳನ್ನೂ ತೆರೆಯಬೇಕಾದಂತೆ ಆತ್ಮನನ್ನು ತಿಳಿಯಬೇಕಾದರೆ ಪಂಚಕೋಶಗಳನ್ನು ವಿಚಾರ ಮಾಡಬೇಕು. ಹೀಗೆ ಹಿಂದೆ ಜೀವನ ಶರೀರದಲ್ಲಿ ಜೀವನ ಶರೀರಗಳು ಇರುತ್ತವೆ ಎಂದು ಹೇಳಿದ್ದಾಗಿದೆ.

ಪ್ರಶ್ನೆ : ಆ ಜೀವನ ಶರೀರದ ವರ್ಣನೆ ಏನು ? ಮತ್ತು ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಿಗೆ ಶರೀರವೆಂದು ಹೆಸರು ಬರಲು ಕಾರಣವೇನು ?

ಉತ್ತರ: ಇವುಗಳು ಜೀರ್ಣವಾಗಿ ಹೋಗುವುದರಿಂದ ಶರೀರವೆಂದು ಹೆಸರು

ಪ್ರಶ್ನೆ · ಇವುಗಳಿಗೆ ದೇಹವೆಂಬ ಹೆಸರು ಬರಲು ಕಾರಣವೇನು ?

ಉತ್ತರ ದಹಿಸುವುದರಿಂದ ಇವುಗಳಿಗೆ ದೇಹವೆನ್ನುತ್ತಾರೆ.

ಪ್ರಶ್ನೆ: ಈ ದೇಹಕ್ಕೆ ಸ್ಥೂಲ ದೇಹವೆನ್ನುವ ಕಾರಣವೇನು ?

ಉತ್ತರ ರೋಮ, ಚರ್ಮ, ನರಮಾಂಸ, ಅಸ್ಥಿ, ಕೊಬ್ಬು – ಈ ಆರು ಸ್ತಂಭದಂತೆ ಪ್ರತ್ಯಕ್ಷವಾಗಿ ಕಂಡುಬರುವುದರಿಂದ ಇದಕ್ಕೆ ಸ್ಥೂಲ ದೇಹವೆಂದು ಹೆಸರು ಬಂದಿದೆ. ಈ ಸ್ಥೂಲವು ಐದು ತತ್ತ್ವಗಳ ಸಮ್ಮಿಲನದಿಂದ ನಿರ್ಮಿತವಾಗಿದೆ ಆ ತತ್ತ್ವಗಳು ಕೆಳಗೆ ವಿವರಿಸಲ್ಪಟ್ಟಿವೆ

| ಮುಖ್ಯ ತತ್ತ್ವಗಳು | ಮುಖ್ಯ ತತ್ತ್ವಗಳಲ್ಲಿ ನೇರುವ ಅಮುಖ್ಯ ತತ್ತ್ವಗಳು | | | | |
|---|---|---|---|---|---|
| | ಪೃಥ್ವಿ | ಜಲ | ತೇಜಸ್ಸು | ವಾಯು | ಆಕಾಶ |
| ಪೃಥ್ವಿ | ಅಸ್ಥಿ | ಮಾಂಸ | ನರಳು | ಚರ್ಮ | ರೋಮ |
| ಜಲ | ರಕ್ತ | ಶುಕ್ಲ | ಮೂತ್ರ | ಬೆವರು | ಜೊಲ್ಲು |
| ತೇಜಸ್ಸು | ಆಲಸ್ಯ | ಕಾಂತಿ | ಕ್ಷುಧಾ | ತೃಷೆ | ನಿದ್ರೆ |
| ವಾಯು | ಆಕುಂಚನ | ಚಲನ | ವಲನ | ಧಾವನ | ಪ್ರಸಾರಣ |
| ಆಕಾಶ | ಭಯ ಕಟ್ಯಾಕಾಶ | ಮೋಹ ಉದಾರಾಕಾಶ | ಕ್ರೋಧ ಹೃದಯಾಕಾಶ | ಕಾಮ ಕಂಠಾಕಾಶ | ಶೋಕ ಶಿರಾಕಾಶ |

## ಕೋಷ್ಟಕದ ಸ್ಪಷ್ಟೀಕರಣ

ಹಿಂದಿನ ಕೋಷ್ಟಕದಲ್ಲಿ ಹೇಳಿದಂತೆ ಪೃಥ್ವಿಯ ಮುಖ್ಯ ತತ್ತ್ವದಲ್ಲಿ ಪೃಥ್ವೀ ಅಂಶವು ಅಸ್ಥಿ, ಜಲದ ಅಮುಖ್ಯ ಭಾಗವು ಸೇರಿದರೆ ಮಾಂಸ, ಪೃಥ್ವಿಯ ಮುಖ್ಯ ತತ್ತ್ವದಲ್ಲಿ ತೇಜಸ್ಸಿನ ಅಮುಖ್ಯಾಂಶವು ಸೇರಿದರೆ ನರ, ಪೃಥ್ವಿಯ ಮುಖ್ಯ ತತ್ತ್ವದಲ್ಲಿ ವಾಯುವಿನ ಅಮುಖ್ಯಾಂಶವು ಸೇರಿದರೆ ಚರ್ಮ ಮತ್ತು ಪೃಥ್ವಿಯ ಮುಖ್ಯ ತತ್ತ್ವದಲ್ಲಿ ಆಕಾಶದ ಅಮುಖ್ಯ ಅಂಶವು ಸೇರಿದರೆ ರೋಮ.

ಇದರಂತೆ ಎಲ್ಲಾ ಭೂತಗಳಲ್ಲಿ ತಿಳಿಯಬೇಕು.

## ಆಕಾಶದಲ್ಲಿ

೧. ಭಯವಾದಾಗ ಪೃಥ್ವಿಯಂತೆ ಶರೀರವು ಜಡವಾಗುವುದರಿಂದ ಭಯವು ಆಕಾಶದಲ್ಲಿ ಸೇರಿದ ಪೃಥ್ವಿಯ ಅಂಶ.

೨. ಪುತ್ರಾದಿಗಳಲ್ಲಿ ಮೋಹವುಂಟಾದಾಗ ನೇತ್ರದಲ್ಲಿ ನೀರು ಪ್ರಸ ವಿಸುವುದರಿಂದ ಮೋಹವು ಆಕಾಶದಲ್ಲಿ ಸೇರಿದ ಜಲದ ಭಾಗ

೩ ಅಗ್ನಿಯಂತೆ ದಹಿಸುವುದರಿಂದ ಕ್ರೋಧವು ಆಕಾಶದಲ್ಲಿ ಸೇರಿದ ಅಗ್ನಿಯ ಭಾಗ.

೪ ಕಾಮನಾರೂಪ ವ್ಯಾಪಾರವು ವಾಯುವಿನಂತೆ ಚಲಿಸುವುದರಿಂದ ಕಾಮವು ಆಕಾಶದಲ್ಲಿ ಸೇರಿದ ವಾಯುವಿನ ಭಾಗ.

೫ ಶೋಕವುಂಟಾದಾಗ ಆಕಾಶದಂತೆ ದೇಹವು ಶೂನ್ಯವಾಗುವುದ ರಿಂದ ಶೋಕವು ಆಕಾಶದ ಮುಖ್ಯ ಭಾಗ.

## ವಾಯುವಿನಲ್ಲಿ

೧ ಪೃಥ್ವಿಯಂತೆ ಸಂಕೋಚವಾಗುವುದರಿಂದ ಆ ಕುಂಚನವು ವಾಯು ವಿನಲ್ಲಿ ಸೇರಿದ ಪೃಥ್ವಿಯ ಭಾಗ.

೨ ಜಲದಂತೆ ಚಲಿಸುವುದರಿಂದ ಚಲನವು ವಾಯುವಿನಲ್ಲಿ ಸೇರಿಹ ಜಲದ ಭಾಗ.

೩. ಅಗ್ನಿಯಂತೆ ಚಲಿಸುವುದರಿಂದ ವಲನವು ವಾಯುವಿನಲ್ಲಿ ಸೇರಿದ ತೇಜಸ್ಸಿನ ಭಾಗ

೪ ವಾಯುವಿನಂತೆ ಓಡುವುದರಿಂದ ಧಾವನವು ವಾಯುವಿನ ಮುಖ್ಯ ಭಾಗ

೫. ಆಕಾಶದಂತೆ ವಿಸ್ತರಿಸುವುದರಿಂದ ಪ್ರಸಾರಣವು ವಾಯುವಿನಲ್ಲಿ ಸೇರಿದ ಆಕಾಶದ ಭಾಗ

## ತೇಜಸ್ಸಿನಲ್ಲಿ

೧. ಆಲಸ್ಯವು ಪೃಥ್ವಿಯಂತೆ ಜಡ ಸ್ವಭಾವವುಳ್ಳದ್ದಾದ್ದರಿಂದ ಆಲಸ್ಯವು ತೇಜಸ್ಸಿನಲ್ಲಿ ಸೇರಿದ ಪೃಥ್ವಿಯ ಅಂಶ.

೨. ಮಾಲಿನ್ಯವನ್ನು ಕಳೆದು ಕಾಂತಿಯನ್ನುಂಟುಮಾಡುವುದು ಜಲದ ಧರ್ಮವಾದುದರಿಂದ ಕಾಂತಿಯು ತೇಜಸ್ಸಿನಲ್ಲಿ ಸೇರಿದ ಜಲದ ಅಂಶ.

೩. ಅಗ್ನಿಯಂತೆ ತಿಂದದ್ದನ್ನು ಪಚನ ಮಾಡುವುದರಿಂದ ಕ್ಷುಧೆಯು ತೇಜಸ್ಸಿನ ಮುಖ್ಯ ಭಾಗ

೪ ನೆನೆದ ವಸ್ತ್ರವನ್ನು ಒಣಗಿಸುವಂತೆ ತೃಷೆಯು ಗಂಟಲನ್ನು ಒಣಗಿಸುವುದರಿಂದ ತೃಷೆಯು ತೇಜಸ್ಸಿನಲ್ಲಿ ಸೇರಿದ ವಾಯುವಿನ ಅಂಶ

೫ ನಿದ್ರೆ ಬಂದಾಗ ಆಕಾಶದಂತೆ ಶರೀರವು ಶೂನ್ಯವಾಗುವುದರಿಂದ ನಿದ್ದೆಯು ತೇಜಸ್ಸಿನಲ್ಲಿ ಸೇರಿದ ವಾಯುವಿನ ಭಾಗ.

## ಜಲದಲ್ಲಿ

೧. ಪೃಥ್ವಿಯು ಕೆಲವು ಪ್ರದೇಶದಲ್ಲಿ ಆರಕ್ತವರ್ಣವಾಗಿರುವುದರಿಂದ ರಕ್ತವು ಜಲದಲ್ಲಿ ಸೇರಿದ ಪೃಥ್ವಿಯ ಭಾಗ.

೨. ಶ್ವೇತ ಬಣ್ಣವಾಗಿದ್ದು ಸಸ್ಯೋತ್ಪತ್ತಿಗೆ ಕಾರಣವಾದ ಜಲದಂತೆ ಶ್ವೇತವಾಗಿದ್ದು ಗರ್ಭೋತ್ಪತ್ತಿಗೆ ಹೇತುವಾದುದರಿಂದ ಶುಕ್ಲವು ಜಲದ ಮುಖ್ಯಾಂಶ.

೩. ಅಗ್ನಿಯಂತೆ ಬಿಸಿಯಾಗಿರುವುದರಿಂದ ಮೂತ್ರವು ಜಲದಲ್ಲಿ ಸೇರಿದ ತೇಜದ ಅಂಶ.

೪. ಬೀಸಣಿಕೆ ಮೊದಲಾದವುಗಳ ವ್ಯಾಪಾರ ಶ್ರಮದಿಂದ ಉಂಟಾಗುವ ವಾಯುವಿನಂತೆ ವ್ಯಾಪಾರ ಶ್ರಮದಿಂದ ಉಂಟಾಗುವ ಬೆವರು ಜಲದಲ್ಲಿ ಸೇರಿದ ವಾಯುವಿನ ಭಾಗ

೫ ಆಕಾಶದಂತೆ ಮೇಲೆ ಕೆಳಗೆ ಹೋಗುವುದರಿಂದ ಜೊಲ್ಲು ಜಲದಲ್ಲಿ ಸೇರಿದ ಆಕಾಶದ ಭಾಗ.

## ಪೃಥ್ವಿಯಲ್ಲಿ

೧ ಪೃಥ್ವಿಯು ಕಠಿಣವಾಗಿರುವುದರಿಂದ ಅಸ್ಥಿಯು ಪೃಥ್ವಿಯ ಮುಖ್ಯ ಭಾಗ

೨ ಜಲದಂತೆ ಹಸಿ ಇರುವುದರಿಂದ ಮಾಂಸವು ಪೃಥ್ವಿಯಲ್ಲಿ ಸೇರಿದ ಜಲದ ಭಾಗ.

೩. ನರದಿಂದ ಜ್ವರದ ಪರೀಕ್ಷೆಯಾಗುವುದರಿಂದ ನರವು ಪೃಥ್ವಿಯಲ್ಲಿ ಸೇರಿದ ತೇಜದ ಭಾಗ

೪ ಶೀತ ಉಷ್ಣ ಸ್ಪರ್ಶ ಜ್ಞಾನವನ್ನು ಉಂಟುಮಾಡುವುದರಿಂದ ಚರ್ಮವು ಪೃಥ್ವಿಯಲ್ಲಿ ಸೇರಿದ ವಾಯುವಿನ ಭಾಗ.

೫. ರೋಮಗಳನ್ನು ಕತ್ತರಿಸುವುದರಿಂದ ಶೂನ್ಯರೂಪವಾದ ಆಕಾಶದಂತೆ ದುಃಖಶೂನ್ಯವಾಗಿರುವುದರಿಂದ ರೋಮವು ಪೃಥ್ವಿಯಲ್ಲಿ ಸೇರಿದ ಆಕಾಶದ ಭಾಗ.

ಪ್ರಶ್ನೆ: ಹಿಂದೆ ಹೇಳಿದ ಭಯ ಮೊದಲಾದವುಗಳು ಸೂಕ್ಷ್ಮದೇಹದ ಮುಖ್ಯ ಧರ್ಮಗಳಾಗಿವೆ. ಅವುಗಳನ್ನು ಸ್ಥೂಲ ದೇಹದ ಧರ್ಮವೆಂಬುದು ಅಸಮಂಜಸವಲ್ಲವೆ ?

ಉತ್ತರ: ಜಲದಿಂದ ತುಂಬಿದ ಘಟದ ಬಾಹ್ಯ ಪ್ರದೇಶದಲ್ಲಿ ಅಂತಸ್ಥಿತ ಜಲದ ಶೀತಲತ್ವವು ಕಂಡುಬಂದಂತೆ, ಭಯ ಮೊದಲಾದವುಗಳು ಸೂಕ್ಷ್ಮ ದೇಹದ ಧರ್ಮವಾಗಿದ್ದರೂ ಸ್ಥೂಲ ದೇಹದಲ್ಲಿ ಕಂಡುಬರುವುದರಿಂದ ಸ್ಥೂಲ ದೇಹದ ಸಾಮಾನ್ಯ ಧರ್ಮಗಳಾಗಿವೆ. ಈ ಕಾರಣದಿಂದ ಇವುಗಳನ್ನು ಸ್ಥೂಲ ದೇಹದ ಧರ್ಮದಲ್ಲಿ ಸೇರಿಸಿದೆ.

ಈ ಇಪ್ಪತ್ತೈದು ತತ್ತ್ವಗಳ ಸಮುದಾಯಕ್ಕೆ ಸ್ಥೂಲವೆಂದು ಹೆಸರು. ಇದಕ್ಕೆ ನಾಮ, ಜಾತಿ, ಆಶ್ರಮ, ವರ್ಣ, ಆಕಾರ, ಜನನ, ಮರಣಗಳೇ ಧರ್ಮಗಳು

ಇದೇ ವಿಷಯವನ್ನು ಶ್ರುತಿಯಲ್ಲಿ—

"ಅನ್ನಮಯಂ ಹಿ ಸೌಮ್ಯಮನಃ ಆಪಃ ಪ್ರಾಣ ತೇಜೋವಾಕ್"

ಎಂದು ಹೇಳಿದೆ ಈ ಶ್ರುತಿಯಂತೆ ತಿಂದ ಅನ್ನದ ಸ್ಥೂಲ ಭಾಗದಿಂದ ಅಮೇಧ್ಯವೂ, ಮಧ್ಯಭಾಗದಿಂದ ಮಾಂಸವೂ, ಸೂಕ್ಷ್ಮ ಭಾಗದಿಂದ ಮನಸ್ಸೂ ಉಂಟಾಗುತ್ತವೆ. ಕುಡಿದ ನೀರಿನ ಸ್ಥೂಲ ಭಾಗದಿಂದ ಮೂತ್ರ, ಮಧ್ಯ ಭಾಗದಿಂದ ರಕ್ತ, ಸೂಕ್ಷ್ಮ ಭಾಗದಿಂದ ಪ್ರಾಣವುಂಟಾಗುತ್ತವೆ. ತಿಂದ ತೇಜ ಪದಾರ್ಥದ ಸ್ಥೂಲ ಭಾಗದಿಂದ ಅಸ್ಥಿ, ಮಧ್ಯಭಾಗದಿಂದ ಮೆದುಳು, ಸೂಕ್ಷ್ಮಭಾಗದಿಂದ ವಚನವುಂಟಾಗುತ್ತವೆ

ತಾಯಿಯ ರಕ್ತದಿಂದ ರಕ್ತ, ಮಾಂಸ, ಚರ್ಮಗಳೂ, ತಂದೆಯ ವೀರ್ಯದಿಂದ ಅಸ್ಥಿ, ನರ, ಕೊಬ್ಬು, ವೀರ್ಯಗಳೂ ಉಂಟಾಗುತ್ತವೆ

ಪ್ರಶ್ನೆ: ಈ ಸ್ಥೂಲ ಶರೀರಗಳು ಎಷ್ಟು ವಿಧ?

ಉತ್ತರ ಸ್ಥೂಲ ದೇಹವು ಜರಾಯುಜ, ಅಂಡಜ, ಸ್ವೇದಜ ಮತ್ತು ಉದ್ಭಿಜಗಳೆಂದು ನಾಲ್ಕು ವಿಧ.

ಪ್ರಶ್ನೆ: ಜರಾಯುಜ ಎಂದರೇನು ?

ಉತ್ತರ: ಜರೆ ಎಂಬ ಚೀಲದಿಂದ ಉತ್ಪತ್ತಿಯಾಗುವ ಮನುಷ್ಯಾದಿಗಳ ಸ್ಥೂಲ ಶರೀರಗಳು ಜರಾಯುಜಗಳು

ಪ್ರಶ್ನೆ: ಅಂಡಜ ಎಂದರೇನು ?

ಉತ್ತರ: ತತ್ತಿಯಿಂದ ಉತ್ಪತ್ತಿಯಾಗುವ ಪಕ್ಷಿ, ಸರ್ಪ, ಮೊದಲಾದವುಗಳು ಅಂಡಜ.

ಪ್ರಶ್ನೆ: ಸ್ವೇದಜ ಎಂದರೇನು ?

ಉತ್ತರ. ಬೆವರಿನಿಂದ ಹುಟ್ಟುವ ಹೇನು, ಕೂರೆ ಮೊದಲಾದವುಗಳು ಸ್ವೇದಜ.

ಪ್ರಶ್ನೆ: ಉದ್ಭಿಜವೆಂದರೇನು ?

ಉತ್ತರ: ಬೀಜದಿಂದ ಭೂಮಿಯನ್ನು ಒಡೆದು ಬೆಳೆಯುವ ವೃಕ್ಷ ಮೊದಲಾದವುಗಳು ಉದ್ಭಿಜಗಳು

ಇಲ್ಲಿಗೆ ಸ್ಥೂಲ ದೇಹದ ವರ್ಣನೆ ಮುಗಿಯಿತು

## ಸೂಕ್ಷ್ಮ ಶರೀರ

ಸೂಕ್ಷ್ಮ ಶರೀರವು ಪಂಚಪ್ರಾಣ, ಪಂಚಕರ್ಮೇಂದ್ರಿಯ, ಪಂಚ ಜ್ಞಾನೇಂದ್ರಿಯ, ಮನಸ್ಸು, ಬುದ್ಧಿ, ಈ ರೀತಿ ಅಪಂಚೀಕೃತ ಭೂತಗಳ ಹದಿನೇಳು ತತ್ತ್ವಗಳಿಂದ ಆಗಿದೆ ಕೆಲವರು ಈ ಹದಿನೇಳು ತತ್ತ್ವಗಳಲ್ಲಿ ಬುದ್ಧಿಯನ್ನು ಬಿಟ್ಟು ಉಳಿದ ಹದಿನಾರು ತತ್ತ್ವಗಳನ್ನು ಷೋಡಶಕಳಾತ್ಮಕ ಲಿಂಗ ಶರೀರವೆಂದು ಹೇಳುತ್ತಾರೆ. ಮತ್ತೆ ಕೆಲವರು ಅಂತಃಕರಣವು ನಾಲ್ಕೆಂದು ತಿಳಿದು ಸೂಕ್ಷ್ಮ ಶರೀರವು ಇಪ್ಪತ್ತು ತತ್ತ್ವಗಳುಳ್ಳದ್ದೆಂದು ಹೇಳುತ್ತಾರೆ ಹೇಗೆ ಹೇಳಿದರೂ ವಿರೋಧವೇನೂ ಇಲ್ಲ.

ಪ್ರಶ್ನೆ: ಸೂಕ್ಷ್ಮ ಶರೀರದ ಧರ್ಮಗಳು ಯಾವುವು ?

ಉತ್ತರ: ೧. ಶುಭಾಶುಭ ಕರ್ಮಗಳನ್ನು ಮಾಡುವುದು, ೨. ಸುಖ ದುಃಖಗಳನ್ನು ಅನುಭವಿಸುವುದು, ೩. ಇಹಲೋಕಕ್ಕೆ ಬರುವುದು, ೪. ಪರ ಲೋಕಕ್ಕೆ ಹೋಗುವುದು, ೫. ರಾಗದ್ವೇಷಗಳು, ೬ ಶಮದಮಾದಿಗಳು, ೭. ಅಂಧಮಂದಾದಿಗಳು ಇವೇ ಮೊದಲಾದವುಗಳು ಸೂಕ್ಷ್ಮ ಶರೀರದ ಧರ್ಮಗಳು

ಪ್ರಶ್ನೆ: ಇದಕ್ಕೆ ಸೂಕ್ಷ್ಮ ಶರೀರವೆಂಬ ಹೆಸರೇಕೆ ?

ಉತ್ತರ: ಸ್ಥೂಲ ಶರೀರಕ್ಕಿಂತ ಸೂಕ್ಷ್ಮವಾಗಿರುವುದರಿಂದ ಮತ್ತು ನೇತ್ರಾದಿ ಇಂದ್ರಿಯಗಳಿಗೆ ಗೋಚರವಾಗುವುದಿಲ್ಲವಾದುದರಿಂದ ಇದು ಸೂಕ್ಷ್ಮ ಶರೀರ.

ಪ್ರಶ್ನೆ: ಇದಕ್ಕೆ ಲಿಂಗ ಶರೀರವೆಂಬ ಹೆಸರೇಕೆ ?

ಉತ್ತರ ಶಬ್ದಾದಿ ವಿಷಯಗಳನ್ನು ತಿಳಿಯುವುದರಿಂದಲೂ, ಆತ್ಮ ಲಕ್ಷಣವನ್ನು ತಿಳಿಯುವುದರಿಂದಲೂ ಇದಕ್ಕೆ ಲಿಂಗ ಶರೀರವೆಂದು ಹೆಸರು.

ಪ್ರಶ್ನೆ ಇದಕ್ಕೆ ಶರೀರವೆಂತಲೂ, ದೇಹವೆಂತಲೂ ಹೆಸರೇಕೆ?

ಉತ್ತರ: ಇದು ಬ್ರಹ್ಮ ವಿಚಾರದಿಂದ ಜೀರ್ಣವಾಗುವುದರಿಂದ ಶರೀರ ವೆಂತಲೂ, ತತ್ತ್ವಜ್ಞಾನದಿಂದ ದಗ್ಧವಾಗುವುದರಿಂದ ದೇಹವೆಂತಲೂ ಹೆಸರು

ಇಲ್ಲಿಗೆ ಸೂಕ್ಷ್ಮ ಶರೀರದ ವಿಚಾರ ಮುಗಿಯಿತು.

## ಕಾರಣ ಶರೀರ

ಪ್ರಶ್ನೆ ಕಾರಣ ಶರೀರವೆಂದರೇನು ?

ಉತ್ತರ ಸ್ಥೂಲ ಮತ್ತು ಸೂಕ್ಷ್ಮ ದೇಹಗಳಿಗೆ ಅಜ್ಞಾನವು ಕಾರಣವಾದುದರಿಂದ ಅದೇ ಕಾರಣ ಶರೀರವೆಂತಲೂ, ಕಾರಣ ದೇಹವೆಂತಲೂ ಹೇಳಿಸಿಕೊಳ್ಳುತ್ತದೆ.

ಪ್ರಶ್ನೆ ಕಾರಣವಾದ ಅಜ್ಞಾನಕ್ಕೆ ದೇಹವೆಂದು ಕರೆಯಲು ಕಾರಣವೇನು ?

ಉತ್ತರ: ತತ್ತ್ವಜ್ಞಾನದಿಂದ ದಹಿಸಲ್ಪಡುವುದರಿಂದ ಇದಕ್ಕೆ ಅಂದರೆ ಅಜ್ಞಾನಕ್ಕೆ ದೇಹವೆಂದು ಹೆಸರು "ದಹ್ಯತೆ ಇತಿದೇಹಃ".

ಪ್ರಶ್ನೆ. ಕಾರಣವಾದ ಅಜ್ಞಾನಕ್ಕೆ ಶರೀರವೆನ್ನುವ ಕಾರಣವೇನು ?

ಉತ್ತರ: ಅಜ್ಞಾನವು ಬ್ರಹ್ಮವಿಚಾರದಿಂದ ಜೀರ್ಣವಾಗುವುದರಿಂದ ಅಜ್ಞಾನಕ್ಕೆ ಶರೀರವೆಂದು ಹೆಸರು. "ಶೀರ್ಯತೆ ಇತಿ ಶರೀರಃ".

ಇಲ್ಲಿಗೆ ಕಾರಣ ಶರೀರದ ವಿಚಾರ ಮುಗಿಯಿತು ಮತ್ತು ಮೂರು ಶರೀರಗಳ ಸ್ವರೂಪ ವರ್ಣನೆಯೂ ಮುಗಿಯಿತು.

ಅನೇಕ ಮಂದಮತಿಗಳಾದ ಪುರುಷರು ಮೇಲೆ ಹೇಳಿದ ಪಂಚಕೋಶಗಳಲ್ಲಿಯ ಯಾವುದೋ ಒಂದು ಅನಾತ್ಮ ಪದಾರ್ಥವನ್ನು ಆತ್ಮ ಎಂದು ಅಂಗೀಕರಿಸಿ, ಮುಖ್ಯ ಸಾಕ್ಷಿಯಾದ ಪ್ರತ್ಯಗಾತ್ಮ ಸ್ವರೂಪದ ವಿಷಯದಲ್ಲಿ ವಿಮುಖರಾಗಿರುತ್ತಾರೆ.

ಅನ್ನಮಯಕೋಶವಾದ ಸ್ಥೂಲ ದೇಹವೇ ಆತ್ಮನೆಂಬುವ ವಿರೋಚನನ ಸಿದ್ಧಾಂತ

ಕೆಲವರು ಪಾಮರರಾದ ವಿರೋಚನ ಮತಾನುಸಾರಿಗಳು ಸ್ಥೂಲ ಶರೀರ ರೂಪವಾದ ಅನ್ನಮಯ ಕೋಶವನ್ನು ಆತ್ಮನೆಂದು ಹೇಳುತ್ತಾರೆ ಅವರು ಸ್ಥೂಲ ದೇಹವೇ ಆತ್ಮ ಎಂಬ ವಿಷಯದಲ್ಲಿ ಕೆಳಗಿನ ಯುಕ್ತಿಗಳನ್ನು ಹೇಳುತ್ತಾರೆ.

ಯಾವುದರಲ್ಲಿ ಅಹಂಬುದ್ಧಿ ಇರುವುದೋ ಅದಕ್ಕೆ "ಆತ್ಮಾ" ಎನ್ನಬೇಕು ಈ ನ್ಯಾಯದಂತೆ ಸ್ಥೂಲ ಶರೀರದಲ್ಲಿ ಅಹಂಬುದ್ಧಿ ಅಂದರೆ ನಾನೆಂಬ ಬುದ್ಧಿಯು ಆಗುತ್ತದೆ. "ನಾನು ಮನುಷ್ಯ, ನಾನು ಬ್ರಾಹ್ಮಣ" ಎಂಬ ಪ್ರತೀತಿಯು ಎಲ್ಲರಿಗೂ ಉಂಟಾಗುತ್ತದೆ ಮನುಷ್ಯತ್ವವೂ ಬ್ರಾಹ್ಮಣತ್ವವೂ ಸ್ಥೂಲ ಶರೀರದಲ್ಲಿಯೇ ಇರುತ್ತದೆ. ಈ ರೀತಿ ಅಹಂಬುದ್ಧಿ ಅಂದರೆ ನಾನೆಂಬ ಬುದ್ಧಿಯು ಸ್ಥೂಲ ಶರೀರದಲ್ಲಿಯೇ ಉಂಟಾಗುವುದರಿಂದ ಸ್ಥೂಲ ಶರೀರವೇ ಆತ್ಮ.

ಇಲ್ಲವೇ ಯಾವುದರಲ್ಲಿ ಮುಖ್ಯ ಪ್ರೀತಿಯುಂಟಾಗುವುದೋ ಅದೇ ಆತ್ಮ ಎಂದು ಹೇಳಬೇಕು. ಈ ನ್ಯಾಯದಂತೆ ನೋಡಿದರೆ ಸ್ತ್ರೀ, ಪುತ್ರ, ಧನಾದಿಗಳು ಸ್ಥೂಲ ಶರೀರಕ್ಕೆ ಉಪಕಾರಕಗಳಾದುದರಿಂದ ಅವುಗಳಲ್ಲಿ ಪ್ರೀತಿಯುಂಟಾಗುತ್ತದೆ. ಅವು ಶರೀರಕ್ಕೆ ಉಪಕಾರಕಗಳಾಗದಿದ್ದರೆ ಅವುಗಳಲ್ಲಿ ಯಾರಿಗೂ ಪ್ರೀತಿಯುಂಟಾಗುವುದಿಲ್ಲ ಯಾವುದರ ನಿಮಿತ್ತವಾಗಿ ಅನ್ಯ ಪದಾರ್ಥಗಳಲ್ಲಿ ಪ್ರೀತಿಯುಂಟಾಗುವುದೋ ಆ ಸ್ಥೂಲ ಶರೀರದಲ್ಲಿಯೇ ಮುಖ್ಯ ಪ್ರೀತಿಯಿರುವುದರಿಂದ ಸ್ಥೂಲ ಶರೀರವೇ ಆತ್ಮ.

ಮೇಲಿನ ಎರಡು ಕಾರಣಗಳಿಂದ ಸ್ಥೂಲ ದೇಹವೇ ಆತ್ಮವೆಂದು ತಿಳಿಸಿ, ಆ ಸ್ಥೂಲ ಶರೀರಕ್ಕೆ ವಸ್ತ್ರ, ಭೂಷಣ, ಅಂಜನ, ಮಜ್ಜನ, ನಾನಾ ವಿಧದ ಭೋಜನ, ಶೃಂಗಾರ ಭೂಷಣಾದಿಗಳೇ ಪರಮ ಪುರುಷಾರ್ಥವೆಂದೂ ತಿಳಿಸುತ್ತಾರೆ. ಮರಣವೇ ಮೋಕ್ಷ, ಪ್ರತ್ಯಕ್ಷವೇ ಪ್ರಮಾಣ ಎಂಬುದು ಅಸುರ ಸ್ವಾಮಿಯಾದ ವಿರೋಚನನ ಮತ.

## ದೇಹಾತ್ಮವಾದಿಯಾದ ವಿರೋಚನನ ಮತ ಖಂಡನೆ

ಈ ಮತ ಖಂಡನ ಯುಕ್ತಿಗಳು ಏಳು ಅವುಗಳಲ್ಲಿ

೧ ನಾನು ನೋಡುತ್ತೇನೆ, ನಾನು ಕೇಳುತ್ತೇನೆ, ನಾನು ಮಾಡುತ್ತೇನೆ ಎಂಬಲ್ಲಿ ಇಂದ್ರಿಯಗಳಲ್ಲಿ ಅಹಂಬುದ್ಧಿ ಕಂಡುಬರುವುದರಿಂದ ಸ್ಥೂಲ ದೇಹವು ಆತ್ಮವಲ್ಲ.

೨. ನನ್ನ ದೇಹವೆಂಬಲ್ಲಿ ದೇಹದಲ್ಲಿ ಮಮಕಾರವು ಕಂಡುಬರು

ತ್ತದೆ ಆದರಿಂದ ನನ್ನ ದೇಹವೆಂದರೆ ಅದು ಅಹಂಕಾರಕ್ಕೆ ವಿಷಯವಲ್ಲ ವೆಂಬುದು ಸ್ಪಷ್ಟವಾಗುತ್ತದೆ. ಆದುದರಿಂದ ದೇಹವು ಆತ್ಮವಲ್ಲ.

೩. ಸ್ತ್ರೀ ಪುತ್ರ ಮೊದಲಾದವುಗಳಿಗಿಂತ ದೇಹದಲ್ಲಿ ಅಧಿಕ ಪ್ರೀತಿ ಯಿರುವಂತೆ ದೇಹಕ್ಕಿಂತ ಇಂದ್ರಿಯಗಳಲ್ಲಿ ಅಧಿಕ ಪ್ರೀತಿ ಕಂಡುಬರುವುದರಿಂದ ಸ್ಥೂಲ ದೇಹದಲ್ಲಿಯೇ ಮುಖ್ಯ ಪ್ರೀತಿಯೆಂಬುದು ಸರಿಯಲ್ಲ. ಆದುದರಿಂದ ದೇಹವು ಆತ್ಮವಲ್ಲ

೪. ಸ್ಥೂಲ ಶರೀರಕ್ಕೆ ಜನನ ಮರಣಾದಿಗಳು ಇರುತ್ತವೆ. ಆದುದ ರಿಂದ ಜನ್ಮಕ್ಕಿಂತ ಮೊದಲು, ಮರಣದ ನಂತರ ಸ್ಥೂಲ ಶರೀರವು ಇಲ್ಲ ವೆಂಬುದು ನಿರ್ವಿವಾದ ಆದರೂ ಆತ್ಮನಿದ್ದಾನೆ ಸ್ಥೂಲ ದೇಹಕ್ಕಿಂತ ಪೂರ್ವ ಮತ್ತು ನಂತರ ಆತ್ಮನಿಲ್ಲವೆಂದು ಹೇಳಿದರೆ ಕೃತನಾಶ, ಅಕೃತಾ ಭ್ಯಾಗಮವೆಂಬ ದೋಷಗಳು ಸಂಭವಿಸುತ್ತವೆ

ಪ್ರಶ್ನೆ ಕೃತನಾಶ ದೋಷವೆಂದರೇನು ?

ಉತ್ತರ ಮಾಡಿದ ಶುಭಾಶುಭ ಕರ್ಮಗಳಿಗೆ ಫಲವಿಲ್ಲದೆ ನಿರರ್ಥ ಕತೆಯೇ ಕೃತನಾಶ ದೋಷ

ಪ್ರಶ್ನೆ ಅಕೃತಾಭ್ಯಾಗಮ ದೋಷವೆಂದರೇನು ?

ಉತ್ತರ. ಶುಭಾಶುಭ ಕರ್ಮಗಳನ್ನು ಮಾಡದೆ ಸುಖದುಃಖಾದಿಗಳ ಭೋಗವೆಂಬುದು ಅಕೃತಾಭ್ಯಾಗಮ ದೋಷ ಈ ದೋಷಗಳು ಸಂಭವಿಸುವುದ ರಿಂದ ಸ್ಥೂಲ ದೇಹವು ಆತ್ಮವಲ್ಲ

೫ ದೇಹವನ್ನು ಅಲಂಕರಿಸುವುದು, ಪೋಷಿಸುವುದು ಮೊದಲಾದ ಭೋಗಗಳೇ ಪುರುಷಾರ್ಥವೆಂಬುದು ಸರಿಯಲ್ಲ ಯಾಕೆಂದರೆ, ಸಕಲ ಪುರುಷರಿಗೆ ಇಷ್ಟವಾದದ್ದೇ ಪುರುಷಾರ್ಥ ಸಕಲ ಪುರುಷರಿಗೆ "ಸುಖಪ್ರಾಪ್ತಿ, ದುಃಖ ನಿವೃತ್ತಿಯು" ಇಷ್ಟವಾಗಿದೆ; ಅದೇ ಪುರುಷಾರ್ಥ ಈ ಪುರುಷಾರ್ಥವು ಮೋಕ್ಷದ ಸ್ವರೂಪವಾಗಿದೆ. ಇದು ಭೋಗದಲ್ಲಿ ಇರುವುದಿಲ್ಲ ಭೋಗದಲ್ಲಿ ಯಾದರೋ "ಭೋಗೇ ರೋಗ ಭಯಂ" ಎಂಬಂತೆ ದೋಷ, ದುಃಖ, ಭಯ ಇವುಗಳು ಪೂರ್ಣವಾಗಿವೆ ಈ ಕಾರಣದಿಂದ ಸ್ಥೂಲ ದೇಹವು ಆತ್ಮವಲ್ಲ

೬ ದೇಹವೇ ಆತ್ಮನೆಂದರೆ ಮರಣಾನಂತರ ಆತ್ಮವೆಂದು ಹೇಳುವ

ದೇಹವು ಸುಡಲ್ಪಡುವುದೆಂದರೆ ಮೋಕ್ಷಕ್ಕೆ ಆಸ್ಪದವೇ ಇಲ್ಲ ಆದುದರಿಂದ ಸ್ಥೂಲ ದೇಹವು ಆತ್ಮವಲ್ಲ

೭. ಅನುಮಾನ, ಶಬ್ದ ಮೊದಲಾದ ಪ್ರಮಾಣಗಳು ಎಲ್ಲರಿಗೂ ವ್ಯವಹಾರಕ್ಕೆ ಅಗತ್ಯವಾದುದರಿಂದ ಪ್ರತ್ಯಕ್ಷ ಒಂದೇ ಪ್ರಮಾಣವೆಂಬುದು ಸರಿಯಲ್ಲ.

ಮೇಲ್ಕಂಡ ಮತದಲ್ಲಿ ಪ್ರಲಾಪ ಮಾತ್ರ ಅಧಿಕವಾದುದರಿಂದ ರಹಸ್ಯ ವೇನೂ ಕಂಡುಬರುವುದಿಲ್ಲ ಇದರ ವಿಶೇಷ ಖಂಡನೆ ಅಗತ್ಯವಿಲ್ಲ.

ಈ ದೇಹಾತ್ಮವಾದಿ ಮತದಲ್ಲಿ ಮತ್ತೊಂದು ಚಾರ್ವಾಕಮತ ಕಂಡು ಬರುತ್ತದೆ. ಅದರ ಖಂಡನೆ ಕೆಳಗಿನಂತೆ ಇದೆ.

## ಚಾರ್ವಾಕ ಮತ ಖಂಡನೆ

ಚಾರ್ವಾಕನ ಅಭಿಪ್ರಾಯವೇನೆಂದರೆ, ಆಕಾಶ ಭೂತವನ್ನು ಬಿಟ್ಟು ವಾಯು ಮೊದಲಾದ ನಾಲ್ಕು ಜಡ ಭೂತಗಳೇ ಆತ್ಮ ಈ ವಿಷಯದಲ್ಲಿ ಯಾರಾದರೂ ದೇಹದಲ್ಲಿ ಚೈತನ್ಯ ವ್ಯವಹಾರವು ಕಂಡುಬರುತ್ತದೆಯಲ್ಲವೇ ? ಅದು ಎಲ್ಲಿಂದ ಬಂತು ? ಎಂದು ಕೇಳಿದರೆ ಅದಕ್ಕೆ ಸಮಾಧಾನವೇನೆಂದರೆ –

ಎಲೆ, ಅಡಿಕೆ, ಸುಣ್ಣ ಮೊದಲಾದ ಪದಾರ್ಥಗಳ ಮಿಶ್ರಣಕ್ಕೆ ತಾಂಬೂಲ ವೆನ್ನುತ್ತಾರೆ. ಆ ಪ್ರತ್ಯೇಕ ಪ್ರತ್ಯೇಕವಾದ ಪದಾರ್ಥಗಳಲ್ಲಿ ಯಾವುದ ರಲ್ಲಿಯೂ ಕೆಂಪು ವರ್ಣವಿಲ್ಲ. ಆದರೂ ಎಲ್ಲಾ ಪದಾರ್ಥಗಳ ಮಿಶ್ರಣದಿಂದ ಕೆಂಪುವರ್ಣ ಉಂಟಾಗುವಂತೆ ಭೂತಕಾರ್ಯವಾದ ಜಡಪದಾರ್ಥಗಳ ಮಿಶ್ರಣ ದಿಂದ ಸ್ಥೂಲ ಶರೀರವು ತಯಾರಾಗುವುದರಿಂದ ಇದರಲ್ಲಿ ಚೈತನ್ಯವು ಕಂಡು ಬರುತ್ತದೆ ಈ ಚೈತನ್ಯವು ಸಕಲ ಪದಾರ್ಥಗಳ ಮಿಶ್ರಣದಿಂದ ಉಂಟಾದು ದರಿಂದ ನಾಲ್ಕುಭೂತಗಳಿಗಿಂತ ಬೇರೆಯಾಗಿ ಚೈತನ್ಯವೆಂಬುದು ಇಲ್ಲವೇ ಇಲ್ಲ.

ಚಾರ್ವಾಕನೆಂಬ ಮೂರ್ಖನಿಗೆ ವಿಚಾರ ಶಕ್ತಿಯಿಲ್ಲ. ಹೇಗೆಂದರೆ, ದೇಹವು ಭೂತಕಾರ್ಯವಾದ ಅನಾತ್ಮಪದಾರ್ಥಗಳ ಮಿಶ್ರಣದಿಂದ ಆಗಿರು ವಂತೆ, ಘಟಪಟಾದಿಗಳೂ, ಭೂತಕಾರ್ಯವಾದ ನಾನಾ ಪದಾರ್ಥಗಳ

ಮಿಶ್ರಣದಿಂದ ಆಗಿರುತ್ತವೆ. ಅವುಗಳಲ್ಲಿ ಚೈತನ್ಯವು ಏಕೆ ಕಂಡುಬರುವುದಿಲ್ಲ? ಇಲ್ಲವೇ ಯಾವ ದೇಹದಲ್ಲಿ ಭೂತಕಾರ್ಯವಾದ ನಾನಾ ಪದಾರ್ಥಗಳ ಸಂಯೋಗದಿಂದ ಚೈತನ್ಯವು ಉದ್ಭವಿಸಿರುವುದೋ ಅದೇ ದೇಹದಲ್ಲಿ ಸುಷುಪ್ತಿ, ಮರಣ, ಮೂರ್ಛೆ ಮೊದಲಾದವುಗಳಲ್ಲಿ ಚೈತನ್ಯವು ಏಕೆ ಕಂಡುಬರುವುದಿಲ್ಲ ? ಆದುದರಿಂದ ಚೌರ್ವಾಕಮತವೂ ಚೌರ್ವಾಕಮತವೂ ಖಂಡನೀಯ.

ಇಲ್ಲಿಗೆ ದೇಹಾತ್ಮವಾದಿಯ ಮತದ ಸ್ವರೂಪ ಮತ್ತು ಅದರ ಖಂಡನೆಯು ಮುಗಿಯಿತು

## ಇಂದ್ರಿಯಾತ್ಮವಾದಿಗಳ ಮತ

ಪ್ರಶ್ನೆ: ಇಂದ್ರಿಯಗಳೇ ಆತ್ಮನೆಂಬುವ ಇಂದ್ರಿಯಾತ್ಮವಾದಿಗಳ ಮತದ ಸ್ವರೂಪವೇನು ?

ಉತ್ತರ ಇಂದ್ರಿಯಾತ್ಮವಾದಿಗಳ ಮತದಂತೆ ಸ್ಥೂಲ ಶರೀರವು ಆತ್ಮನಲ್ಲ. ಯಾಕೆಂದರೆ, ಸ್ಥೂಲ ಶರೀರದಲ್ಲಿ ಯಾರು ಇರುವುದರಿಂದ ಜೀವಿತ ವ್ಯವಹಾರವು ನಡೆಯುವುದೋ, ಯಾರು ಇಲ್ಲದೆ ಇರುವುದರಿಂದ ಮರಣ ವ್ಯವಹಾರವು ಆಗುವುದೋ ಅದೇ ಆತ್ಮ. ಆ ಆತ್ಮನು ಸ್ಥೂಲ ಶರೀರಕ್ಕಿಂತ ಭಿನ್ನನು. ಜೀವನ ಮರಣಾದಿಗಳು ಇಂದ್ರಿಯಗಳಿಗೆ ಅಧೀನವಾಗಿವೆ ಶರೀರದಲ್ಲಿ ಇಂದ್ರಿಯಗಳು ಇರುವವರೆಗೆ ಜೀವನವೆನ್ನುತ್ತಾರೆ ಶರೀರದಿಂದ ಇಂದ್ರಿಯಗಳು ಹೊರಟು ಹೋದರೆ ಮರಣವೆನ್ನುತ್ತಾರೆ. ಮತ್ತು "ನಾನು ನೋಡುತ್ತೇನೆ, ನಾನು ಕೇಳುತ್ತೇನೆ" ಎಂಬ ಅಹಂಬುದ್ಧಿಯು ಅಂದರೆ ನಾನೆಂಬ ಬುದ್ಧಿಯು ಇಂದ್ರಿಯಗಳಲ್ಲಿ ಕಂಡುಬರುವುದರಿಂದ ಇಂದ್ರಿಯಗಳೇ ಆತ್ಮ. ಇದೇ ಇಂದ್ರಿಯಾತ್ಮವಾದಿಯ ಮತದ ಸ್ವರೂಪ

## ಇಂದ್ರಿಯಾತ್ಮವಾದಿಯ ಮತ ಖಂಡನೆ

ಈ ಮತ ಖಂಡನೆಯು ಆರು ಯುಕ್ತಿಗಳಿಂದ ಕೂಡಿದೆ ಅವುಗಳಲ್ಲಿ–

೧. ಯಾವ ಪದಾರ್ಥವು ಇಲ್ಲದೇ ಇರುವುದರಿಂದ ಶರೀರವು ಇಲ್ಲದಂತಾಗು

ವುದೋ ಅದಕ್ಕೆ ಆತ್ಮ ಎಂದು ಹೇಳಬೇಕು ಎನ್ನುವುದು ಮೊದಲನೆ ಯುಕ್ತಿ ನೇತ್ರಾದಿ ಇಂದ್ರಿಯಗಳು ಇಲ್ಲದಿದ್ದರೂ ಶರೀರವು ಇರುವುದರಿಂದ ಇಂದ್ರಿಯಗಳು ಆತ್ಮವಲ್ಲ

೨ "ನಾನು ನೋಡುತ್ತೇನೆ, ನಾನು ಮಾತನಾಡುತ್ತೇನೆ" ಎಂಬ ವ್ಯವಹಾರದಿಂದ ಇಂದ್ರಿಯಗಳು ಕರಣವೆಂದು ಸಿದ್ಧವಾಗುತ್ತವೆ. ಇಲ್ಲಿ "ನಾನು ನೋಡುತ್ತೇನೆ" ಅಂದರೆ ನೇತ್ರವುಳ್ಳವನಾದ ನಾನು ನೋಡುತ್ತೇನೆ ಎಂದರ್ಥ, ಅಷ್ಟೇ. ನಾನು ನೇತ್ರರೂಪನೆಂದು ಅರ್ಥವಲ್ಲ. ಆದುದರಿಂದ "ನಾನು" ಎಂಬ ಮಾತಿಗೆ ವಿಷಯವು ಇಂದ್ರಿಯಕ್ಕಿಂತ ಭಿನ್ನವೆಂದು ಸಿದ್ಧವಾಗುತ್ತದೆ, ಮತ್ತು "ನನ್ನ ದೃಷ್ಟಿಯು ಮಂದವಾಗಿದೆ" ಎನ್ನುವುದರಿಂದ ಇಂದ್ರಿಯಗಳು ಮಮತ್ವಕ್ಕೆ ವಿಷಯವೆಂದು ಸಿದ್ಧವಾಗುತ್ತದೆ. ಅವು ಅಹಂಕಾರಕ್ಕೆ ವಿಷಯ ವಲ್ಲವೆಂದು ಸಿದ್ಧಿಸುತ್ತದೆ ಆದ್ದರಿಂದ ಯಾವ ಇಂದ್ರಿಯವೂ ಆತ್ಮವಲ್ಲ.

೩ ಯಾವನು ಏನನ್ನು ನೋಡುತ್ತಾನೋ ಆ ನೋಡುವವನು ನೋಡುವ ವಸ್ತುಗಳಿಗಿಂತ ಬೇರೆಯಾಗಿರಬೇಕು "ಘಟಾದ್ರಷ್ಟಾ ಘಟಾದ್ಭಿನ್ನ" ಎಂಬ ನ್ಯಾಯದಂತೆ ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರಬೇಕು. ಇದರಂತೆ ಇಂದ್ರಿಯಗಳ ಅಂಧತ್ವ, ಮಂದತ್ವ, ಪಟುತ್ವಗಳನ್ನು ನೋಡುವವನು ಆತ್ಮ. ಅವನು ಇಂದ್ರಿಯಗಳಿಗಿಂತ ಬೇರೆ ಎಂದು ಹೇಳಬೇಕಾದ ಅಗತ್ಯವಿಲ್ಲ.

೪ ಮನಸ್ಸು ವ್ಯಾಕುಲವಾದಾಗ ನೇತ್ರಕ್ಕೆ ಯಾವ ಪದಾರ್ಥವೂ ತೋರುವುದಿಲ್ಲ. ಕಿವಿಗೆ ಯಾವ ಶಬ್ದವೂ ಕೇಳುವುದಿಲ್ಲ. ಆದುದರಿಂದ ಇಂದ್ರಿಯಗಳು ಜಡವೆಂದು ತೋರುತ್ತವೆ. ಅವು ಆತ್ಮವಲ್ಲ.

೫ ಇಷ್ಟು ಹೇಳಿದರೂ ಹಠದಿಂದ ಇಂದ್ರಿಯಗಳೇ ಚೈತನ್ಯವೆಂದು ಹೇಳಿದರೆ ಅವರನ್ನು ಹೀಗೆ ಕೇಳಬೇಕು: ಒಂದೊಂದು ಇಂದ್ರಿಯವೂ ಚೈತನ್ಯವೇ ? ಇಲ್ಲವೇ ಎಲ್ಲಾ ಇಂದ್ರಿಯಗಳೂ ಚೈತನ್ಯವೇ ? ಇಲ್ಲವೇ ಪ್ರತ್ಯೇಕ ಪ್ರತ್ಯೇಕ ಇಂದ್ರಿಯಗಳು ಆತ್ಮವೇ ? ಇದರಂತೆ ಸಕಲೇಂದ್ರಿಯಗಳೂ ಚೈತನ್ಯವೇ ?

ಇವುಗಳಲ್ಲಿ ಮೊದಲಿನ ಪಕ್ಷವು ಸರಿಯಲ್ಲ ಯಾವ ಒಂದು ಇಂದ್ರಿಯವು ಚೈತನ್ಯವೆಂದು ಹೇಳಲ್ಪಡುವುದೋ, ಆ ಇಂದ್ರಿಯವು ಇಲ್ಲದಿದ್ದಾಗ್ಯೂ ಜ್ಞಾನ

ಮತ್ತು ಜೀವನು ಪ್ರತೀತಿಯಾಗುತ್ತಾನೆ ಆದ್ದರಿಂದ ಒಂದೊಂದು ಇಂದ್ರಿಯವೂ ಚೈತನ್ಯವೆಂಬುದು ಸರಿಯಲ್ಲ ಇನ್ನು ಎಲ್ಲಾ ಇಂದ್ರಿಯಗಳು ಸೇರಿ ಚೈತನ್ಯವೆಂಬ ಎರಡನೇ ಪಕ್ಷವೂ ಸರಿಯಲ್ಲ ಏಕೆಂದರೆ ಒಂದು ಇಂದ್ರಿಯ ನಷ್ಟವಾದರೆ ಇಂದ್ರಿಯ ಸಮುದಾಯವೆಲ್ಲ ನಷ್ಟವಾಗಬೇಕು. ಆಗ ಚೈತನ್ಯ-ಜೀವ ಯಾರೂ ಇರಕೂಡದಲ್ಲವೇ ? ಆದರೆ ಅನುಭವದಲ್ಲಿ ಹಾಗೆ ಕಂಡುಬರುವುದಿಲ್ಲ. ಆದುದರಿಂದ ಇಂದ್ರಿಯ ಸಮುದಾಯವು ಚೈತನ್ಯವಲ್ಲ. ಇನ್ನು ಇಂದ್ರಿಯಗಳು ಪ್ರತ್ಯೇಕ ಪ್ರತ್ಯೇಕವಾಗಿ ಆತ್ಮ ಎಂಬ ಮೂರನೇ ಪಕ್ಷವೂ ಸರಿಯಲ್ಲ ಏಕೆಂದರೆ, ಇಂದ್ರಿಯಗಳು ಪ್ರತ್ಯೇಕವಾಗಿ ಆತ್ಮನೆಂದರೆ ಒಂದು ಶರೀರದಲ್ಲಿ ಹತ್ತು ಆತ್ಮರಿರುವರೆಂದು ಹೇಳಬೇಕಾಗುತ್ತದೆ ಹೀಗಾದರೆ ಒಂದೊಂದು ಆತ್ಮದ ಇಚ್ಛೆಯೂ ಬೇರೆ ಬೇರೆಯಾಗುವುದರಿಂದ ಒಂದು ಬಾಳೆಗಿಡಕ್ಕೆ ಹತ್ತು ಆನೆಗಳು ಬಿದ್ದರೆ ಆ ಬಾಳೆಗಿಡವು ನಾಶವಾದಂತೆ ಶರೀರವು ನಾಶವಾಗಬೇಕಾಗುತ್ತದೆ. ಈ ಪ್ರಕಾರ ಇಂದ್ರಿಯಗಳು ಅಚೇತನವೆಂದು ಸಿದ್ಧವಾಗುವುದರಿಂದ ಅವು ಯಾವ ರೀತಿಯಿಂದಲೂ ಚೈತನ್ಯ ಅಂದರೆ ಆತ್ಮವಾಗಲಾರವು.

೯. ಶ್ರುತಿಯಲ್ಲಿ ಹೇಳಿದ ಇಂದ್ರಿಯಗಳ ವಾದವು ಇಂದ್ರಿಯಾಭಿಮಾನಿ ದೇವತೆಗಳನ್ನು ಉದ್ದೇಶಿಸಿ ಹೇಳಿರುವುದಾದ್ದರಿಂದ ಆ ಸಂವಾದದಿಂದಲೂ ಇಂದ್ರಿಯಗಳು ಚೈತನ್ಯ ಎಂಬುದು ಸಂಭವಿಸುವುದಿಲ್ಲ.

### ಹಿರಣ್ಯಗರ್ಭನನ್ನು ಉಪಾಸಿಸುವವರ ಮತ
### –ಪ್ರಾಣವೇ ಆತ್ಮ–

ಹಿರಣ್ಯ ಗರ್ಭೋಪಾಸಕರು ಪ್ರಾಣವೇ ಆತ್ಮ ಎನ್ನುತ್ತಾರೆ ಅವರು ಈ ವಿಷಯದಲ್ಲಿ ಹೇಳುವ ಯುಕ್ತಿಯೇನೆಂದರೆ, ಮೃತ್ಯುಕಾಲದಲ್ಲಿ, ಮೂರ್ಛೆ ಕಾಲದಲ್ಲಿ ಅವನ ಪುತ್ರಾದಿಗಳು ಪ್ರಾಣವಿದ್ದರೆ ಜೀವಿತವಾಗಿದ್ದಾನೆನ್ನುತ್ತಾರೆ. ಪ್ರಾಣವು ಇಲ್ಲದಿದ್ದರೆ ಸತ್ತನೆನ್ನುತ್ತಾರೆ. ಇಲ್ಲವೇ ಶರೀರದಲ್ಲಿ ನೇತ್ರೇಂದ್ರಿಯವಿಲ್ಲದಿದ್ದರೆ ಅಂಧನೆನ್ನುತ್ತಾರೆ ಶ್ರೋತ್ರವು ಇಲ್ಲದಿದ್ದರೆ ಬಧಿರನೆನ್ನುತ್ತಾರೆ. ವಾಗೀಂದ್ರಿಯವು ಇಲ್ಲದಿದ್ದರೆ ಮೂಕನೆನ್ನುತ್ತಾರೆ. ಇದೇ ರೀತಿ ಯಾವ ಇಂದ್ರಿಯ ಇಲ್ಲದಿದ್ದರೂ, ಆ ಇಂದ್ರಿಯ ವ್ಯಾಪಾರ ಇಲ್ಲದಿದ್ದರೂ, ಇತರೆ

ಇಂದ್ರಿಯಗಳ ವ್ಯಾಪಾರವು ಜರುಗುತ್ತಲೇ ಇರುವುವು. ಆಗ ಶರೀರವೂ ಸಹ ಅಮಂಗಲವಾಗುವುದಿಲ್ಲ. ಆದರೆ ಪ್ರಾಣವು ಇಲ್ಲದಿದ್ದರೆ ತಕ್ಷಣ ಪ್ರೇತರೂಪ ವಾಗುತ್ತದೆ, ಅಮಂಗಲವಾಗುತ್ತದೆ. ಇಷ್ಟೇ ಅಲ್ಲ, ನೋಡುವುದಕ್ಕೆ ಭಯಂಕರವಾಗಿ ಶರೀರವು ಬಿದ್ದುಹೋಗುತ್ತದೆ.

"ನಾನು ನೋಡುತ್ತಿದ್ದೇನೆ, ನಾನು ಕೇಳುತ್ತಿದ್ದೇನೆ' ಎಂಬ ಪ್ರತೀತಿ ಯಿಂದ ಆತ್ಮನು ಇಂದ್ರಿಯಗಳಿಗಿಂತ ಭಿನ್ನನೆಂದು ಸಿದ್ಧಿಸುತ್ತದೆ. ಏಕೆಂದರೆ, ನೇತ್ರರೂಪನಾದ ನಾನು ನೋಡುತ್ತೇನೆ, ಶ್ರವಣರೂಪನಾದ ನಾನು ಕೇಳು ತ್ತೇನೆ ಎಂಬ ಪ್ರತೀತಿಯಾಗುವ ಪಕ್ಷದಲ್ಲಿ ಇಂದ್ರಿಯಗಳು ಆತ್ಮನೆಂದು ಸಿದ್ಧಿಸಬಹುದಾಗಿತ್ತು. ''ನೇತ್ರವಂತನಾದ ನಾನು ನೋಡುತ್ತೇನೆ, ಶ್ರೋತ್ರ ವಂತನಾದ ನಾನು ಕೇಳುತ್ತೇನೆ" ಎಂಬ ಪ್ರತೀತಿಯಾಗುತ್ತದೆ. ಆದುದರಿಂದ ಇಂದ್ರಿಯಗಳಿಗಿಂತ ಆತ್ಮ ಬೇರೆಯೆಂದು ಸಿದ್ಧಿಸುತ್ತದೆ.

ಸುಷುಪ್ತಿಯಲ್ಲಿ ಸರ್ವೇಂದ್ರಿಯಗಳ ಅಭಾವವಾಗಿದ್ದರೂ ಪ್ರಾಣವಿರುವುದ ರಿಂದ ಜೀವಿತ ವ್ಯಾಪಾರವು ನಡೆಯುತ್ತದೆ ಈ ರೀತಿ ಜೀವನ ಮರಣಗಳು ಇಂದ್ರಿಯಾಧೀನವಲ್ಲ. ಸ್ಥೂಲ ಶರೀರಕ್ಕೂ ಪ್ರಾಣಕ್ಕೂ ಸಂಯೋಗವಿದ್ದರೆ ಜೀವನವೆಂತಲೂ, ವಿಯೋಗಕ್ಕೆ ಮರಣವೆಂತಲೂ ಸಿದ್ಧಿಸುತ್ತದೆ. ಅಂದರೆ ಜೀವನ ಮರಣಗಳು ಪ್ರಾಣಾಧೀನಗಳು ಎಂದು ತಿಳಿಯಬೇಕು

ಶ್ರುತಿಯಲ್ಲಿ ಪ್ರಾಣ ಮತ್ತು ಇಂದ್ರಿಯಗಳ ಕಲಹವು ಹೇಳಿದ್ದರ ಮೇಲೆ ಪ್ರಾಣವೇ ಆತ್ಮನೆಂದು ತಿಳಿಯುತ್ತದೆ

## ಪ್ರಾಣವೇ ಆತ್ಮ ಎಂಬುವರ ಮತ ಖಂಡನೆ

ಪ್ರಾಣವೇ ಆತ್ಮನೆಂಬುವರ ಮತವನ್ನು ಖಂಡಿಸಲು ಒಂಭತ್ತು ಯುಕ್ತಿಗಳು ಪ್ರತಿಪಾದಿತವಾಗಿವೆ

೧. ಹೊರಗಿನ ವಾಯುವಿನಂತೆ ಪ್ರಾಣವು ವಾಯುವಾಗಿ ಇರುವುದ ರಿಂದ ಪ್ರಾಣವು ಆತ್ಮವಲ್ಲ.

೨. ಪ್ರಾಣವು ಪ್ರತೀತಿಯಾಗದಿದ್ದರೆ ಮರಣವು ಸಿದ್ಧಿಸುವುದೆಂಬುದು ನಿಯಮವಲ್ಲ. ಏಕೆಂದರೆ, ವೃಕ್ಷದಲ್ಲಿ ಪ್ರಾಣವು ಪ್ರತೀತಿಯಾಗದಿದ್ದರೂ

ಅದು ಸಜೀವವಾಗಿಯೇ ಇರುತ್ತದೆ ಅದರಂತೆ ಮೂರ್ಛಾ ಸಮಯದಲ್ಲಿ ಪ್ರಾಣವು ಪ್ರತೀತಿಯಾಗದಿದ್ದರೂ ಸತ್ತನೆಂದು ಯಾರೂ ಹೇಳುವುದಿಲ್ಲ. ಈ ವಿಧವಾಗಿ ಜೀವನ ಮರಣಗಳ ಪ್ರತೀತಿಯು ಕೇವಲ ಪ್ರಾಣದ ಪ್ರತೀತಿಗೆ ಅಧೀನವಲ್ಲ ಆದುದರಿಂದ ಪ್ರಾಣವು ಆತ್ಮವಲ್ಲ

೩ ನಿದ್ರೆಯಲ್ಲಿ ಇರುವಾಗ ಪ್ರಾಣವು ಜಾಗ್ರತವಾಗಿದ್ದರೂ ಮಿತ್ರನು ಬಂದರೆ ಆದರಿಸುವುದಿಲ್ಲ ಚೋರನು ಬಂದು ಏನಾದರೂ ಪದಾರ್ಥವನ್ನು ತೆಗೆದುಕೊಂಡು ಹೋಗುತ್ತಿದ್ದರೆ ಆಟಂಕಿಸುವುದಿಲ್ಲ. ಈ ಕಾರಣದಿಂದ ಪ್ರಾಣವು ಜಡನೆಂದು ಸಿದ್ಧಿಸುತ್ತದೆ ಅದು ಆತ್ಮವಲ್ಲ

೪ ಪ್ರಾಣವು ಹೊರಗೆ ಹೋಗುವುದರಿಂದಲೇ ದೇಹವು ಮೃತವೆಂಬುದು ಅಸಂಗತ ಏಕೆಂದರೆ, ಜಠರಾಗ್ನಿಯು ಹೊರಗೆ ಹೋಗುವುದರಿಂದಲೂ ಮರಣವಾಗಬಹುದು ಆದುದರಿಂದ ಪ್ರಾಣವು ಆತ್ಮವಲ್ಲ.

೫ ಶ್ರುತಿಯಲ್ಲಿ ಪ್ರಾಣವನ್ನು ಶ್ರೇಷ್ಠವೆಂದು ಹೇಳಿರುವುದು ಪ್ರಾಣೋಪಾಸನೆಯಲ್ಲಿ ಪ್ರವೃತ್ತಿಯುಂಟುಮಾಡುವುದಕ್ಕಾಗಿ ಎಂದು ತಿಳಿಯಬೇಕು. ಇಲ್ಲವೇ ಸಕಲೇಂದ್ರಿಯಗಳಿಗಿಂತ ಪ್ರಾಣವು ಶ್ರೇಷ್ಠ ಎಂಬ ಅಭಿಪ್ರಾಯದಿಂದ ಹೇಳಿದೆ. ಅಷ್ಟೇ ವಿನಃ ಎಲ್ಲಕ್ಕಿಂತ ಪ್ರಾಣವು ಶ್ರೇಷ್ಠವೆಂತಲೂ, ಆ ಪ್ರಾಣವೇ ಆತ್ಮನೆಂತಲೂ ಹೇಳುವ ಅಭಿಪ್ರಾಯದಿಂದಲ್ಲ.

೬ ಶ್ರುತಿಯಲ್ಲಿ ಪ್ರಾಣಮಯ ಮೊದಲಾದ ಕೋಶಗಳನ್ನು ಆತ್ಮ ಎಂದು ಹೇಳುವ ತಾತ್ಪರ್ಯವೇನೆಂದರೆ, ಸ್ಥೂಲಾರುಂಧತಿ ನ್ಯಾಯದಿಂದ ಅಧಿಷ್ಠಾನವಾದ ಪ್ರತ್ಯಗಾತ್ಮನನ್ನು ತಿಳಿಯಬೇಕೆಂಬ ಅಭಿಪ್ರಾಯದಿಂದ ಹೇಳಿದೆ ಪ್ರಾಣವೇ ಆತ್ಮನೆಂಬ ಅಭಿಪ್ರಾಯದಿಂದ ಹೇಳಿದ್ದಲ್ಲ.

೭ ಶ್ರುತಿಯಲ್ಲಿ ಹೇಳಿದ ಪ್ರಾಣ ಮತ್ತು ಇಂದ್ರಿಯ ಕಲಹವು ಉತ್ಪ್ರೇಕ್ಷಾ ರೂಪವಾಗಿ, ಮತ್ತು ಅವುಗಳ ಅಭಿಮಾನಿ ದೇವತೆಗಳನ್ನು ಉದ್ದೇಶಿಸಿ ಹೇಳಿದ್ದಾಗಿದೆ ಪ್ರಾಣವು ಚೈತನ್ಯ, ಅದೇ ಆತ್ಮನೆಂದು ಹೇಳುವ ಅಭಿಪ್ರಾಯದಿಂದ ಹೇಳಿಲ್ಲ

ಪ್ರ ಶ್ರುತಿಯಲ್ಲಿ ಹೇಳಿದ ಇಂದ್ರಿಯ ಪ್ರಾಣಗಳ ಕಲಹವೇನು ?

ಉ ಒಂದು ಸಾರಿ ಪ್ರಾಣ ಮತ್ತು ಇಂದ್ರಿಯಗಳಿಗೆ ತಮ್ಮ ತಮ್ಮಲ್ಲಿ ವಿವಾದ ಉಂಟಾಯಿತು. ಆ ವಿವಾದದ ಸ್ವರೂಪವೇನೆಂದರೆ, ನಮ್ಮಲ್ಲಿ ಶ್ರೇಷ್ಠರು

ಯಾರು ? ಎಂಬುದು. ಆಗ ಸರ್ವರೂ ಸೇರಿ ತಮ್ಮ ಸ್ವಾಮಿಯಾದ ಪ್ರಜಾಪತಿಯ ಹತ್ತಿರ ಹೋಗಿ, "ಹೇ ಪ್ರಭು, ನಮ್ಮಲ್ಲಿ ಶ್ರೇಷ್ಠರು ಯಾರು ? ತಾವು ದಯಮಾಡಿ ಈ ವಿಷಯವನ್ನು ಬೋಧಿಸಿರಿ" ಎಂದು ಪ್ರಾರ್ಥಿಸಿದರು. ಆಗ ಪ್ರಜಾಪತಿಯು "ನೀವು ಒಬ್ಬೊಬ್ಬರೂ ಶರೀರವನ್ನು ಬಿಟ್ಟು ಹೊರಗೆ ಹೋಗಿರಿ. ಯಾರು ಹೊರಗೆ ಹೋಗುವುದರಿಂದ ಶರೀರವು ಅಮಂಗಲವಾಗಿ ಬಿದ್ದುಹೋಗುವುದೋ ಮತ್ತು ಮರಣ ವ್ಯವಹಾರ ನಡೆಯುತ್ತದೆಯೋ ಅವನೇ ನಿಮ್ಮಲ್ಲಿ ಶ್ರೇಷ್ಠವಾದವನು" ಎಂದು ಹೇಳಿದನು.

ಈ ರೀತಿ ಪ್ರಜಾಪತಿಯ ಆಜ್ಞೆಯನ್ನು ಕೇಳಿ, ಎಲ್ಲರೂ ಒಂದು ಶರೀರದಿಂದ ಹೊರಗೆ ಹೋಗಲು ಆರಂಭಿಸಿದರು. ನೇತ್ರೇಂದ್ರಿಯು ಹೊರಗೆ ಹೋದಾಗ ಜನರು ಕುರುಡನೆಂದರು; ಅಷ್ಟೇ. ಮೃತನೆಂದು ಅನ್ನಲಿಲ್ಲ. ನಂತರ ಶ್ರವಣೇಂದ್ರಿಯವು ಹೊರಗೆ ಹೋಗಲು ಎಲ್ಲರೂ ಕಿವುಡನೆಂದರು ಮೃತನೆಂದು ಅನ್ನಲಿಲ್ಲ. ಇದೇ ರೀತಿ ಯಾವ ಯಾವ ಇಂದ್ರಿಯಗಳು ಹೊರಗೆ ಹೋದುವೋ ಅವುಗಳ ಅಭಾವ ಸೂಚಕವಾದ ಒಂದೊಂದು ಹೆಸರು ಮಾತ್ರ ಪ್ರಾಪ್ತಿಯಾಯಿತು ಮತ್ತು ಹೊರಗೆ ಹೋದ ಇಂದ್ರಿಯವನ್ನು ಬಿಟ್ಟು ಇತರೆ ಇಂದ್ರಿಯಗಳ ವ್ಯವಹಾರವು ನಡೆಯುತ್ತಲೇ ಇತ್ತು ಶರೀರವು ಅಮಂಗಲವಾಗಲಿಲ್ಲ. ಸತ್ತನೆಂದು ಯಾರೂ ಭಾವಿಸಲಿಲ್ಲ. ನಂತರ ಪ್ರಾಣವು ಹೊರಗೆ ಹೋಗಲು ಆರಂಭಿಸಲು ಶರೀರವು ಅಮಂಗಲವಾಗಿ ಭಯಂಕರವಾಗಿ ಭೂಮಿಯ ಮೇಲೆ ಬೀಳಲಾರಂಭಿಸಿತು. ಆಗ ಸತ್ತನೆಂದು ಎಲ್ಲರೂ ಅಳಹತ್ತಿದರು. ಆಗ ಇಂದ್ರಿಯಗಳು ತಮ್ಮಲ್ಲಿ ಪ್ರಾಣವೇ ಶ್ರೇಷ್ಠವೆಂತಲೂ, ಅವನೇ ನಮ್ಮ ಸ್ವಾಮಿಯೆಂದೂ ತಿಳಿದುಕೊಂಡರು

೮. "ಹಸಿವಿನಿಂದ ನನ್ನ ಪ್ರಾಣವು ಹೊರಟುಹೋಗುತ್ತದೆ ಊಟ ಮಾಡಿದರೆ ನನ್ನ ಪ್ರಾಣವು ತೃಪ್ತಿಯಾಗುತ್ತದೆ" ಎನ್ನುತ್ತಾರೆ. ಈ ಮಾತಿನಿಂದ ಪ್ರಾಣವು ಮಮಕಾರಕ್ಕೆ ವಿಷಯವೆಂದು ತಿಳಿಯುತ್ತದೆ. ಈ ರೀತಿ ಮಮಕಾರಕ್ಕೆ ವಿಷಯವಾದುದರಿಂದ ಅದು ಅಹಂಕಾರಕ್ಕೆ ವಿಷಯವಲ್ಲ. ಆದ್ದರಿಂದ ಪ್ರಾಣವು ಆತ್ಮವಲ್ಲ

೯. ಶ್ವಾಸೋಚ್ಛ್ವಾಸ ವ್ಯವಹಾರ ಪ್ರಸಂಗದಲ್ಲಿ ತನ್ನ ಪ್ರಾಣವು ಹೊರಗೆ ಹೋಗುವಿಕೆ ಒಳಗೆ ಬರುವಿಕೆಯು ಅನುಭವಸಿದ್ಧವಾಗಿರುವುದರಿಂದ

ಪ್ರಾಣವನ್ನು ತೆಗೆದುಕೊಳ್ಳುವ, ಬಿಡುವ ಆತ್ಮನು ಪ್ರಾಣಕ್ಕಿಂತ ಬೇರೆಯಾಗಿ ಇರಬೇಕು. ಆದುದರಿಂದ ಪ್ರಾಣವು ಆತ್ಮನಲ್ಲ

ಇಲ್ಲಿಗೆ ಪ್ರಾಣಾತ್ಮವಾದಿಯ ಮತ ಖಂಡನೆ ಮುಗಿಯಿತು

## ಮನ ಆತ್ಮವಾದಿಯ ಮತ

ಪ್ರಶ್ನೆ: ಮನವೇ ಆತ್ಮನೆಂಬ ವಾದಿಯ ಸ್ವರೂಪವೇನು ?

ಉತ್ತರ ಪ್ರಾಣವು ಜಡವಾದುದರಿಂದ ಅದು ಘಟದಂತೆ ಅನಾತ್ಮವಾಗಿರುತ್ತದೆ ಬಂಧ ಮೋಕ್ಷಗಳು ಮನಸ್ಸಿಗೆ ಸಂಬಂಧಿಸಿದವುಗಳು ಅಂದರೆ ವಿಷಯಾಸಕ್ತವಾದ ಮನಸ್ಸು ಬಂಧಕ್ಕೆ ಹೇತು ನಿರ್ವಿಷಯವಾದ ಮನಸ್ಸು ಮೋಕ್ಷಕ್ಕೆ ಹೇತು. ಮನಸ್ಸಂಬಂಧದಿಂದಲೇ ಇಂದ್ರಿಯಗಳಲ್ಲಿ ಜ್ಞಾನವುಂಟಾಗುತ್ತದೆ ಇಂದ್ರಿಯಗಳಿಗೆ ಮನಸ್ಸಿನ ಸಂಬಂಧವಿಲ್ಲದಿದ್ದರೆ ಅವುಗಳಲ್ಲಿ ಜ್ಞಾನವುಂಟಾಗುವುದಿಲ್ಲ. ಈ ರೀತಿಯಾಗಿ ಸರ್ವ ವ್ಯವಹಾರಕ್ಕೂ ಮನಸ್ಸೇ ಹೇತುವಾಗಿದೆ ಆದುದರಿಂದ ಮನಸ್ಸೇ ಆತ್ಮ ಇದೇ ಮನಸ್ಸೇ ಆತ್ಮನೆಂಬುವವರ ಮತದ ಸ್ವರೂಪ.

## ಮನ ಆತ್ಮವಾದಿಯ ಮತ ಖಂಡನೆ

ಈ ಮತವನ್ನು ಖಂಡಿಸುವ ಯುಕ್ತಿಗಳು ಐದು

೧. ಮರಗೆಲಸ ಮಾಡುವವನಿಗೆ ಬಾಚಿ ಉಳಿಗಳು ಹೇಗೆ ಕರಣಗಳಾಗಿವೆಯೋ ಹಾಗೆ ಮನಸ್ಸು ಸಹಿತ ಜೀವಾತ್ಮನ ಕರಣವಾಗಿರುವುದರಿಂದ ಮನಸ್ಸು ಆತ್ಮವಲ್ಲ.

೨. ಸುಷುಪ್ತಿಯಲ್ಲಿ ಮನಸ್ಸು ಇಲ್ಲದಿದ್ದರೂ ಸಾಮಾನ್ಯ ಚೈತನ್ಯವಿದೆ ಮನಸ್ಸು ಇಲ್ಲದಿದ್ದರೆ ಚೈತನ್ಯವೂ ಇಲ್ಲವೆಂಬುದು ಸಿದ್ಧಿಸಲಾರದು ಆದುದರಿಂದ ವ್ಯಭಿಚಾರಿಯಾದ ಮನಸ್ಸು ಆತ್ಮವಲ್ಲ.

೩ ನನ್ನ ಮನಸ್ಸು ಬೇರೆ ಕಡೆಗೆ ಹೋಗಿದ್ದು ಈಗ ಬಂತು ಎಂಬ ವ್ಯವಹಾರದಿಂದ ಮನಸ್ಸು ಮಮಕಾರಕ್ಕೆ ವಿಷಯವಾಗಿದೆ ಅದು ಅಹಂಕಾರಕ್ಕೆ ವಿಷಯವಲ್ಲ ಆದುದರಿಂದ ಮನಸ್ಸು ಆತ್ಮವಲ್ಲ.

೪. ಮನಸ್ಸಿನ ಸ್ಥಿರತೆಯನ್ನೂ, ಅಸ್ಥಿರತೆಯನ್ನೂ ತಿಳಿಯುವ ಆತ್ಮನು ಮನಸ್ಸಿಗಿಂತ ಬೇರೆಯಾಗಿರಲೇಬೇಕು

೫ ಆಭಾಸನಿಂದ ಕೂಡಿರುವುದರಿಂದ ಮನಸ್ಸು ಕರ್ತಾ, ಭೋಕ್ತಾ ವಾಗಿದೆ, ಕೇವಲ ಮನಸ್ಸೇ ಕರ್ತಾ, ಭೋಕ್ತಾ ಅಲ್ಲ. ಆದುದರಿಂದ ಮನಸ್ಸು ಜಡವೆಂದು ಸಿದ್ಧವಾಗುತ್ತದೆ ಅದು ಆತ್ಮವಲ್ಲ

ಶ್ಲೋಕ – ಮನ ಏವ ಮನುಷ್ಯಾಣಾಂ, ಕಾರಣಂ ಬಂಧ ಮೋಕ್ಷಯೋಃ।
ಬಂಧಾಯ ವಿಷಯಾಸಕ್ತಂ, ಮುಕ್ತ್ಯೈ ನಿರ್ವಿಷಯಂಸ್ಮೃತವ್॥

ಎಂದು ಶ್ರುತಿಯಲ್ಲಿ ಹೇಳಿದೆ. ಇದರ ವಾಕ್ಯಾರ್ಥವೇನೆಂದರೆ, ಮನುಷ್ಯನಿಗೆ ಬಂಧ ಮೋಕ್ಷಕ್ಕೆ ಮನಸ್ಸೇ ಕಾರಣ, ವಿಷಯಾಸಕ್ತವಾದ ಮನಸ್ಸು ಬಂಧಕ್ಕೆ ಕಾರಣ. ವಿಷಯವಾಸಾನಾ ರಹಿತವಾದ ಮನಸ್ಸು ಮೋಕ್ಷಕ್ಕೆ ಕಾರಣ. ಇದರ ಅಭಿಪ್ರಾಯವೇನೆಂದರೆ, ಬಂಧ ಮೋಕ್ಷಗಳ ಅಧ್ಯಾಸಕ್ಕೆ ಮನಸ್ಸು ಹೇತು ಇಷ್ಟೇ ವಿನಃ ಮನಸ್ಸು ಆತ್ಮನೆಂಬ ಅಭಿಪ್ರಾಯವಲ್ಲ. ಇಲ್ಲವೇ ವಿಷಯಾಸಕ್ತವಾದ ಮನಸ್ಸು ಮಲಿನವಾಗಿರುವುದರಿಂದ ಪಾಪವನ್ನು ಉತ್ಪನ್ನ ಮಾಡುವ ಮೂಲಕ ಬಂಧಕ್ಕೆ ಹೇತುವಾಗಿದೆ. ಮತ್ತು ವಿಷಯವಾಸಾನ ರಹಿತ ವಾದ ಮನಸ್ಸು ಶುದ್ಧವಾಗಿರುವುದರಿಂದ ಜ್ಞಾನ ದ್ವಾರಾ ಮೋಕ್ಷಕ್ಕೆ ಹೇತು ವಾಗಿದೆ. ಇದು ಮೇಲಿನ ವಚನಕ್ಕೆ ಅಭಿಪ್ರಾಯ. ಮನಸ್ಸೇ ಆತ್ಮ ಎಂಬ ಅಭಿಪ್ರಾಯವಲ್ಲ.

"ಮನೋಮಯಕೋಶವೇ ಆತ್ಮ" ಎಂದು ಹೇಳುವ ಶ್ರುತಿಯ ತಾತ್ಪರ್ಯವೇನೆಂದರೆ, ಸ್ಥೂಲಾರುಂಧತಿ ನ್ಯಾಯದಿಂದ ಅಧಿಷ್ಠಾನವಾದ ಪ್ರತ್ಯಗಭಿನ್ನ ಪರಮಾತ್ಮನನ್ನು ತಿಳಿಸುವ ನಿಮಿತ್ತವಾಗಿ ಹೇಳಿದೆಯಷ್ಟೆ ಆತ್ಮ ಎಂಬುವ ತಾತ್ಪರ್ಯದಿಂದಲ್ಲ ಈ ರೀತಿಯಾಗಿ ಮನಸ್ಸು ಆತ್ಮನೆಂಬ ವಾದಿಯ ಮತವು ಸಮೀಚೀನವಲ್ಲ

ಇಲ್ಲಿಗೆ ಮನಸ್ಸೇ ಆತ್ಮನೆಂದು ಹೇಳುವ ವಾದಿಯ ಮತವನ್ನು ಖಂಡಿಸಿದ್ದಾಯಿತು

## ವಿಜ್ಞಾನವಾದಿಯ ಮತ

ವಿಜ್ಞಾನವಾದಿಯ ಮತದಲ್ಲಿ ಬುದ್ಧಿಯೇ ಆತ್ಮ ಇವನಿಗೆ ಕ್ಷಣಿಕ ವಿಜ್ಞಾನವಾದಿಯೆನ್ನುತ್ತಾರೆ ಇವನ ಅಭಿಪ್ರಾಯವೇನೆಂದರೆ, ಮನಸ್ಸಿನ

ವ್ಯಾಪಾರವು ಬುದ್ಧಿಗೆ ಅಧೀನವಾಗಿದೆ. ಬುದ್ಧಿಯ ಪರಿಣಾಮವೇ ಮನಸ್ಸು; ಕ್ಷಣಿಕ ವಿಜ್ಞಾನ ರೂಪವಾದ ಬುದ್ಧಿಯೇ ಆತ್ಮ ಮನಸ್ಸು ಆತ್ಮವಲ್ಲ

ಪ್ರಶ್ನೆ. ಈ ಮತದ ಸ್ಪಷ್ಟವಾದ ಸ್ವರೂಪವೇನು ?

ಉತ್ತರ ಸರ್ವ ಪದಾರ್ಥಗಳೂ ವಿಜ್ಞಾನ ಕಾರ್ಯಗಳೇ, ಆ ವಿಜ್ಞಾನವು ಪ್ರಕಾಶ ಸ್ವರೂಪವಾಗಿದೆ. ಪ್ರತಿಕ್ಷಣದಲ್ಲಿ ವಿಜ್ಞಾನದ ಉತ್ಪತ್ತಿ ನಾಶಗಳು ಜರುಗುತ್ತಿರುತ್ತವೆ ಪೂರ್ವ ವಿಜ್ಞಾನಕ್ಕೆ ಸಮಾನವಾದ ಅನ್ಯ ವಿಜ್ಞಾನದ ಉತ್ಪತ್ತಿ ಮತ್ತು ಪೂರ್ವ ವಿಜ್ಞಾನದ ನಾಶವಾಗುತ್ತದೆ ಅದರಂತೆ ತೃತೀಯ ವಿಜ್ಞಾನದ ಉತ್ಪತ್ತಿಯೂ, ದ್ವಿತೀಯ ವಿಜ್ಞಾನದ ನಾಶವೂ ಆಗುತ್ತದೆ ಈ ರೀತಿಯಾಗಿ ನದೀ ಪ್ರವಾಹದಂತೆ ವಿಜ್ಞಾನದ ಧಾರೆಯು ಸರ್ವಕಾಲವೂ ನಡೆಯುತ್ತಿರುತ್ತದೆ.

ಈ ವಿಜ್ಞಾನ ಧಾರೆಗಳು ಆಲಯ ವಿಜ್ಞಾನ ಧಾರೆಯೆಂದೂ, ಪ್ರವೃತ್ತಿ ವಿಜ್ಞಾನ ಧಾರೆಯೆಂದೂ ಎರಡು ವಿಧ ಇವುಗಳಲ್ಲಿ ಆಲಯ ವಿಜ್ಞಾನಧಾರೆಗೆ ಬುದ್ಧಿಯೆಂತಲೂ, ಪ್ರವೃತ್ತಿ ವಿಜ್ಞಾನ ಧಾರೆಗೆ ಮನಸ್ಸೆಂತಲೂ ಹೇಳುತ್ತಾರೆ. "ಅಹಂ, ಅಹಂ" ಎಂಬ ಅಹಂಕಾರ ವೃತ್ತಿರೂಪವಾದ ವಿಜ್ಞಾನ ಧಾರೆಗೆ ಆಲಯ ವಿಜ್ಞಾನ ಧಾರೆಯೆಂದು ಹೆಸರು. "ಈ ಘಟವಿದೆ, ಈ ಶರೀರವಿದೆ" ಎಂಬುವ "ಇದಂ" ವೃತ್ತಿ ರೂಪವಾದ ವಿಜ್ಞಾನ ಧಾರೆಗೆ ಪ್ರವೃತ್ತಿ ವಿಜ್ಞಾನ ಧಾರೆಯೆನ್ನುತ್ತಾರೆ. ಮತ್ತು ಆಲಯ ವಿಜ್ಞಾನ ಧಾರೆಯಿಂದ ಪ್ರವೃತ್ತಿ ವಿಜ್ಞಾನ ಧಾರೆಯ ಉತ್ಪತ್ತಿಯಾಗುತ್ತದೆ ಆದುದರಿಂದ ಮನಸ್ಸಿಗೆ ಕಾರಣವಾದ ಬುದ್ಧಿಯೇ ಆತ್ಮ ಎಂಬುದು ಅವರ ಅಭಿಪ್ರಾಯ.

ಈ ಮತದಲ್ಲಿ ಆಲಯ ವಿಜ್ಞಾನ ಧಾರೆಯಲ್ಲಿ ಪ್ರವೃತ್ತಿ ವಿಜ್ಞಾನ ಧಾರೆಯ ಬಾಧೆಯ ಚಿಂತನದಿಂದ ನಿರ್ವಿಶೇಷವಾದ ಕ್ಷಣಿಕ ವಿಜ್ಞಾನ ಧಾರೆಯ ಸ್ಥಿತಿಯೇ ಮೋಕ್ಷ

ಈ ರೀತಿ ವಿಜ್ಞಾನವಾದಿಯು ಬುದ್ಧಿಯನ್ನು ಕ್ಷಣಿಕ ರೂಪವಾದುದು ಮತ್ತು ಸ್ವಯಂ ಪ್ರಕಾಶವಾದುದು ಎಂದು ಕಲ್ಪಿಸಿ ಅದನ್ನೇ ಆತ್ಮ ಎನ್ನುತ್ತಾನೆ.

## ವಿಜ್ಞಾನವಾದಿಯ ಮತ ಖಂಡನೆ

೧. ರೂಪಾದಿ ಜ್ಞಾನಕ್ಕೆ ನೇತ್ರಾದಿ ಇಂದ್ರಿಯಗಳು ಸಾಧನವಾಗಿರುವಂತೆ ನಿಶ್ಚಯ ರೂಪ ಜ್ಞಾನಕ್ಕೆ ಬುದ್ಧಿಯು ಸಾಧನವಾಗಿದೆ ಈ ಬುದ್ಧಿಯು ಇಂದ್ರಿಯಗಳಂತೆ ಸ್ವಯಂಜಡವಾಗಿದ್ದು, ಆತ್ಮ ಪ್ರಕಾಶವನ್ನು ತೆಗೆದುಕೊಂಡು ಘಟಪಟಾದಿ ಪದಾರ್ಥಗಳ ನಿಶ್ಚಯವನ್ನು ಮಾಡುತ್ತದೆ ಭಾಸ್ಯ ಭಾಸಕ ಭೇದವಿರುವುದರಿಂದ ಸ್ವಚ್ಛವಾದ ಬುದ್ಧಿಗೆ ಭಾಸಕನಾದ ಆತ್ಮನು ಬೇರೆಯಾಗಿದ್ದಾನೆ. ದೀಪಾದಿ ಪ್ರಕಾಶವು ಘಟಾದಿಗಳಲ್ಲಿ ಸೇರಿ, ಆಯಾಕಾರವನ್ನು ಧರಿಸಿ ಪ್ರಕಾಶಿಸಿದರೂ ವಾಸ್ತವವಾಗಿ ಅನ್ಯವಾಗಿರುವಂತೆ, ಜ್ಞಾನ ಸ್ವರೂಪನಾದ ಆತ್ಮನು ಬುದ್ಧಿ ವೃತ್ತಿಯಿಂದ ಕೂಡಿ, ಅದರ ಆಕಾರವನ್ನು ಧರಿಸಿ ಪ್ರಕಾಶಿಸಿದರೂ, ಮತ್ತು ಆ ಪ್ರಸಂಗದಲ್ಲಿ ಆತ್ಮ ಬುದ್ಧಿಗಳಿಗೆ ಮಿಶ್ರಭಾವವು ಪ್ರತೀತಿಯಾದರೂ, ಆತ್ಮನು ಬುದ್ಧಿಗಿಂತ ಬೇರೆಯೇ ಎಂದು ತಿಳಿಯಬೇಕು.

೨. ಅಪಂಚೀಕೃತ ಭೂತ ಕಾರ್ಯವಾದ ಅಂತಃಕರಣವು ನಿಶ್ಚಯ ವೃತ್ತಿಯಿಂದ ಬುದ್ಧಿಯೆಂದೂ, ಸಂಕಲ್ಪ ವಿಕಲ್ಪ ವೃತ್ತಿಯಿಂದ ಮನಸ್ಸೆಂದೂ ಹೇಳಲ್ಪಡುತ್ತದೆ. ಬುದ್ಧಿಯು ಕಾರ್ಯವಾಗಿರುವುದರಿಂದ ದೇಹ, ಇಂದ್ರಿಯ, ಮನಸ್ಸುಗಳಂತೆ ಅನಾತ್ಮವಾಗಿದೆ

೩. ಕಠೋಪನಿಷತ್ತಿನಲ್ಲಿ ಆತ್ಮನನ್ನು ರಥಿಕನೆಂತಲೂ, ಶರೀರವನ್ನು ರಥವೆಂತಲೂ, ಬುದ್ಧಿಯನ್ನು ಸಾರಥಿಯೆಂತಲೂ ಹೇಳಿರುವುದರಿಂದ, ರಥಿಕನಿಗಿಂತ ಸಾರಥಿಯು ಅನ್ಯವಾಗಿರುವುದರಿಂದ ಸಾರಥಿಯಾದ ಬುದ್ಧಿಯು ಆತ್ಮವಲ್ಲ

೪. "ನನ್ನ ಬುದ್ಧಿಯು ಮಂದವಾಗಿದೆ, ನನ್ನ ಬುದ್ಧಿಯು ಕೆಟ್ಟುಹೋಗಿದೆ" ಎಂದು ಹೇಳುವುದರಿಂದ ಬುದ್ಧಿಯು ಮಮಕಾರಕ್ಕೆ ವಿಷಯವಾಗಿ ತಿಳಿದುಬರುತ್ತದೆ ಅದು ಅಹಂಕಾರಕ್ಕೆ ವಿಷಯವಾಗಿ ತೋರುವುದಿಲ್ಲ. ಆದುದರಿಂದ ಬುದ್ಧಿಯು ಆತ್ಮವಲ್ಲ

ಮತ್ತು ಆತ್ಮನನ್ನು ಕ್ಷಣಿಕ ರೂಪನೆಂದು ಹೇಳುವುದು ಸರಿಯಲ್ಲ. ಏಕೆಂದರೆ, ಆತ್ಮ ಕ್ಷಣಿಕವಾಗಿದ್ದರೆ ಹೋದ ವರ್ಷದಲ್ಲಿ ಸಾಲ ಕೊಟ್ಟವನು ಈ ವರ್ಷ ಕೇಳಕೂಡದಲ್ಲವೆ? ಮತ್ತು ಪ್ರಥಮ ಕ್ಷಣದಲ್ಲಿ ಊಟ ಮಾಡಿದವನು ದ್ವಿತೀಯ ಕ್ಷಣದಲ್ಲಿ ಇಲ್ಲದ್ದರಿಂದ ಭೋಜನಾನಂತರದಲ್ಲಿ

ನನಗೆ ತೃಪ್ತಿಯಾಯಿತೆಂದು ಹೇಳಕೂಡದಲ್ಲವೆ? ಹೀಗೆ ಸಾಲ ಕೇಳುವುದರಿಂದಲೂ, ತೃಪ್ತಿಯನ್ನು ಹೇಳುವುದರಿಂದಲೂ ಆತ್ಮ ಕ್ಷಣಿಕ ರೂಪವೆಂದು ಸಿದ್ಧಿಸುವುದಿಲ್ಲ ಮತ್ತು ಆತ್ಮ ಕ್ಷಣಿಕ ರೂಪನಾಗಿದ್ದರೆ ಮೋಕ್ಷ ಸಾಧನಗಳೂ ಸಹ ವ್ಯರ್ಥವಾಗುತ್ತವೆ

ಈ ರೀತಿಯಾಗಿ ವಿಜ್ಞಾನವಾದಿಯ ಮತವು ಅಸಂಗತವಾಗಿದೆ. ಇಲ್ಲಿಗೆ ಬುದ್ಧಿಯೇ ಆತ್ಮನೆಂಬ ವಿಜ್ಞಾನವಾದಿಯ ಮತ ಖಂಡನೆ ಮುಗಿಯಿತು

## ಆನಂದಮಯ ಕೋಶವೇ ಆತ್ಮನೆಂಬ ಪೂರ್ವಮೀಮಾಂಸ ಏಕದೇಶ ಭಾಟ್ಟನ ಮತ

ಪ್ರಶ್ನೆ. ಪೂರ್ವ ಮೀಮಾಂಸ ವಾರ್ತಿಕಕಾರನಾದ ಭಾಟ್ಟಾಚಾರ್ಯನ ಮತದ ಸ್ವರೂಪವೇನು ?

ಉತ್ತರ: ಭಾಟ್ಟಾಚಾರ್ಯನು, ವಿದ್ಯುತ್ತಿನಂತೆ ಅಂದರೆ ಮಿಂಚಿನಂತೆ ಆತ್ಮ ಕ್ಷಣಿಕವಲ್ಲ, ಆತ್ಮ ಸ್ಥಿರ ಸ್ವರೂಪನಾಗಿದ್ದು ಜಡ ಚೈತನ್ಯ ಸ್ವರೂಪನಾಗಿದ್ದಾನೆ ಎಂದು ಹೇಳುತ್ತಾನೆ ಇದಕ್ಕೆ ಅನುಭವವೇನೆಂದರೆ, ಸುಷುಪ್ತಿಯಿಂದ ಎದ್ದ ಮನುಷ್ಯನು "ನಾನು ಜಡನಾಗಿ ನಿದ್ರಿಸಿದೆನು" ಎಂದು ಹೇಳುತ್ತಾನೆ. ಈ ಸ್ಮೃತಿಯಿಂದ ಆತ್ಮನು ಜಡರೂಪನೆಂದು ಸಿದ್ಧಿಸುತ್ತದೆ ಈ ಸ್ಮೃತಿಯು ಎಚ್ಚರದಲ್ಲಿ ಆಗುತ್ತದೆ ಅಜ್ಞಾತ ಪದಾರ್ಥದ ಸ್ಮೃತಿಯು ಸಂಭವಿಸುವುದಿಲ್ಲ ಆತ್ಮ ಸ್ವರೂಪಕ್ಕಿಂತ ಭಿನ್ನವಾದ ಸುಷುಪ್ತಿಯಲ್ಲಿ ಜ್ಞಾನಕ್ಕೆ ಬೇರೆ ಸಾಧನವೇನೂ ತೋರುವುದಿಲ್ಲ ಆದುದರಿಂದ ಸ್ಮೃತಿಗೆ ಹೇತುವಾದ ಸುಷುಪ್ತಿಯಲ್ಲಿ ಇರುವ ಜ್ಞಾನವು ಆತ್ಮ ಸ್ವರೂಪವೇ ಆಗಿದೆ. ಈ ರೀತಿಯಾಗಿ ಮಿಂಚಿನಂತೆ ಆತ್ಮ ಪ್ರಕಾಶ ಅಪ್ರಕಾಶ ರೂಪವಾಗಿದ್ದಾನೆ. ಅಂದರೆ ಜ್ಞಾನ ರೂಪನಾದುದರಿಂದ ಪ್ರಕಾಶ ಸ್ವರೂಪನೂ ಮತ್ತು ಜಡರೂಪನಾದುದರಿಂದ ಅಪ್ರಕಾಶನೂ ಆಗಿದ್ದಾನೆ

ಈ ರೀತಿಯಾಗಿ ಪ್ರಕಾಶ ಅಪ್ರಕಾಶ ರೂಪವಾದುದು ಆನಂದಮಯ ಕೋಶ. ಏಕೆಂದರೆ, ಸುಷುಪ್ತಿಯಲ್ಲಿ ಚೈತನ್ಯಾಭಾಸ ಸಹಿತವಾದ ಅಜ್ಞಾನಕ್ಕೆ ಆನಂದಮಯಕೋಶವೆನ್ನುತ್ತಾರೆ. ಅಲ್ಲಿ ಆಭಾಸನು ಪ್ರಕಾಶ

ರೂಪನು, ಅಜ್ಞಾನವು ಅಪ್ರಕಾಶ ರೂಪನು ಈ ರೀತಿಯಾಗಿ ಭಾಟ್ಟಮತದಲ್ಲಿ ಆನಂದಮಯಕೋಶವೇ ಆತ್ಮ ಎನ್ನುತ್ತಾರೆ.

## ಆತ್ಮ ಜಡ ಚೈತನ್ಯವೆಂಬ ಭಾಟ್ಟಮತ ಖಂಡನೆ

ಅಂಧಕಾರ, ಪ್ರಕಾಶ ಎರಡೂ ಒಂದೇ ಕಡೆ ಸೇರದಂತೆ, ಒಬ್ಬನೇ ಆತ್ಮನಲ್ಲಿ ಜಡ ಮತ್ತು ಚೈತನ್ಯಗಳು ಸೇರುವುದಿಲ್ಲ. ಈ ಜಡ ಚೇತನ ಎರಡಂಶದಲ್ಲಿ ಒಂದು ಗೋಚರ, ಒಂದು ಅಗೋಚರವೆಂಬುದು ಸರಿಯಲ್ಲ ದಂಡವನ್ನೂ, ಪುರುಷನನ್ನೂ ಒಂದು ಸ್ಥಳದಲ್ಲಿ ನೋಡಿದರೆ ದಂಡ ಮಾತ್ರ ಬರುತ್ತದೆಂಬುದು ಸಮಂಜಸವಲ್ಲ. ದಂಡ ಸಹಿತ ಪುರುಷನು ಬರುತ್ತಾನೆಂಬ ಜ್ಞಾನವಾಗುತ್ತದೆ. ಈ ರೀತಿಯಾಗಿ ಒಂದು ಪದಾರ್ಥದಲ್ಲಿ ಒಂದು ಅಂಶವು ಜ್ಞಾತ, ಮತ್ತೊಂದು ಅಂಶವು ಅಜ್ಞಾತವೆನ್ನುವುದು ಅಸಮಂಜಸ ಇದು ವಿಶೇಷಣ ಸಹಿತ ಪುರುಷನಲ್ಲಿಯೇ ಸಂಭವಿಸದಿದ್ದರ, ವಿಶೇಷಣ ರಹಿತ ಆತ್ಮನಲ್ಲಿ ಹೇಗೆ ಸಂಭವಿಸುತ್ತದೆ?

ಒಂದು ಪಕ್ಷ ಹರದಿಂದ ಮೇಲಿನ ವಿಷಯವನ್ನು ಅಂಗೀಕರಿಸು ವವನನ್ನು, ಎರಡಕ್ಕೂ ಸಮವಾಯ ಸಂಬಂಧವೆ? ತಾದಾತ್ಮ್ಯ ಸಂಬಂಧವೆ? ಇಲ್ಲವೇ ವಿಷಯ ವಿಷಯೀ ಭಾವ ಸಂಬಂಧವೆ? ಎಂದು ಕೇಳಬೇಕು.

ಪ್ರಥಮ ಪಕ್ಷದಲ್ಲಿ, ಎರಡು ದ್ರವ್ಯಗಳಲ್ಲಿಯೇ ಸಮವಾಯ ಸಂಬಂಧ ವಾಗುವುದರಿಂದ ಆತ್ಮನು ದ್ರವ್ಯದಂತೆ ಅನಿತ್ಯವಾಗಬೇಕಾಗುತ್ತದೆ. ಎರಡನೇ ಪಕ್ಷದಲ್ಲಿ, ಚಿತ್ತು–ಜಡ ಅಂಶಗಳು ಒಂದೇ ಸ್ವರೂಪದಲ್ಲಿ ಇರುವುದರಿಂದ ಚಿತ್ತು ಜಡವಾಗಬಹುದು; ಜಡವು ಚಿತ್ತಾಗಬಹುದು. ಮೂರನೇ ಪಕ್ಷದಲ್ಲಿ ಎರಡೂ ಅಂಶಗಳು ಅನಾತ್ಮವಾಗಬೇಕಾಗುತ್ತದೆ.

ಶ್ರುತಿಯಲ್ಲಿ ಆತ್ಮನನ್ನು ವಿಜ್ಞಾನ ಘನನೆಂದು ಹೇಳಿರುವುದರಿಂದ ಒಂದು ಭಾಗವು ಜಡವೆಂದು ಹೇಳುವುದು ಶ್ರುತಿಗೆ ವಿರುದ್ಧವಾಗಿದೆ ಮತ್ತು ಸುಷುಪ್ತಿಯಿಂದ ಎಚ್ಚತ್ತ ಮನುಷ್ಯನ ಸ್ಮರಣೆಯು ಆತ್ಮನ ಜಡತ್ವವನ್ನು ವಿಷಯೀಕರಿಸುವುದಿಲ್ಲ ಸ್ಮರಣೆಯು ಸುಷುಪ್ತಿಯಲ್ಲಿಯ ಜ್ಞಾನಾಂಶವನ್ನು ವಿಷಯೀಕರಿಸುತ್ತದೆ. ಈ ರೀತಿ ಭಾಟ್ಟಮತವು ಅಸಂಗತವಾಗಿದೆ

ಇಲ್ಲಿಗೆ ಭಾಟ್ಟಮತ ಖಂಡನೆಯು ಮುಗಿಯಿತು.

## ಮಾಧ್ಯಮಿಕ ಬೌದ್ಧನಾದ ಶೂನ್ಯವಾದಿ ಮತ
## –ಆನಂದಮಯಕೋಶವೇ ಆತ್ಮ–

ಪ್ರಶ್ನೆ ಶೂನ್ಯವಾದಿ ಬೌದ್ಧನಮತದ ಸ್ವರೂಪವೇನು ?

ಉತ್ತರ ನಿರಂಶನಾದ ಒಬ್ಬ ಆತ್ಮನನ್ನು ಪ್ರಕಾಶ ರೂಪನೆಂತಲೂ, ಅಪ್ರಕಾಶ ರೂಪನೆಂತಲೂ ಹೇಳುವುದು ಸರಿಯಲ್ಲ. ದೀಪದ ಹುಳುವೆಂಬ ಕೀಟದಲ್ಲಿ ಒಂದು ಅಂಶವು ಪ್ರಕಾಶ ರೂಪವೂ, ಒಂದು ಅಂಶವೂ ಅಪ್ರಕಾಶ ರೂಪವೂ ಇರುವಂತೆ, ಅಂಶರಹಿತನಾದ ಆತ್ಮನಲ್ಲಿ ಉಭಯ ರೂಪಗಳನ್ನು ಹೇಳುವುದು ಅಯುಕ್ತ ಆದ್ದರಿಂದ ಉಭಯ ರೂಪ ಸಿದ್ಧಿಗಾಗಿ ಆತ್ಮನನ್ನು ಅಂಶವುಳ್ಳವನೆಂದು ಹೇಳಬೇಕಾಗುತ್ತದೆ ಅಂಶವುಳ್ಳ ಘಟಾದಿಗಳು ಉತ್ಪತ್ತಿ ನಾಶವುಳ್ಳವುಗಳು ಎಂಬುದು ಸ್ಪಷ್ಟ. ಇದರಂತೆ ಆತ್ಮನನ್ನೂ ಸಹ ಅಂಶವುಳ್ಳವನೆಂದು ಹೇಳಿದರೆ, ಆತ್ಮನೂ ಸಹ ಉತ್ಪತ್ತಿ ನಾಶವುಳ್ಳವನೆಂದು ಅಂಗೀಕರಿಸಬೇಕಾಗುತ್ತದೆ ಉತ್ಪತ್ತಿ ನಾಶವುಳ್ಳ ಪದಾರ್ಥವು ಉತ್ಪತ್ತಿಗಿಂತ ಪೂರ್ವ, ನಾಶದ ನಂತರ ಅಸತ್ತೆಂದು ಹೇಳಬೇಕಾಗುತ್ತದೆ. ಮತ್ತು ಆದಿ ಅಂತ್ಯದಲ್ಲಿ ಅಸತ್ತಾದ ಪದಾರ್ಥವು ಮಧ್ಯದಲ್ಲಿಯೂ ಅಸತ್ತೇ. ಇದೇ ವಿಷಯುವನ್ನು ಉಪನಿಷತ್ತಿನಲ್ಲಿ "ಆದಾವಂತೇ ಚ ಯನ್ನಾಸ್ತಿ ವರ್ತಮಾನೇಪಿತತ್ತಥಾ" ಎಂದು ಹೇಳಿದೆ. ಆದಿಯಲ್ಲಿಯೂ, ಅಂತ್ಯದಲ್ಲಿಯೂ ಇಲ್ಲದ್ದು ವರ್ತಮಾನದಲ್ಲಿಯೂ ಇಲ್ಲವೆಂಬುದೇ ಇದರ ಅರ್ಥ

ಇದರಂತೆ ಆದಿಯಲ್ಲಿ, ಅಂತ್ಯದಲ್ಲಿ ಅಸತ್ತಾದ ಪದಾರ್ಥವು ಮಧ್ಯದಲ್ಲಿಯೂ ಅಸತ್ತೇ ಎಂದು ತಿಳಿಯಬೇಕು. ಆದುದರಿಂದ ಆತ್ಮನು ಅಸದ್ರೂಪನು. ಇದರಂತೆ ಆತ್ಮನಿಗಿಂತ ಭಿನ್ನವಾದ ಸರ್ವ ಪದಾರ್ಥಗಳೂ ಉತ್ಪತ್ತಿ ನಾಶವುಳ್ಳವುಗಳಾದುದರಿಂದ ಅಸದ್ರೂಪವಾಗಿಯೇ ಇರುತ್ತವೆ.

ಈ ರೀತಿಯಾಗಿ ಆತ್ಮ ಅನಾತ್ಮನೆಂಬ ಸಮಗ್ರ ವಸ್ತುಗಳು ಅಸದ್ರೂಪವಾದುದರಿಂದ ಶೂನ್ಯವೇ ಪರಮತತ್ತ್ವ

ಇದು ಶೂನ್ಯವಾದಿಯ ಮತದ ಸ್ವರೂಪ. ಈ ಶೂನ್ಯವಾದಿಯೂ ಸಹ ಅಜ್ಞಾನ ರೂಪವಾದ ಆನಂದಮಯಕೋಶವನ್ನು ಪ್ರತಿಪಾದಿಸುತ್ತಾನೆ. ಹೇಗೆಂದರೆ, ಅಜ್ಞಾನವು ಮೂರು ವಿಧವಾಗಿ ಪ್ರತೀತಿಯಾಗುತ್ತದೆ.

೧. ಅದ್ವೈತ ಶಾಸ್ತ್ರದ ಸಂಸ್ಕಾರವಿಲ್ಲದ ಮೂಢನಿಗೆ ಜಗದ್ರೂಪದಿಂದ ಪರಿಣಾಮವಾದ ಅಜ್ಞಾನವು ಸತ್ಯರೂಪವಾಗಿ ಪ್ರತೀತಿಯಾಗುತ್ತದೆ

೨ ಅದ್ವೈತ ಶಾಸ್ತ್ರಕ್ಕೆ ಅನುಸಾರವಾದ ಯುಕ್ತಿ ನಿಪುಣನಾದ ಪಂಡಿತನಿಗೆ ಅಜ್ಞಾನವು ಸದಸದ್ವಿಲಕ್ಷಣವಾಗಿ ಪ್ರತೀತಿಯಾಗುತ್ತದೆ. ಸದಸದ್ವಿಲಕ್ಷಣಕ್ಕೆ ಅನಿರ್ವಚನೀಯವೆನ್ನುತ್ತಾರೆ

೩ ಜ್ಞಾನನಿಷ್ಠನಾದ ಜೀವನ್ಮುಕ್ತ ವಿದ್ವಾಂಸನಿಗೆ ತುಚ್ಛರೂಪವಾಗಿ ಪ್ರತೀತಿಯಾಗುತ್ತದೆ ತುಚ್ಛ, ಅಸತ್ತು, ಶೂನ್ಯ ಈ ಮೂರು ಪರ್ಯಾಯ ಪದಗಳು, ಅಂದರೆ ಏಕಾರ್ಥ ವಾಚಕಗಳಾಗಿರುತ್ತವೆ

ಈ ರೀತಿ ಜೀವನ್ಮುಕ್ತ ವಿದ್ವಾಂಸನಿಗೆ ತುಚ್ಛರೂಪವಾಗಿ ತೋರುವ ಅಜ್ಞಾನದ ವಿಷಯದಲ್ಲಿ ಮೋಹಿತನಾದ ಶೂನ್ಯವಾದಿಯು ಪರಮ ಪುರುಷಾರ್ಥಕ್ಕೆ ದೂರವಾಗುತ್ತಾನೆ ತುಚ್ಛರೂಪವಾದ ಆನಂದಮಯ ಕೋಶವನ್ನು ಆತ್ಮನೆಂದು ತಿಳಿದು, ಅದೇ ಪರಮ ಪುರುಷಾರ್ಥವೆಂದು ಹೇಳುತ್ತಾನೆ

## ಶೂನ್ಯವಾದಿಯ ಮತ ಖಂಡನೆ

ಎಲ್ಲವೂ ಶೂನ್ಯವೇ, ಶೂನ್ಯವೇ ಪರಮತತ್ತ್ವ, ಎಂದು ಹೇಳುವ ಮಾಧ್ಯಮಿಕ ಬೌದ್ಧನ ಅಭಿಪ್ರಾಯವೇನೆಂದರೆ, ಸುಷುಪ್ತಿಯಲ್ಲಿರುವ ಅಜ್ಞಾನರೂಪವಾದ ಆನಂದಮಯಕೋಶವೇ ಆತ್ಮವೆಂದು ಹೇಳುತ್ತಾನೆ ಈ ಶೂನ್ಯವಾದಿಯನ್ನು ಶೂನ್ಯವು ಸಾಕ್ಷಿ ಸಹಿತವಾಗಿದೆಯೇ? ಇಲ್ಲವೇ ಸಾಕ್ಷಿ ರಹಿತವಾಗಿದೆಯೇ ? ಇಲ್ಲವೇ ಶೂನ್ಯವನ್ನು ಸ್ವಯಂಪ್ರಕಾಶವೆನ್ನುವಿಯಾ ? ಎಂದು ಕೇಳಬೇಕು ಒಂದು ಪಕ್ಷ ಅವನು ಶೂನ್ಯವು ಸಾಕ್ಷಿ ಸಹಿತವೆಂದರೆ, ಶೂನ್ಯಕ್ಕೆ ಅನ್ಯವಾದ ಸಾಕ್ಷಿಯೇ ಆತ್ಮ ಒಂದು ಪಕ್ಷ ಅವನು ಶೂನ್ಯವು ಸಾಕ್ಷಿ ರಹಿತವೆಂದರೆ ಶೂನ್ಯವೇ ಸಿದ್ಧಿಸಲಾರದು. ಹೇಗೆಂದರೆ, ಅನುಭವವಿಲ್ಲದೆ ಯಾವ ಪದಾರ್ಥವೂ ಇರಲಾರದು. ಇದು ನಿಯಮ. ಇನ್ನು ಅವನು ಒಂದು ಪಕ್ಷ ಶೂನ್ಯವು ಸ್ವಯಂಪ್ರಕಾಶವೆಂದರೆ, ಅದು ನಮ್ಮ ಪರಬ್ರಹ್ಮಕ್ಕೆ ಮತ್ತೊಂದು ಹೆಸರೇ ವಿನಹ ಶೂನ್ಯವು ಇಲ್ಲದೇ ಹೋಗುತ್ತದೆ.

"ಅಸದ್ವಾ ಇದಮಗ್ರ ಆಸೀತ್" ಎಂಬ ಶ್ರುತಿಗೆ "ಮೊದಲು ಅಸತ್ತು

ಇತ್ತು" ಎಂದು ಅರ್ಥವಲ್ಲ ಮತ್ತೇನೆಂದರೆ, ಸದಸತ್ತುಗಳಿಗೆ ವಿರೋಧವಾಗುವುದರಿಂದ ಸದ್ರೂಪವಾದ ಅಧಿಷ್ಠಾನ ಚೈತನ್ಯದಲ್ಲಿ ನಾಮರೂಪಾತ್ಮಕ ಪ್ರಪಂಚವನ್ನು ನಿಷೇಧ ಮಾಡುವುದೇ ಈ ಶ್ರುತಿಯ ಅಭಿಪ್ರಾಯ. ಈ ರೀತಿಯಾಗಿ ಶೂನ್ಯವಾದಿಯ ಮತ ಅಸಂಗತವಾಗಿದೆ

ಇಲ್ಲಿಗೆ ಶೂನ್ಯವಾದಿಯ ಮತ ಖಂಡನೆ ಮುಗಿಯಿತು.

## ಪ್ರಾಭಾಕರ ನೈಯಾಯಿಕರ ಮತ
## –ಆನಂದಮಯಕೋಶವೇ ಆತ್ಮ–

ಪ್ರಶ್ನೆ ಪೂರ್ವಮೀಮಾಂಸೈಕ ದೇಶಿಯಾದ ಪ್ರಾಭಾಕರನ ಮತ್ತು ನೈಯಾಯಿಕನ ಮತದ ಸ್ವರೂಪವೇನು ?

ಉತ್ತರ: ಆತ್ಮ ಶೂನ್ಯ ರೂಪನಲ್ಲ ಆತ್ಮನು ಶೂನ್ಯ ರೂಪನೆಂದು ಹೇಳುವವನನ್ನು ನೀನು ಶೂನ್ಯ ರೂಪವನ್ನು ಅನುಭವಿಸಿರುವೆಯಾ ? ಇಲ್ಲವೇ ? ಎಂದು ಕೇಳಬೇಕು ಒಂದು ಪಕ್ಷ ಅವನು ಶೂನ್ಯರೂಪದ ಅನುಭವವು ನನಗೆ ಇಲ್ಲವೆಂದು ಹೇಳಿದರೆ, ಶೂನ್ಯವೇ ಇಲ್ಲವೆಂದು ಸಿದ್ಧವಾಗುತ್ತದೆ ಒಂದು ಪಕ್ಷ ಅವನು ಶೂನ್ಯವನ್ನು ನಾನು ಅನುಭವಿಸಿದ್ದೇನೆ ಎಂದು ಹೇಳಿದರೆ ಆ ಪಕ್ಷದಲ್ಲಿ ಶೂನ್ಯವನ್ನು ಅನುಭವಿಸಿದವನೇ ಆತ್ಮ ಈ ಆತ್ಮನು ಶೂನ್ಯಕ್ಕಿಂತ ವಿಲಕ್ಷಣವೆಂದು ಸಿದ್ಧಿಸುತ್ತದೆ.

ಮತ್ತು ಆತ್ಮನಿಗೆ ಮನಸ್ಸಂಯೋಗವಾದರೆ ಜ್ಞಾನವು ಉಂಟಾಗುತ್ತದೆ. ಈ ಜ್ಞಾನ ಗುಣವು ಆತ್ಮನಲ್ಲಿ ಇರುವುದರಿಂದ ಆತ್ಮನು ಚೈತನ್ಯನೆಂದು ಹೇಳಿಸಿಕೊಳ್ಳುತ್ತಾನೆ ಆದರೂ ಆತ್ಮನು ಸ್ವರೂಪತಃ ಜಡನೇ, ಅವನಲ್ಲಿ ಸುಖ, ದುಃಖ, ಇಚ್ಛೆ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮಗಳೆಂಬ ಗುಣಗಳಿರುತ್ತವೆ ಎಂಬುದು ನೈಯಾಯಿಕರ ಮತ.

ಈ ಮತದಂತೆ ಆನಂದಮಯಕೋಶವೇ ಆತ್ಮ ಮತ್ತು ವಿಜ್ಞಾನಮಯಕೋಶದಲ್ಲಿರುವ ಬುದ್ಧಿಯನ್ನು ಇವರು ಆತ್ಮನ ಗುಣವೆನ್ನುತ್ತಾರೆ. ಆನಂದಮಯಕೋಶದಲ್ಲಿ ಚೈತನ್ಯವು ಗೂಢವಾಗಿದ್ದು ಅದು ವಿವೇಕಹೀನರಿಗೆ ಪ್ರತೀತಿಯಾಗುವುದಿಲ್ಲ ಆದುದರಿಂದ ಪ್ರಾಭಾಕರ ಮತ್ತು ನೈಯಾಯಿಕರು

ಸುಷುಪ್ತಿಯಲ್ಲಿ ಆತ್ಮನು ಜ್ಞಾನವಿಲ್ಲದವನೆಂದು ತಿಳಿದು, ಆತ್ಮನು ಸ್ವರೂಪತಃ ಜಡವೆನ್ನುತ್ತಾರೆ. ಅವರು ಆತ್ಮನ ಸ್ವರೂಪಭೂತವಾದ ನಿತ್ಯ ಜ್ಞಾನವನ್ನು ಅಂಗೀಕರಿಸುವುದಿಲ್ಲ. ಅನಿತ್ಯ ಜ್ಞಾನವನ್ನೇ ಅಂಗೀಕರಿಸುತ್ತಾರೆ ವೇದಾಂತ ಸಿದ್ಧಾಂತದಲ್ಲಿ ಅನಿತ್ಯ ಜ್ಞಾನವು ಅಂತಃಕರಣ ವೃತ್ತಿಯಾದ ಬುದ್ಧಿರೂಪವೆಂದು ಪ್ರತಿಪಾದಿಸಿದೆ.

## ಪ್ರಾಭಾಕರ ನ್ಯಾಯಮತ ಖಂಡನೆ

ಸುಷುಪ್ತಿಯಲ್ಲಿ ಜ್ಞಾನವು ಇಲ್ಲದ್ದರಿಂದ ಆತ್ಮನು ಜಡನೆಂಬುದು ಸರಿಯಲ್ಲ. ಏಕೆಂದರೆ, ನಾನು ಸುಖವಾಗಿ ನಿದ್ರಿಸಿದೆನು, ನನಗೆ ಏನೂ ಗೊತ್ತಾಗಲಿಲ್ಲ, ಎಂಬ ಸ್ವಾನುಭವವನ್ನು ನಿದ್ರೆಯಿಂದ ಎದ್ದ ಪುರುಷನು ಹೇಳುತ್ತಾನೆ ಆತ್ಮನು ಜಡನಾಗಿದ್ದರೆ, ಸುಷುಪ್ತಿಯಲ್ಲಿ ಇರುವ ಆನಂದದ ಸ್ಮರಣೆಯು ಆಗಕೂಡದಲ್ಲವೆ? ಅದು ಆಗುವುದರಿಂದ ಆತ್ಮನು ಜಡನಲ್ಲ ವೆಂಬುದು ಸಹಜವಾಗಿಯೇ ಸಿದ್ಧವಾಗುತ್ತದೆ

ಈ ರೀತಿ ಪ್ರಾಭಾಕರ ನ್ಯಾಯಮತಗಳು ಅಸಂಗತವಾಗಿವೆ.

ಪ್ರ: ವೇದಾಂತಕ್ಕಿಂತ ಭಿನ್ನಮತಗಳು ಎಷ್ಟಿವೆ ?

ಉ. ಅವುಗಳು ಅಸಂಖ್ಯವಾಗಿವೆ ಎಂದು ಹೇಳಬಹುದು. ಇವುಗಳ ಖಂಡನವು ಭೇದಧಿಕ್ಕಾರಾದಿ ಗ್ರಂಥಗಳಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿದೆ. ಇಲ್ಲಿ ಅವುಗಳು ದಿಗ್ದರ್ಶನ ಮಾತ್ರವೆಂದು ತಿಳಿಯಬೇಕು.

## ಆಚ್ಛಾದಕವಾದ ಜೀವನ ಪಂಚಕೋಶಗಳಂತೆ ಈಶ್ವರನ ಪಂಚಕೋಶಗಳು

ಜ್ಞಾನಕ್ಕಿಂತ ಭಿನ್ನವಾದ ಘಟಾದಿ ಜಡ ವಸ್ತುಗಳು ಅನಿತ್ಯಗಳು. ಇದರಂತೆ ಆತ್ಮನು ಜ್ಞಾನ ಸ್ವರೂಪನಾಗದಿದ್ದರೆ ಘಟಾದಿಗಳಂತೆ ಜಡವಾಗುವುದರಿಂದ ಅನಿತ್ಯನಾಗುತ್ತಾನೆ ಆತ್ಮನು ಅನಿತ್ಯನಾದರೆ ಮೋಕ್ಷ ಸಾಧನಗಳು ನಿಷ್ಫಲವಾಗುತ್ತವೆ.

ಈ ರೀತಿಯಾಗಿ ವೇದಾಂತ ವಾಕ್ಯಗಳಲ್ಲಿ ವಿಶ್ವಾಸವಿಲ್ಲದ ಅನೇಕ ಬಹಿರ್ಮುಖ ಪುರುಷರು ಪಂಚಕೋಶಗಳಲ್ಲಿ ಯಾವುದೋ ಒಂದು ಕೋಶವನ್ನು ಆತ್ಮನೆಂದು ಅಂಗೀಕರಿಸಿ, ಮುಖ್ಯಾತ್ಮ ಸ್ವರೂಪವಾದ ಸಾಕ್ಷಿಗೆ ದೂರವಾಗಿರುತ್ತಾರೆ ಈ ರೀತಿ ಅನ್ನಮಯಾದಿಗಳು ಆತ್ಮನನ್ನು ಆವರಿಸುವುದರಿಂದ ಅವುಗಳನ್ನು ಕೋಶವೆನ್ನುತ್ತಾರೆ.

ಜೀವನ ವ್ಯಷ್ಟಿ ಪಂಚಕೋಶಗಳು ಜೀವನ ಯಥಾರ್ಥ ಸ್ವರೂಪವಾದ ಸಾಕ್ಷಿಯನ್ನು ಆವರಿಸಿದಂತೆ, ಈಶ್ವರನ ಸಮಷ್ಟಿ ಪಂಚಕೋಶಗಳು ಈಶ್ವರನ ಯಥಾರ್ಥ ಸ್ವರೂಪವಾದ ಈಶ್ವರ ಸಾಕ್ಷಿಯನ್ನು ಆಚ್ಛಾದಿಸುತ್ತವೆ. ಹೇಗೆಂದರೆ, ತತ್ಪದ ಲಕ್ಷ್ಯಾರ್ಥವಾದ ಶುದ್ಧ ಚೈತನ್ಯವೇ ಈಶ್ವರನ ಯಥಾರ್ಥ ಸ್ವರೂಪ ಇದನ್ನು ಬಿಟ್ಟು ಕೆಲವರು ಅವಿವೇಕಿಗಳು ಮಾಯಾರೂಪ ಆನಂದಮಯಕೋಶ ವಿಶಿಷ್ಟವಾದ ತತ್‌ಪದಕ್ಕೆ ವಾಚ್ಯವಾದ ಅಂತರ್ಯಾಮಿಯನ್ನೇ ಪರಮತತ್ವವೆನ್ನುತ್ತಾರೆ.

ಕೆಲವರಿಗೆ ಹಿರಣ್ಯಗರ್ಭ, ವೈಶ್ವಾನರ, ಬ್ರಹ್ಮ, ವಿಷ್ಣು, ರುದ್ರ, ಗಣೇಶ, ದೇವಿ, ಸೂರ್ಯರಿಂದ ಹಿಡಿದು ಅಶ್ವತ್ಥ, ಕುದ್ದಾಲಕ, ಎಕ್ಕ, ಬಿದಿರುಗಳವರೆಗೆ ಇರುವ ಪದಾರ್ಥಗಳಲ್ಲಿ ಈಶ್ವರ ಭ್ರಾಂತಿಯುಂಟಾಗಿದೆ. ಸರ್ವ ಪದಾರ್ಥಗಳಲ್ಲಿಯೂ ಲಕ್ಷ್ಯ ಭಾಗವು ಪರಮಾತ್ಮನಿಗಿಂತ ಭಿನ್ನವಲ್ಲ ಆದರೂ ಆಯಾ ಉಪಾಧಿಯಿಂದ ಕೂಡಿರುವುದನ್ನು ಪರಮಾತ್ಮನೆಂದು ಭಾವಿಸುವುದು ಭ್ರಾಂತಿಯೇ.

## ಜೀವನನ್ನು ಜೀವನ ಪಂಚಕೋಶಗಳು ಆವರಿಸಿರುವುವು ಎಂಬ ವಿಷಯದಲ್ಲಿ ವಿವೇಚನೆ

ಆತ್ಮನಿಗೆ ಸತ್ತು, ಚಿತ್ತು, ಆನಂದ, ಅದ್ವೈತ ಈ ನಾಲ್ಕು ವಿಶೇಷಣಗಳು ಅಂದರೆ ಲಕ್ಷಣಗಳು ಅಹಂಕಾರ ದೇಹಾದಿ ಅನಾತ್ಮಕ್ಕೆ ಅಸತ್ತು, ಜಡ, ದುಃಖ, ದ್ವೈತ ಇವು ನಾಲ್ಕು ವಿಶೇಷಣಗಳು. ಇವುಗಳಲ್ಲಿ ಆತ್ಮನು ಸತ್ತು, ಚಿತ್ತು, ಜಡ ರೂಪಗಳನ್ನು ಆವರಿಸಿರುವುದರಿಂದ ದೇಹಾದಿಗಳು ಇದ್ದಂತೆ ತೋರುವಂತೆ ಅಂದರೆ ಸಚ್ಚಿದ್ರೂಪಗಳಂತೆ ಪ್ರತೀತಿಯಾಗುತ್ತವೆ.

ಮತ್ತು ದೇಹಾದಿಗಳ ದುಃಖ, ದ್ವೈತ ಈ ಎರಡು ವಿಶೇಷಣಗಳು ಆತ್ಮನ ಆನಂದ, ಅದ್ವೈತ ರೂಪಗಳನ್ನು ಆವರಿಸಿರುವುದರಿಂದ ಆತ್ಮನು ದುಃಖಿಯಾಗಿಯೂ, ದ್ವೈತವಾಗಿಯೂ ಪ್ರತೀತಿಯಾಗುತ್ತಾನೆ ಈ ವಿಧವಾಗಿ ಆತ್ಮನಿಗೂ ಪಂಚಕೋಶಗಳಿಗೂ ಪರಸ್ಪರ ಅಧ್ಯಾಸವುಂಟಾಗಿದೆ ಆದುದರಿಂದ ಮುಮುಕ್ಷುವಾದವನು ಪಂಚಕೋಶಗಳ ವಿವೇಕವನ್ನು ಅವಶ್ಯವಾಗಿ ಮಾಡಬೇಕು

ಈ ರೀತಿಯಾಗಿ ವಿವೇಕವಿಲ್ಲದವರು ಪಂಚಕೋಶದ ಆವರಣದಿಂದ ಅನ್ನೃತಮಯವಾದ ಜೀವೇಶ್ವರರ ಪರಮಾರ್ಥ ಸ್ವರೂಪಕ್ಕೆ ವಿಮುಖರಾಗಿ, ದೇಹಾದಿಗಳಲ್ಲಿ ಆತ್ಮ ಭ್ರಾಂತಿಯಿಂದ ಪುಣ್ಯ ಪಾಪ ಕರ್ಮಗಳನ್ನು ಮಾಡುತ್ತಾರೆ ಮತ್ತು ಅಂತರ್ಯಾಮಿಯಿಂದ ಬಿದಿರಿನವರೆಗೆ ಇರುವ ಪದಾರ್ಥಗಳನ್ನು ಈಶ್ವರ ರೂಪವೆಂದು ಅಂಗೀಕರಿಸಿ, ಆರಾಧಿಸಿ, ಸುಖವನ್ನು ಕೋರುತ್ತಾರೆ

ಮೇಲ್ಕಂಡವರು ಯಾವ ಉಪಾಧಿಯ ಆರಾಧನೆ ಮಾಡುವರೋ ಅವರಿಗೆ ತದನುಸಾರವಾಗಿ ಫಲವು ಉಂಟಾಗುತ್ತದೆ ಏಕೆಂದರೆ ಕಾರಣ, ಸೂಕ್ಷ್ಮ, ಸ್ಥೂಲ ಪ್ರಪಂಚವೆಲ್ಲ ಈಶ್ವರನ ಮೂರು ಶರೀರಗಳಲ್ಲಿಯೇ ಅಂತರ್ಭೂತಗಳು ಇದರಿಂದ ಉಪಾಸನೆಗೆ ಅನುಸಾರವಾಗಿ ಫಲವು ಲಭಿಸುತ್ತದೆ. ಆದರೆ ಬ್ರಹ್ಮಜ್ಞಾನವಿಲ್ಲದೆ ಮೋಕ್ಷ ಉಂಟಾಗಲಾರದೆಂಬ ಮಾತನ್ನು ನೆನಪಿಟ್ಟು ಕೊಂಡಿರಬೇಕು ಪಂಚಕೋಶ ವಿವೇಕವಿಲ್ಲದೆ ಬ್ರಹ್ಮಜ್ಞಾನವು ಲಭಿಸಲಾರದು ಆದುದರಿಂದ ಮೋಕ್ಷವನ್ನು ಬಯಸುವವರು ವಿವೇಕದಿಂದ ಜೀವೇಶ್ವರರ ಸ್ವರೂಪವನ್ನು ಪಂಚಕೋಶಗಳಿಂದ ಬೇರ್ಪಡಿಸಬೇಕು

ಉದಾಹರಣೆ: ಕಬ್ಬಿನಲ್ಲಿ ಮೇಲೆ ಬಿರುಸಾದ ಸಿಪ್ಪೆಯೂ, ಅದರ ಒಳಗೆ ಬೆಂಡಿನಿಂದ ಕೂಡಿದ ರಸವೂ ಇರುತ್ತದೆ. ಆ ಕಬ್ಬನ್ನು ಗಾಣದಲ್ಲಿ ಹಾಕಿ, ರಸವನ್ನು ತೆಗೆದು, ಮೇಲಿನ ಸಿಪ್ಪೆಯನ್ನೂ ಬೆಂಡನ್ನೂ ಬಿಸಾಕಿ, ಸಿಹಿಯಾದ ರಸವನ್ನು ಗ್ರಹಿಸುವಂತೆ ವಿವೇಕದಿಂದ ಜೀವೇಶ್ವರರ ಸ್ವರೂಪವನ್ನೂ ಪಂಚಕೋಶಗಳನ್ನೂ ಬೇರ್ಪಡಿಸಬೇಕು.

## ಅಹಂಗ್ರಹ-ಧ್ಯಾನ

ಸವ್ವೈಯಾ – ಸ್ಥೂಲದೇಹ ಕೊ ಭಾನ ನ ಹೋವೈ,
ಸ್ವಪ್ನ ಮಾಂಹಿ ಲಖಿ ಆ ತಮಜ್ಞಾನ ।
ಸೂಛಮು ಜ್ಞಾನ ಸುಷುಪ್ತಿ ಸಮ್ಮೈನಹಿಂ,
ಸುಖ ಸ್ವರೂಪ ಹ್ವೈ ಆತಮು ಭಾನ ॥
ಭಾಸ್ಯೆ, ಭಯೆ ಸಮಾಧಿ ಅವಸ್ಥಾ,
ನಿರಾವರನ ಆತಮು, ನ ಅಜ್ಞಾನ ।
ಐಸೆ ತೀನ ದೇಹ ವ್ಯಭಿಚಾರೀ,
ಆತಮು ಅನುಗತ ನ್ಯಾರೋ ಜಾನ॥ ॥೧೫೮॥

ಅರ್ಥ. ಸ್ವಪ್ನಾವಸ್ಥೆಯಲ್ಲಿ ಸ್ಥೂಲ ದೇಹವು ತೋರುವುದಿಲ್ಲ. ಆಗ ಆತ್ಮನು ದ್ರಷ್ಟ ರೂಪನಾಗಿ ತೋರುತ್ತಾನೆ ಅದರಂತೆ ಸುಷುಪ್ತಿಯಲ್ಲಿ ಸೂಕ್ಷ್ಮ ಶರೀರವು ತೋರುವುದಿಲ್ಲ ಆಗಲೂ ಆತ್ಮನು ಸ್ವಯಂ ಪ್ರಕಾಶ ರೂಪನಾಗಿ ಭಾಸಿಸುತ್ತಾನೆ. ಅಂದರೆ ನಾನು ಸುಖವಾಗಿ ನಿದ್ರಿಸಿದೆನು ಎಂಬ ಸ್ಮೃತಿಯು ಜಾಗ್ರತ್ತಿನಲ್ಲಿ ಆಗುವುದರಿಂದ ಸುಷುಪ್ತಿಯಲ್ಲಿ ಸುಖ ಪ್ರಕಾಶಾತ್ಮನು ಸಿದ್ಧವಾಗುತ್ತಾನೆ. ಮತ್ತು ಆತ್ಮನು ನಿರ್ವಿಕಲ್ಪ ಸಮಾಧಿ ಯಲ್ಲಿ ನಿರಾವರಣನಾಗಿ ಭಾಸಿಸುತ್ತಾನೆ ಆಗ ಆ ಅವಸ್ಥೆಯಲ್ಲಿ ಅಜ್ಞಾನ ರೂಪವಾದ ಕಾರಣ ಶರೀರವು ಭಾಸಿಸುವುದಿಲ್ಲ. ಈ ರೀತಿಯಾಗಿ ಮೂರು ಶರೀರಗಳು ವ್ಯಭಿಚಾರಿಯಾಗಿರುತ್ತವೆ. ಅಂದರೆ ಒಂದು ಇರುವಾಗ ಮತ್ತೊಂದು ಇರುವುದಿಲ್ಲ. ಮತ್ತು ಒಂದು ಅವಸ್ಥೆಯಲ್ಲಿ ಕಂಡು ಬಂದ ಶರೀರವು ಮತ್ತೊಂದು ಅವಸ್ಥೆಯಲ್ಲಿ ಕಂಡಬರುವುದಿಲ್ಲ. ಆತ್ಮನು ಸರ್ವಾ ವಸ್ಥೆಯಲ್ಲಿ ಭಾಸಿಸುವುದರಿಂದ ಅವ್ಯಭಿಚಾರಿಯಾಗಿ ಇರುತ್ತಾನೆ. ಈ ವಿವೇಕ ದಿಂದ ಆತ್ಮನು ಮೂರು ಶರೀರಕ್ಕೆ ವಿಲಕ್ಷಣನೆಂದು ತಿಳಿಯುತ್ತದೆ.

ಮತ್ತಷ್ಟು ಶರೀರತ್ರಯ ವಿಚಾರ.

## ಸ್ಥೂಲ ದೇಹ ವಿವೇಚನೆ

ಸ್ಥೂಲದೇಹದ ಉತ್ಪತ್ತಿಗಿಂತ ಪೂರ್ವ, ಮರಣದನಂತರ ಒಬ್ಬನೇ ಆತ್ಮನು ಇರುವುದರಿಂದ ಘಟಕ್ಕಿಂತ ಆಕಾಶವು ಭಿನ್ನವೂ, ಅವ್ಯಭಿಚಾರಿಯೂ

ಇರುವಂತೆ ಆತ್ಮ ಸ್ಥೂಲ ದೇಹಕ್ಕಿಂತ ಭಿನ್ನವೂ, ಅವ್ಯಭಿಚಾರಿಯೂ ಆಗಿದ್ದಾನೆ. ದೇಹವು, ಘಟದಂತೆ ಉತ್ಪತ್ತಿಗೆ ಮೊದಲೂ, ಮರಣದನಂತರವೂ ಇಲ್ಲದಿರುವುದರಿಂದಲೂ, ಅನೇಕವಾಗಿರುವುದರಿಂದಲೂ ಆತ್ಮಕ್ಕಿಂತ ಅನ್ಯವೂ, ವ್ಯಭಿಚಾರಿಯೂ ಆಗಿದೆ.

ಪ್ರಶ್ನೆ: ಅವ್ಯಭಿಚಾರಿಯೆಂದರೇನು ?

ಉತ್ತರ: ಸರ್ವ ದೇಶದಲ್ಲಿಯೂ, ಸರ್ವ ಕಾಲದಲ್ಲಿಯೂ ಇರುವುದು ಅವ್ಯಭಿಚಾರಿ ಎನಿಸುತ್ತದೆ ಇದರಂತೆ ಆತ್ಮನು ಸರ್ವ ಶರೀರದಲ್ಲಿ ಏಕವಾಗಿರುವುದರಿಂದಲೂ, ಸರ್ವಾವಸ್ಥೆಯಲ್ಲಿಯೂ, ತ್ರಿಕಾಲದಲ್ಲಿಯೂ ಬಾಧೆಯಾಗದೆ ಇರುವುದರಿಂದಲೂ ಅವ್ಯಭಿಚಾರಿಯಾಗಿದ್ದಾನೆ.

ಪ್ರಶ್ನೆ: ವ್ಯಭಿಚಾರಿಯೆಂದರೇನು ?

ಉತ್ತರ: ಒಂದು ದೇಶದಲ್ಲಿ, ಒಂದು ಕಾಲದಲ್ಲಿ ಮಾತ್ರ ಇರುವ ವಸ್ತುವು ವ್ಯಭಿಚಾರಿಯೆನಿಸುತ್ತದೆ ಘಟದಂತೆ ದೇಹವು ಪರಿಚ್ಛಿನ್ನವಾಗಿಯೂ ಕ್ಷಣಿಕವಾಗಿಯೂ ಇರುವುದರಿಂದ ವ್ಯಭಿಚಾರಿಯಾಗಿದೆ.

ಈ ರೀತಿಯಾಗಿ ಆತ್ಮ, ಮತ್ತು ದೇಹ ಇವು ಕ್ರಮವಾಗಿ ಅವ್ಯಭಿಚಾರಿಯಾಗಿಯೂ ಇರುವುದರಿಂದ ಎರಡಕ್ಕೂ ಭೇದವು ಸಿದ್ಧಿಸುತ್ತದೆ. ಆದುದರಿಂದ ದೇಹವು ನಾನಲ್ಲ, ಮತ್ತು ನನ್ನದೂ ಅಲ್ಲ ಅದು ಪಂಚೀಕೃತ ಪಂಚಮಹಾಭೂತದ್ದು. ನಾನು ಸ್ಥೂಲ ದೇಹವಲ್ಲವಾದುದರಿಂದ ಸ್ಥೂಲದೇಹಕ್ಕೆ ಹೇಳಿದ ನಾಮ, ರೂಪ, ಜಾತಿ, ಆಶ್ರಮ, ರಂಗು, ಮೊದಲಾದ ಧರ್ಮಗಳು ನಾನಲ್ಲ, ಅವು ನನ್ನವೂ ಅಲ್ಲ. ಇವುಗಳನ್ನು ನೋಡುವ ನಾನು ಇವುಗಳಿಗಿಂತ ಬೇರೆಯಾಗಿದ್ದೇನೆ.

## ಸೂಕ್ಷ್ಮದೇಹದ ವಿಚಾರ

ಪ್ರಶ್ನೆ: ಲಿಂಗದೇಹವು ನಾನಲ್ಲ, ಅದು ನನದೂ ಅಲ್ಲ. ನಾನು ಅದಕ್ಕಿಂತ ಬೇರೆ ಎಂದು ಹೇಗೆ ತಿಳಿಯಬೇಕು.?

ಉತ್ತರ ಮರಣ, ಮೂರ್ಛೆ, ಸುಷುಪ್ತಿ, ಪ್ರಲಯ, ಬ್ರಹ್ಮಜ್ಞಾನ, ಈ ಐದು ಸ್ಥಳದಲ್ಲಿ ಲಿಂಗದೇಹವು ಲಯವಾಗುವುದರಿಂದ ಇದು

ವ್ಯಭಿಚಾರಿಯಾಗಿಯೂ, ಮಿಥ್ಯೆಯಾಗಿಯೂ ಇದೆ. ಆತ್ಮನು ಸರ್ವಕಾಲ ದಲ್ಲಿಯೂ, ಸರ್ವಾವಸ್ಥೆಯಲ್ಲಿಯೂ ಇರುವುದರಿಂದ|ಅವ್ಯಭಿಚಾರಿಯಾಗಿಯೂ, ಸದ್ರೂಪವಾಗಿಯೂ ಇದ್ದಾನೆ ಆ ಆತ್ಮ ಸದ್ರೂಪವಾಗಿರುವುದರಿಂದ ಲಿಂಗ ದೇಹವಲ್ಲ ಲಿಂಗದೇಹವು ಆತ್ಮವಲ್ಲ ಲಿಂಗದೇಹವು ಅಪಂಚೀಕೃತ ಪಂಚ ಭೂತಗಳ ಕಾರ್ಯವಾಗಿದೆ.

ನಾನು ಲಿಂಗದೇಹವಲ್ಲದ್ದರಿಂದ ಕರ್ತೃತ್ವ, ಭೋಕ್ತೃತ್ವ ಮೊದಲಾದ ಲಿಂಗದೇಹಗಳ ಧರ್ಮವೂ ನಾನಲ್ಲ, ಅವು ನನ್ನವೂ ಅಲ್ಲ. ನಾನು ಇವು ಗಳನ್ನು ತಿಳಿಯುುವವನಾದುದರಿಂದ ಇವುಗಳಿಗೆ ಭಿನ್ನನಾಗಿದ್ದೇನೆ

## ಕಾರಣ ದೇಹದ ವಿಚಾರ

ಕಾರಣ ದೇಹವು ಅಜ್ಞಾನರೂಪವಾಗಿದೆ. ಆದುದರಿಂದ ಇದು ನಾನಲ್ಲ. ಇದು ನನ್ನದೂ ಅಲ್ಲ. ಆದುದರಿಂದ ಕಾರಣ ದೇಹದ ಧರ್ಮಗಳಾದ ಆವರಣ ವಿಕ್ಷೇಪಗಳು ನಾನಲ್ಲ. ಅವು ನನ್ನವೂ ಅಲ್ಲ. ಇವುಗಳನ್ನು ನೋಡುವ ನಾನು ಇವುಗಳಿಗಿಂತ ಬೇರೆಯಾಗಿದ್ದೇನೆ

## ಸ್ವಪ್ನ ಸುಷುಪ್ತಿಗಳಿಗಿಂತ ಭಿನ್ನವಾದ ಜಾಗ್ರದಾವಸ್ಥೆಯ ವಿಚಾರ

ಪ್ರಶ್ನೆ ಜಾಗ್ರದಾವಸ್ಥೆಯೆಂದರೇನು ?

ಉತ್ತರ· ಸ್ವಪ್ನ, ಸುಷುಪ್ತಿ ಈ ಎರಡವಸ್ಥೆಗಳಿಗಿಂತ ಭಿನ್ನವಾಗಿ, ಇಂದ್ರಿಯಜನ್ಯ ಜ್ಞಾನಕ್ಕೂ ಅದರ ಸಂಸ್ಕಾರಕ್ಕೂ ಆಧಾರವಾಗಿ ಇರುವ ಕಾಲಕ್ಕೆ ಜಾಗ್ರದಾವಸ್ಥೆಯೆನ್ನುತ್ತಾರೆ. ಈ ಅವಸ್ಥೆಯಲ್ಲಿ ಹದಿನಾಲ್ಕು ತ್ರಿಪುಟಿಯಿಂದ ವ್ಯವಹಾರವು ನಡೆಯುತ್ತದೆ. ಈ ಅವಸ್ಥೆಯಲ್ಲಿ ಇರುವ ಸಾಮಗ್ರಿಗಳು ಜೀವನಿಗೆ ನೇತ್ರಸ್ಥಾನ; ಶರೀರದ ತುಂಬ ಜೀವನು ವ್ಯಾಪಿಸಿ ದ್ದರೂ ನೇತ್ರವು ಮುಖ್ಯ ಸ್ಥಾನ. ಕ್ರಿಯಾಶಕ್ತಿ, ವೈಖರೀವಾಣಿ, ಸ್ಥೂಲ ಭೋಗ, ರಜೋಗುಣ – ಈ ಅವಸ್ಥೆಯ ಅಭಿಮಾನಿಗೆ ವಿಶ್ವನೆಂಬ ಹೆಸರು. ಜಾಗ್ರತ್ತಿನಲ್ಲಿ ಸ್ವಪ್ನ ಸುಷುಪ್ತಿಗಳಿಲ್ಲ ಸ್ವಪ್ನ ಸುಷುಪ್ತಿಯಲ್ಲಿ ಜಾಗ್ರತ್ತಿಲ್ಲ.

ಇವುಗಳಿಗೆ ಸಾಕ್ಷಿಯಾದ ಆತ್ಮನು ಮೂರವಸ್ಥೆಯಲ್ಲಿಯೂ ಇದ್ದಾನೆ ಈ ಕಾರಣದಿಂದ ಆತ್ಮನು ಜಾಗ್ರದಾವಸ್ಥೆಗಿಂತ ಭಿನ್ನನಾಗಿದ್ದಾನೆ.

## ಜಾಗ್ರತ್ತು ಸುಷುಪ್ತಿಗಳಿಗಿಂತ ಭಿನ್ನವಾದ ಸ್ವಪ್ನಾವಸ್ಥೆಯ ವಿವೇಚನ

ಪ್ರಶ್ನೆ: ಸ್ವಪ್ನಾವಸ್ಥೆ ಎಂದರೇನು ?

ಉತ್ತರ ಇಂದ್ರಿಯಗಳ ಸಹಾಯವಿಲ್ಲದೆ ಓತನಾಡಿಯಲ್ಲಿದ್ದು ಜಾಗ್ರತ್ತಿನ ಸಂಸ್ಕಾರದಿಂದ ವಿಷಯಗಳು ತಿಳಿದುಬರುವುದು ಸ್ವಪ್ನಾವಸ್ಥೆಯೆನಿಸುತ್ತದೆ

ಈ ಅವಸ್ಥೆಯಲ್ಲಿ ಇರುವ ಸಾಮಗ್ರಿ – ಕಂಠ ಸ್ಥಾನ, ಜ್ಞಾನ ಶಕ್ತಿ, ಮಧ್ಯಮವಾಣಿ, ಸೂಕ್ಷ್ಮಭೋಗ, ಸತ್ವಗುಣ. ಈ ಅವಸ್ಥೆಯ ಅಭಿಮಾನಿ ತೈಜಸ, ಜಾಗ್ರತ್ತು ಸುಷುಪ್ತಿಯಲ್ಲಿ ಸ್ವಪ್ನವಿಲ್ಲ. ಸ್ವಪ್ನದಲ್ಲಿ ಜಾಗ್ರತ್ತು ಸುಷುಪ್ತಿಗಳಿಲ್ಲ. ಆತ್ಮನು ಮೂರವಸ್ಥೆಗಳಲ್ಲಿಯೂ ಸಾಕ್ಷಿಯಾಗಿರುವುದರಿಂದ ಆತ್ಮನು ಸ್ವಪ್ನಾವಸ್ಥೆಗಿಂತ ಬೇರೆಯಾಗಿದ್ದಾನೆ

## ಜಾಗ್ರತ್ತು ಸ್ವಪ್ನಗಳಿಗಿಂತ ಭಿನ್ನವಾದ ಸುಷುಪ್ತಿ ಅವಸ್ಥೆಯ ವಿಚಾರ

ಪ್ರಶ್ನೆ: ಸುಷುಪ್ತಿ ಅವಸ್ಥೆ ಎಂದರೇನು ?

ಉತ್ತರ: ಕೇವಲ ಸುಖ ಮತ್ತು ಅಜ್ಞಾನ ಇರುವ ಅವಸ್ಥೆಯು ಸುಷುಪ್ತಿ ಅವಸ್ಥೆ ಎನಿಸುತ್ತದೆ. ಈ ಅವಸ್ಥೆಯಲ್ಲಿಯ ಸಾಮಗ್ರಿಗಳು – ಹೃದಯ ಸ್ಥಾನ, ದ್ರವ್ಯಶಕ್ತಿ, ಅಂದರೆ ಕ್ರಿಯಾ ರೂಪವಾದ, ಜ್ಞಾನರೂಪವಾದ ವ್ಯವಹಾರವಿಲ್ಲದ ಕೇವಲ ಅಜ್ಞಾನರೂಪವಾದ ದ್ರವ್ಯ. ಪಶ್ಯಂತಿವಾಣಿ, ಆನಂದಭೋಗ, ತಮೋಗುಣ – ಈ ಅವಸ್ಥೆಯ ಅಭಿಮಾನಿ ಪ್ರಾಜ್ಞ. ಜಾಗ್ರತ್ ಸ್ವಪ್ನದಲ್ಲಿ ಸುಷುಪ್ತಿ ಇಲ್ಲ ಸುಷುಪ್ತಿಯಲ್ಲಿ ಜಾಗ್ರತ್ತು ಸ್ವಪ್ನಗಳಿಲ್ಲ. ಆತ್ಮ ಮೂರವಸ್ಥೆಗೂ ಸಾಕ್ಷಿಯಾಗಿ ಇರುವುದರಿಂದ ಆತ್ಮನು ಸುಷುಪ್ತಿಗಿಂತ ಭಿನ್ನವಾಗಿದ್ದಾನೆ.

ಕೆಲವರು ಜಾಗ್ರತ್ತಿನಲ್ಲಿ ಸತ್ವಗುಣ ಜ್ಞಾನಶಕ್ತಿ ಎಂದೂ, ಸ್ವಪ್ನದಲ್ಲಿ ರಜೋಗುಣ ಕ್ರಿಯಾಶಕ್ತಿ ಎಂದೂ ಹೇಳುತ್ತಾರೆ ಆದರೂ ವಿರೋಧವಿಲ್ಲ. ಕ್ರಮರಹಿತ ದೃಷ್ಟಿಯಲ್ಲಿ ನಿಯಮವೆಲ್ಲಿಯದು ?

ಸ್ಥೂಲ ಶರೀರವು ಅನ್ನಮಯಕೋಶ ಕಾರಣ ಶರೀರವು ಆನಂದ ಮಯಕೋಶ, ಸೂಕ್ಷ್ಮ ಶರೀರವು ಪ್ರಾಣಮಯ ಮನೋಮಯ ವಿಜ್ಞಾನ ಮಯ ಕೋಶಗಳು ಆದುದರಿಂದ ಶರೀರತ್ರಯ ವಿವೇಕದಿಂದ ಪಂಚಕೋಶ ವಿವೇಕವು ಸಂಭವಿಸುತ್ತದೆ. ಜೀವನ ಸ್ವರೂಪವು ವ್ಯಷ್ಟಿ ಪಂಚಕೋಶಗಳಿಗಿಂತ ಬೇರೆಯಾಗಿರುವಂತೆ ಈಶ್ವರನ ಸ್ವರೂಪವು ಸಮಷ್ಟಿ ಪಂಚಕೋಶಗಳಿಗಿಂತ ವಿಲಕ್ಷಣವಾಗಿದೆ

ಚತುರ್ಥ ತರಂಗದಲ್ಲಿ ನಾಲ್ಕು ವಿಧವಾದ ಆಕಾಶದ ದೃಷ್ಟಾಂತದಿಂದ ಜೀವೇಶ್ವರರ ಲಕ್ಷ್ಯ ಸ್ವರೂಪದ ವಿವೇಕವು ವಿಸ್ತಾರವಾಗಿ ಹೇಳಲ್ಪಟ್ಟಿದೆ. ಮತ್ತು ಉತ್ತರ ತರಂಗದಲ್ಲಿ ಅಸ್ತಿ, ಭಾತಿ, ಪ್ರಿಯ ರೂಪ ನಿರೂಪಣೆಯಲ್ಲಿ, ಹಾಗೂ ಈಗ ಮಹಾವಾಕ್ಯಾರ್ಥ ನಿರೂಪಣೆಯಲ್ಲಿ ಆತ್ಮನ ಪರಮಾರ್ಥ ಸ್ವರೂಪದ ಪ್ರತಿಪಾದನೆಯು ಮಾಡಲ್ಪಟ್ಟಿದೆ. ಆದುದರಿಂದ ಇಲ್ಲಿಯ ಆತ್ಮ ವಿವೇಕವು ಸಂಕ್ಷೇಪವೆಂದು ತಿಳಿಯಬೇಕು

## ಮಹಾವಾಕ್ಯಾರ್ಥ ಉಪದೇಶ

ಹಿಂದೆ ಹೇಳಿದ ಪಂಚಕೋಶಗಳಿಗಿಂತ ಆತ್ಮನು ಬೇರೆ ಎಂದು ತಿಳಿಯುವುದರಿಂದ ಕೃತಕೃತ್ಯತೆಯುಂಟಾಗುವುದಿಲ್ಲ. ಜೀವ ಬ್ರಹ್ಮರ ಅಭೇದ ನಿಶ್ಚಯಕ್ಕಾಗಿ ಪುನಃ ವಿಚಾರ ಮಾಡಬೇಕು. ಆದುದರಿಂದ ಕರ್ತವ್ಯದ ಅಭಾವ ರೂಪವಾದ ಕೃತಕೃತ್ಯತೆಯ ಸಿದ್ಧಿಗಾಗಿ ಮುಂದೆ ಮಹಾವಾಕ್ಯದ ಉಪದೇಶವು ಪ್ರತಿಪಾದಿಸಲ್ಪಡುತ್ತದೆ.

ಸವೈಯಾ – ಪಂಚಕೋಶತೈ ಆತಮ ನ್ಯಾರೋ,
ಜಾನಿ ಸುಜಾನಹು ಬ್ರಹ್ಮ ಸ್ವರೂಪ ।
ತಾತೈ ಭಿನ್ನ ಜು ದೀಖೈ ಸುನಿಯೋ,
ಯಾ ಮಾನಹು ಮಿಥ್ಯಾಭ್ರಮ ಕೂಪ ॥

ಅಧಿಷ್ಠಾನ ಮಿಥ್ಯಾ ನ ಬಿಗಾರೈ.
ಸ್ವಪ್ನೈ ಬೀಖ ನ ನಿರ್ಧನ ಭೂಪ ।
ಸಬ ಶುಭಕರ್ತಾ ತಊ ಅಕರ್ತಾ,
ತವ ಅಸ ಅದ್ಭುತ ರೂಪ ಅನೂಪ ॥ ॥೧೫॥

ಅರ್ಥ. ಹೇ ಶಿಷ್ಯ ! ಐದು ಕೋಶಗಳಿಗಿಂತ ಆತ್ಮನನ್ನು ಬೇರೆಯೆಂದು ತಿಳಿದು, ಆ ಬೇರೆಯಾದ ಆತ್ಮನು ಬ್ರಹ್ಮ ಸ್ವರೂಪವೆಂದು ತಿಳಿ

ಪ್ರಶ್ನೆ: ಆತ್ಮನು ಪುಣ್ಯ ಪಾಪಗಳಿಗೆ ಕರ್ತ, ಮತ್ತು ಪುಣ್ಯ ಪಾಪಗಳ ಫಲಗಳಾದ ಸ್ವರ್ಗ, ನರಕ, ಜನ್ಮ, ಮೃತ್ಯು, ಸುಖ, ದುಃಖಗಳ ಭೋಕ್ತ ಇಂಥ ಆತ್ಮನಿಗೂ ಅಕರ್ತ ಅಭೋಕ್ತ ಸ್ವರೂಪನಾದ ಬ್ರಹ್ಮಕ್ಕೂ ಏಕತೆ ಹೇಗೆ ಸಂಭವಿಸುತ್ತದೆ?

ಉತ್ತರ: ಅಕರ್ತ ಅಭೋಕ್ತನಾದ ಆತ್ಮನಿಗೂ ಬ್ರಹ್ಮಕ್ಕೂಸದಾ ಅಭೇದವಿದೆ

ಹೇ ಶಿಷ್ಯನೆ! ಆ ಬ್ರಹ್ಮರೂಪನಾದ ಆತ್ಮಕ್ಕಿಂತ ಭಿನ್ನವಾಗಿ ನೋಡಲ್ಪಟ್ಟ ಘಟಪಟಾದಿಗಳೂ, ಮತ್ತು ಶಾಸ್ತ್ರ ದ್ವಾರಾ ಕೇಳಲ್ಪಟ್ಟ ಸ್ವರ್ಗ ನರಕಗಳೂ ಪುಣ್ಯ ಪಾಪಗಳೂ, ಇವೆಲ್ಲಾ ಸಂಪೂರ್ಣವಾಗಿ ಭ್ರಮೆ ಮಾತ್ರವೆಂದು ತಿಳಿ. ಆ ಭ್ರಮರೂಪವಾದ ಮಿಥ್ಯಾವಸ್ತುವಿನಿಂದ ಸತ್ಯರೂಪ ಅಧಿಷ್ಠಾನವು ಸ್ವಪ್ನದಲ್ಲಿ ಭಿಕ್ಷ ಬೇಡುವುದರಿಂದ ರಾಜನು ದರಿದ್ರನಾಗದಂತೆಯೂ, ಮಿಥ್ಯಾ ಮೃಗಜಲದಿಂದ ಭೂಮಿಯು ಆದ್ರ್ರವಾಗದಂತೆಯೂ, ಮಿಥ್ಯಾಸರ್ಪದಿಂದ ರಜ್ಜುವು ವಿಷಸಂಯುಕ್ತವಾಗದಂತೆಯೂ ಕೆಡುವುದಿಲ್ಲ.

ಈ ರೀತಿಯಾಗಿ ಅಸಂಗಾತ್ಮ ಸ್ವರೂಪನಾದ ನೀನು ಶುಭಾಶುಭಗಳಾದ ಸಂಪೂರ್ಣ ಕ್ರಿಯೆಗಳಿಗೆ ಕರ್ತನಂತೆ ತೋರಿದರೂ ಸ್ವರೂಪತಃ ಅಕರ್ತನಾಗಿರುವೆ. ಅಂದರೆ ನೀನು ಪರಮಾರ್ಥ ದೃಷ್ಟಿಯಿಂದ ಕರ್ತನಲ್ಲ ಇಂಥ ನಿನ್ನ ಸ್ವರೂಪವು ಆಶ್ಚರ್ಯರೂಪವಾಗಿಯೂ, ಉಪಮಾ ರಹಿತವಾಗಿಯೂ ಇದೆ. ಅಂದರೆ ಬ್ರಹ್ಮಕ್ಕೆ ಭಿನ್ನವಲ್ಲದ ನಿನ್ನ ಸ್ವರೂಪದಲ್ಲಿ ಸ್ಥೂಲ ಸೂಕ್ಷ್ಮ ಶರೀರಗಳು, ಮತ್ತು ಇವುಗಳಿಂದಾಗುವ ಶುಭಾಶುಭ ಕ್ರಿಯೆಗಳೂ, ಶುಭಾಶುಭ ಕ್ರಿಯೆಗಳಿಗೆ ಫಲಗಳಾದ ಜನ್ಮ ಮರಣ ಸ್ವರ್ಗ ನರಕಾದಿಗಳು ಇವೆಲ್ಲವೂ ಅವಿದ್ಯೆಯಿಂದ ಕಲ್ಪಿತಗಳಾಗಿವೆ.

ಈ ಕಲ್ಪಿತ ಸಾಮಗ್ರಿಯಿಂದ ನಿನ್ನ ಬ್ರಹ್ಮ ಭಾವಕ್ಕೆ ಯಾವ ಬಾಧೆಯೂ ಇಲ್ಲ ಆದುದರಿಂದ ಜ್ಞಾನಕ್ಕಿಂತ ಪೂರ್ವದಲ್ಲಿಯೂ ನೀನು ಬ್ರಹ್ಮ ಸ್ವರೂಪನೇ ನಿನ್ನ ಬ್ರಹ್ಮ ಸ್ವರೂಪದಲ್ಲಿ ತ್ರಿಕಾಲದಲ್ಲಿಯೂ ಶರೀರಗಳ ಮತ್ತು ಶರೀರ ಧರ್ಮಗಳ ಸಂಬಂಧವಿಲ್ಲ. ಆತ್ಮನು ನಿತ್ಯ ಮುಕ್ತನು. ಅವನಿಗೆ ಬ್ರಹ್ಮದೊಡನೆ ಭೇದವು ಯಾವಾಗಲೂ ಇಲ್ಲ - ಎಂಬುವ ವೇದಾಂತ ವಾಕ್ಯವನ್ನು ನಂಬು ಆತ್ಮನಿಗೂ ಬ್ರಹ್ಮಕ್ಕೂ ಭೇದವಿಲ್ಲದ್ದರಿಂದ ಆತ್ಮನು ತ್ರಿಕಾಲದಲ್ಲಿಯೂ ಜನನ, ಮರಣಾದಿ ದುಃಖ ರಹಿತನಾಗಿದ್ದಾನೆ

## ಜೀವನ್ಮುಕ್ತನ ನಿಶ್ಚಯು ವೇದಾಂತ ಶ್ರವಣ ಫಲ

ಶಂಕಾ: ಆತ್ಮನು ಸದಾ ನಿತ್ಯಮುಕ್ತನೂ, ಬ್ರಹ್ಮಸ್ವರೂಪನೂ ಆಗಿದ್ದರೆ ಶ್ರವಣಾದಿ ಜ್ಞಾನಸಾಧನಗಳು ನಿಷ್ಪ್ರಯೋಜನಗಳಾಗುತ್ತವೆಯಲ್ಲವೆ?

ಸಮಾಧಾನ

ಇಂದವಛಂದ – ನಾಹಿಂಖಪುಷ್ಪ ಸಮಾನ ಪ್ರಪಂಚ ತು,
ಈಸ ಕಹಾ ಕರ್ತಾ ಜು ಕಹಾ ಹೈ ।
ಸಾಖ್ಯ ನಹಿ ಇಮು ಸಾಖಿ ಸ್ವರೂಪನ
ದೃಶ್ಯ ನಹೀ ದೃಕ್ ಕಾಹಿ ಜನಾವೈ ॥
ಬಂಧ ಹು ಹೋ ಈ ತು ಮೋಚ್ಛ ಬನೈ ಅರು,
ಹೋಯ ಅಜ್ಞಾನ ತುಜ್ಞಾನ ನಸಾವೈ ।
ಜಾನಿ ಯಹೀ ಕರತವ್ಯ ತಜೈ ಸಬ,
ನಿಶ್ಚಲ ಹೋತ ಹಿ ನಿಶ್ಚಲ ಪಾವೈ ॥ ॥೧೬೦॥

ಅರ್ಥ: ಜೀವನ್ಮುಕ್ತ ವಿದ್ವಾಂಸನ ದೃಷ್ಟಿಯಲ್ಲಿ ಅಜ್ಞಾನ, ಮತ್ತು ಅಜ್ಞಾನದ ಕಾರ್ಯ ಇವು ತುಚ್ಛವಾಗಿವೆ. ಜೀವನ್ಮುಕ್ತ ವಿದ್ವಾಂಸನ ದೃಷ್ಟಿಯ ಲಕ್ಷಣವು ಕೆಳಗಿನಂತೆ ಇದೆ.

ಹೇ ಶಿಷ್ಯನೇ ! ದೃಶ್ಯಮಾನವಾದ ಪ್ರಪಂಚವು ಆಕಾಶ ಪುಷ್ಪಕ್ಕೆ ಸಮಾನ ಅಂದರೆ ತ್ರಿಕಾಲ ಅಭಾವ ರೂಪವಾಗಿದೆ ಇದೇ ವಿಷಯವನ್ನು – "ವ್ಯಾವಹಾರಿಕ ಪ್ರಪಂಚೋಮಿಥ್ಯಾ ದೃಶ್ಯತ್ವಾತ್, ಸಪ್ನಪ್ರಪಂಚವತ್" ಎಂದರೆ ವ್ಯಾವಹಾರಿಕ ಪ್ರಪಂಚವು ಸ್ವಪ್ನದಂತೆ ದೃಶ್ಯವಾದುದರಿಂದ ಮಿಥ್ಯೆ

ಎಂದು ಹೇಳಿವೆ. ಈ ದೃಷ್ಟಿಯಿಂದ ನೋಡಿದರೆ ಪ್ರಪಂಚದ ಕರ್ತನಾದ ಈಶ್ವರನೂ ಇಲ್ಲ. ಸಾಕ್ಷಿಗೆ ವಿಷಯವಾದ ಅಜ್ಞಾನಾದಿಗಳನ್ನು ಸಾಕ್ಷ್ಯವೆನ್ನುತ್ತಾರೆ. ಆ ಸಾಕ್ಷ್ಯವೇ ಇಲ್ಲದ ಮೇಲೆ ಸಾಕ್ಷಿಯೂ ಇಲ್ಲ. ಇದರಂತೆ ದೃಶ್ಯವನ್ನು ಪ್ರಕಾಶಿಸುವುದಕ್ಕೆ ದೃಕ್ಕು ಅಂದರೆ ದ್ರಷ್ಟಾ ಎನ್ನುತ್ತಾರೆ. ಆ ಪ್ರಕಾಶ್ಯವಾದ ದೇಹಾದಿಗಳನ್ನು ದೃಶ್ಯವೆನ್ನುತ್ತಾರೆ. ಆ ದೃಶ್ಯವೇ ಇಲ್ಲದ ಮೇಲೆ ಅದನ್ನು ಪ್ರಕಾಶಿಸುವ ದೃಕ್ಕೂ ಇಲ್ಲ.

ಯದ್ಯಪಿ ಕೇವಲ ಕೂಟಸ್ಥ ಚೈತನ್ಯವನ್ನು ಸಾಕ್ಷಿ ಮತ್ತು ದ್ರಷ್ಟ ಎನ್ನುತ್ತಾರೆ. ಆ ಕೂಟಸ್ಥನ ನಿಷೇಧವು ಸಂಭವಿಸುವುದಿಲ್ಲ. ತಥಾಪಿ ಸಾಕ್ಷ್ಯದ ಅಪೇಕ್ಷೆಯಿಂದ ಸಾಕ್ಷಿ ಎಂಬ ನಾಮವು ದೃಶ್ಯದ ಅಪೇಕ್ಷೆಯಿಂದ ದ್ರಷ್ಟಾ ಎಂಬ ನಾಮಕ್ಕೆ ಅಭಾವವಿದೆ. ಈ ದೃಷ್ಟಿಯಿಂದ ಸಾಕ್ಷಿ ಮತ್ತು ದ್ರಷ್ಟಾ ಎಂಬ ನಾಮಗಳು ಮಾತ್ರ ನಿಷೇಧಿಸಲ್ಪಟ್ಟಿವೆ, ಅಷ್ಟೆ. ಸಾಕ್ಷಿ ಮತ್ತು ದ್ರಷ್ಟಾ ಇವುಗಳ ಸ್ವರೂಪವಾದ ಚೈತನ್ಯಕ್ಕೆ ನಿಷೇಧವಿಲ್ಲ.

ಬಂಧವು ನಿಜವಾಗಿದ್ದರೆ ಬಂಧ ನಿವೃತ್ತಿ ರೂಪವಾದ ಮೋಕ್ಷವು ಬೇಕಿತ್ತು. ಬಂಧವೇ ಇಲ್ಲದಿದ್ದ ಮೇಲೆ ಮೋಕ್ಷವೂ ಬೇಕಿಲ್ಲ. ಅಜ್ಞಾನವು ನಿಜವಾಗಿ ಇದ್ದರೆ ಜ್ಞಾನದಿಂದ ಅದರ ನಾಶವಾಗಬಹುದಾಗಿತ್ತು. ಅಜ್ಞಾನವೇ ಇಲ್ಲದ ಮೇಲೆ ಜ್ಞಾನವೂ ಇಲ್ಲ. ಸಾರಾಂಶವೇನೆಂದರೆ, ಸದ್ರೂಪವಾದ ಚೈತನ್ಯಕ್ಕೆ ಅಸದ್ರೂಪ ಪದಾರ್ಥಗಳ ಅಪೇಕ್ಷೆಯಿಂದ ಅನೇಕ ನಾಮಗಳು ಬೋಧೆಗಾಗಿ ಭಾವಿಸಲ್ಪಟ್ಟಿವೆ.

ಈ ವಿಷಯವನ್ನು ಸರಿಯಾಗಿ ತಿಳಿದು ಕರ್ತವ್ಯ ಬುದ್ಧಿಯನ್ನು ತ್ಯಜಿಸು, ಅಂದರೆ ಇದನ್ನು ನಾನು ಮಾಡಬೇಕು, ಇದನ್ನು ನಾನು ಬಿಡಬೇಕು ಎಂಬ ಬುದ್ಧಿಯನ್ನು ತ್ಯಜಿಸು. ಯಾಕೆಂದರೆ, ಇಹಲೋಕ ಪರಲೋಕ ಈ ಎರಡೂ ತುಚ್ಛಗಳಾಗಿವೆ. ಇವುಗಳಿಗಾಗಿ ಕರ್ತವ್ಯವೂ ಬೇಕಾಗಿಲ್ಲ. ಆತ್ಮನಲ್ಲಿ ಬಂಧವೇ ಇಲ್ಲದ ಮೇಲೆ ಮೋಕ್ಷಕ್ಕಾಗಿ ಯಾವ ಕರ್ತವ್ಯವೂ ಇಲ್ಲ. ಈ ರೀತಿ ಆತ್ಮನು ನಿತ್ಯಮುಕ್ತನೂ, ಬ್ರಹ್ಮಸ್ವರೂಪನೂ ಎಂದು ತಿಳಿದು ನಿಶ್ಚಲನಾದಾಗ ಅಂದರೆ ಸಮಸ್ತ ಕರ್ತವ್ಯಗಳ ಅಭಾವವುಂಟಾದಾಗ ನಿಶ್ಚಲ, ಅಕ್ರಿಯ, ಬ್ರಹ್ಮ ಸ್ವರೂಪವೆಂಬ ವಿದೇಹ ಮೋಕ್ಷವನ್ನು ಪಡೆಯುವಿ.

ಮುಖ್ಯವಾದ ಅಂಶವೇನೆಂದರೆ, ಆತ್ಮನು ಜ್ಞಾನಕ್ಕಿಂತ ಪೂರ್ವವೂ

ನಿತ್ಯಮುಕ್ತ ಬ್ರಹ್ಮ ಸ್ವರೂಪನೇ ಆಗಿದ್ದರೂ ಜ್ಞಾನವಿಲ್ಲದ್ದರಿಂದ ಆತ್ಮನನ್ನು ಕರ್ತಾ ಭೋಕ್ತಾ ಎಂದು ತಿಳಿದು, ದುಃಖ ನಿವೃತ್ತಿಗಾಗಿ ಮತ್ತು ಸುಖ ಪ್ರಾಪ್ತಿಗಾಗಿ ಅನೇಕ ಸಾಧನಗಳನ್ನು ಮಾಡುವುದರಿಂದ ಕ್ಲೇಶ ಪ್ರಾಪ್ತಿಯಾಗುತ್ತಿತ್ತು. ಪೂರ್ವ ಪುಣ್ಯವಿಶೇಷದಿಂದ ಉತ್ತಮ ಆಚಾರ್ಯರು ಪ್ರಾಪ್ತರಾಗಿ ಅವರಿಂದ ವೇದಾಂತ ವಾಕ್ಯಗಳ ಶ್ರವಣ ಮಾಡಿದಾಗ, ನಾನು ಕರ್ತನೂ ಅಲ್ಲ ಭೋಕ್ತನೂ ಅಲ್ಲ, ನಾನು ಬ್ರಹ್ಮ ಸ್ವರೂಪನು, ನನಗೆ ಕಿಂಚಿನ್ಮಾತ್ರವೂ ಕರ್ತವ್ಯವಿಲ್ಲವೆಂಬುದು ತಿಳಿದುಬರುತ್ತದೆ ಈ ತಿಳುವಳಿಕೆಯೇ ಶ್ರವಣಕ್ಕೆ ಫಲ ಬ್ರಹ್ಮಪ್ರಾಪ್ತಿಯು ಶ್ರವಣಕ್ಕೆ ಫಲವಲ್ಲ ಯಾಕೆಂದರೆ ಬ್ರಹ್ಮವು ತನ್ನ ಸ್ವರೂಪ, ಅದು ನಿತ್ಯಪ್ರಾಪ್ತವಾಗಿದೆ

## ಜ್ಞಾನಿ ಅಜ್ಞಾನಿಗಳ ಚಿಹ್ನೆ

ದೋಹಾ – ಯಹೀ ಚಿಹ್ನ ಅಜ್ಞಾನಕೂ, ಜೋ ಮಾನೆ ಕರ್ತವ್ಯ ।
ಸೋಈ ಜ್ಞಾನೀ ಸುಘರ ನರ, ನಹಿ ಜಾಕುಂ ಭವಿತವ್ಯ ॥೧೬೧॥

ಪ್ರಶ್ನೆ. ಜ್ಞಾನಿ ಅಜ್ಞಾನಿಗಳ ಚಿಹ್ನೆಯೇನು ?

ಉತ್ತರ. ನನಗೆ ಏನಾದರೂ ಕರ್ತವ್ಯವಿರುವುದೆಂದು ತನಗೆ ಕರ್ತವ್ಯವನ್ನು ಅಂಗೀಕರಿಸುವುದು ಅಜ್ಞಾನಿಯ ಚಿಹ್ನೆ. ಮತ್ತು ಕರ್ತವ್ಯದ ಅಭಾವದಿಂದಲೂ ಮತ್ತು ಭವಿತವ್ಯತ್ವದ ಅಭಾವದಿಂದಲೂ, ಅಂದರೆ ಅನ್ಯರೂಪವಾಗಬೇಕೆಂಬ ಇಚ್ಛೆ ಇಲ್ಲದಿರುವುದೇ ಜ್ಞಾನಿಯ ಚಿಹ್ನೆ. ಈ ಚಿಹ್ನೆಯನ್ನು ಎಲ್ಲರೂ ತಮ್ಮ ತಮ್ಮಲ್ಲಿ ಪರೀಕ್ಷಿಸಿ ತಾವು ಜ್ಞಾನಿಯೋ ಅಜ್ಞಾನಿಯೋ ಎಂದು ನಿಶ್ಚಯಿಸಿಕೊಳ್ಳಬೇಕು.

## ರಹಸ್ಯೋಪದೇಶ

ಇಂಧವಛಂದ – ಏಕ ಅಖಂಡಿತ ಬ್ರಹ್ಮ ಅಸಂಗ,
ಅಜನ್ಮ ಅದೃಶ್ಯ ಅನೂಪ ಅನಾ ಮೈ ।
ಮೂಲ ಅಜ್ಞಾನ ನ ಸೂಛಮ ಥೂಲ,
ಸಮಷ್ಟಿನ ವ್ಯಷ್ಟಿಪನೊ ನಹಿ ತಾಮೈ ॥

ಈಸ ನ ಸೂತ್ರ ವಿರಾಟ ನ ಪ್ರಾಜ್ಞ ನ,
ತೈಜಸ ವಿಶ್ವ–ಸ್ವರೂಪ ನ ಜಾನ್ಯೈ ।
ಭೋಗ ನ ಜೋಗ ನ ಬಂಧ ನ ಮೋಕ್ಷಸ,
ನಹಿ ಕಛು ವಾಮ್ಯೆಂ ರು ಹೈ ಸಬ ವಾಮ್ಯೆ ॥೧೬೨॥

ಜಾಗ್ರತ ಮ್ಯೆಂ ಜು ಪ್ರಪಂಚ ಪ್ರಭಾಸತ,
ಸೊ ಸಬ ಬುದ್ಧಿ–ವಿಲಾಸ ಬನ್ಯೊಹೈ ।
ಜ್ಯು ಸುಪನೆ ಮಹಿ ಭೋಗ್ಯ ನ ಭೋಗ,
ತಊ ಇಕ ಚಿತ್ರ ವಿಚಿತ್ರ ಜನ್ಯೊ ಹೈ ॥
ಲೀನ ಸುಷುಪತಿಮ್ಯೆ ಮತಿ ಹೋತಹಿ,
ಭೇದ ಭಗ್ಯೆ ಇಕ ರೂಪ ಸುನ್ಯೋ ಹೈ ।
ಬುದ್ಧಿರಚ್ಯೋ ಜು ಮನೋರಥ ಮಾತ್ರ ಸು,
ನಿಶ್ಚಲ ಬುದ್ಧಿ ಪ್ರಕಾಶ ಭನ್ಯೋ ಹೈ ॥೧೬೩॥

ಅರ್ಥ: ಒಂದೇ ಒಂದಾದ, ಅಖಂಡವಾದ, ಅಸಂಗವಾದ, ಅಜನ್ಯವಾದ, ಅರೂಪವಾದ ಬ್ರಹ್ಮದಲ್ಲಿ ಮೂಲಾಜ್ಞಾನವಿಲ್ಲ, ತೂಲಾಜ್ಞಾನವೂ ಇಲ್ಲ; ಸ್ಥೂಲ, ಸೂಕ್ಷ್ಮ ಭಾವಗಳಿಲ್ಲ, ವ್ಯಷ್ಟಿ ಸಮಷ್ಟಿಗಳಿಲ್ಲ; ಸೂತ್ರ ವಿರಾಟವಿಲ್ಲ, ಪ್ರಾಜ್ಞ, ತೈಜಸ, ವಿಶ್ವವಿಲ್ಲ; ಭೋಗವಿಲ್ಲ, ಯೋಗವಿಲ್ಲ, ಬಂಧವಿಲ್ಲ, ಮೋಕ್ಷವಿಲ್ಲ; ಯಾವುದೂ ಅಣುಮಾತ್ರವೂ ಇಲ್ಲ ಈ ರೀತಿ ಸ್ವಯಂ ಜ್ಯೋತಿಪೂರ್ಣವಾದ ಬ್ರಹ್ಮದಲ್ಲಿ ಜಾಗ್ರದಾದಿ ಅವಸ್ಥೆಗಳೂ, ಈ ಅವಸ್ಥೆಯಲ್ಲಿ ಪ್ರತೀಯಮಾನವಾದ ಪ್ರಪಂಚ ಮೊದಲಾದವುಗಳೂ ಬುದ್ಧಿ ವಿಲಾಸ ಮಾತ್ರವೆಂದು ತಿಳಿಯಬೇಕು ನಿದ್ರಾಸ್ಥಾನದಲ್ಲಿ ತಾನೊಬ್ಬನೇ ಇದ್ದರೂ, ಬಾಹ್ಯ ಪದಾರ್ಥಗಳು ಯಾವುದೂ ಇಲ್ಲದಿದ್ದರೂ ಸ್ವಪ್ನದಲ್ಲಿ ಚಿತ್ರ ವಿಚಿತ್ರ ಪದಾರ್ಥಗಳೂ, ಅವುಗಳ ಜ್ಞಾನವೂ ಆಗುತ್ತದೆ. ಮತ್ತು ಸುಷುಪ್ತಿಯಲ್ಲಿಯಾದರೂ, ಬಾಹ್ಯ ಪದಾರ್ಥಗಳೂ ಇಲ್ಲ, ಅಂತರ ಪದಾರ್ಥಗಳೂ ಇಲ್ಲ; ಅಲ್ಲಿ ಇಂದ್ರಿಯ ಸಹಿತ ಬುದ್ಧಿಯೂ ಇಲ್ಲ ಅಲ್ಲಿ ಆತ್ಮನು ಏಕರಸವಾಗಿರುವುದರಿಂದ ಭೇದ ಭಯ ಮೊದಲಾದ ಭಿನ್ನ ಪದಾರ್ಥಗಳು ಯಾವುವೂ ಇಲ್ಲ.

ಹೀಗಿದ್ದರೂ ಉತ್ತರವಾದ ಜಾಗ್ರತ್ತಿನಲ್ಲಿ ಬುದ್ಧಿಯೂ, ನಾನಾ ಪದಾರ್ಥಗಳೂ ಕಂಡು ಬರುತ್ತವೆ. ಅವುಗಳ ನಿಜವಾದ ಸ್ವರೂಪವೇನು ? ಅವೆಲ್ಲವೂ ಬುದ್ಧಿಯನ್ನು ಪ್ರಕಾಶಿಸುವ ಆತ್ಮನೇ ?

ಸವೈಯಾಛಂದ – ಜಾಕೆ ಹಿಯೆ ಜ್ಞಾನ ಉಜಿಯಾರೊ,
ತೆಮ ಅಂಧಿಯಾರೋ ಖರೋ ಬಿನಾಸ ।
ಸದಾ ಅಸಂಗ ಏಕರಸ ಆತಮ,
ಬ್ರಹ್ಮರೂಪ ಸೊ ಸ್ವಯಂ ಪ್ರಕಾಸ ॥
ನಾಕಛು ಭಯೋ ನ ಹೈ ನಹಿ ಹ್ವೈ ಹೈ,
ಜಗತ ಮನೋರಥ ಮಾತ್ರ ವಿಲಾಸ ।
ತಾಕೋ ಪ್ರಾಪ್ತಿ ನಿವೃತ್ತಿ ನ ಚಾಹತ,
ಜ್ಯು ಜ್ಞಾನೀಕೆ ಕೋಊ ನ ಆಸ ॥ ॥೧೬೪॥

ಅರ್ಥ ಆತ್ಮಾನುಭವ ಜ್ಞಾನವುಂಟಾಗಿ, ಅದರಿಂದ ಅಜ್ಞಾನಾಂಧಕಾರವು ನಾಶವಾದವನಿಗೆ ಬಾಹ್ಯಾಂತರ ವ್ಯಾಪಕವಾದ ಅಸಂಗ ಏಕರಸ ಬ್ರಹ್ಮ ರೂಪಾನುಭವವಾಗುವುದು ಅವನೇ ಜೀವನ್ಮುಕ್ತ ಜೀವನ್ಮುಕ್ತ ವಿದ್ವಾಂಸನ ತಿಳಿವು ಹೇಗೆಂದರೆ, ಜಗತ್ತು ಹಿಂದೆಯೂ, ಮುಂದೆಯೂ, ಈಗಲೂ ಇಲ್ಲ ಅದು ಕೇವಲ ಮನೋರಥ ಮಾತ್ರವಾಗಿದೆ, ಇಂಥಾ ಮನೋವಿಲಾಸಮಾತ್ರವಾದ ಜಗತ್ತಿನ ಪ್ರವೃತ್ತಿಯಿಂದ ನನಗೆ ಯಾವ ಹಾನಿಯೂ ಇಲ್ಲ. ನಿವೃತ್ತಿಯಿಂದ ಯಾವ ಲಾಭವೂ ಇಲ್ಲ. ನಾನು ಸರ್ವತ್ರ ಪರಿಪೂರ್ಣವಾದ ಸಮುದ್ರವಾಗಿದ್ದೇನೆ. ತರಂಗಗಳ ಪ್ರವೃತ್ತಿಯಿಂದ ಸಮುದ್ರಕ್ಕೆ ಯಾವ ಹಾನಿಯೂ ಇಲ್ಲ, ನಿವೃತ್ತಿಯಿಂದ ಯಾವ ಲಾಭವೂ ಇಲ್ಲ.

ಸವೈಯಾಛಂದ – ದೇಖ್ಯೈ ಸುನ್ಯೈ, ನ ಸುನ್ಯೈ ನ ದೇಖ್ಯೈ,
ಸಬರಸ ಗಹ್ಯೈ ರು ದೇತ ನ ಸ್ವಾದ ।
ಸುಂಘೀಪರಸಿ ಪರಸ್ಯೈನ ನ ಸುಂಘ್ಯೈ,
ಬೈನ ನ ಬೋಲ್ಯೈ ಕರ್ರೈ ವಿವಾದ ॥
ಗ್ರಹಿ ನ ಗ್ರಹ್ಯೈ ಮಲ ತಜ್ಯೈ ನ ತ್ಯಾಗೆ,
ಚಲ್ಯೈ ನಹೀಂ ಅರು ಧಾವತ ವಾದ ।

ಭೋಗೈಯುವತಿ ಸದಾ ಸಂನ್ಯಾಸೀ,
ಸಿಷ ಲಖಿ ಯಹ ಅದ್ಭುತ ಸಂಬಾದ ॥ ॥೧೬೫॥

ಅರ್ಥ: ಈ ಪ್ರಕಾರವಾಗಿ ಅಪರೋಕ್ಷ ಬ್ರಹ್ಮಜ್ಞಾನಿಯು, ಎಲ್ಲವನ್ನು ನೋಡಿಯೂ ನೋಡದವನು. ಎಲ್ಲವನ್ನು ಕೇಳಿಯೂ ಏನನ್ನೂ ಕೇಳದವನು. ಎಲ್ಲಾ ಇಂದ್ರಿಯಗಳಿಂದ ಸರ್ವ ಕ್ರಿಯೆಗಳನ್ನು ಮಾಡಿಯೂ ಏನೂ ಮಾಡದವನು. ಭೋಗಿಸಿಯೂ ಏನನ್ನೂ ಭೋಗಿಸದವನು.

ಸಾರಾಂಶ: ಪರದೃಷ್ಟಿಯಲ್ಲಿ ಅವನು ಎಲ್ಲಾ ಮಾಡಿದಂತೆ ತೋರಿದರೂ ಅವನು ಸ್ವದೃಷ್ಟಿಯಲ್ಲಿ ಏನೂ ಮಾಡದವನು.

ಇದೇ ವಿಷಯದಲ್ಲಿ ಭಗವದ್ಗೀತೆಯ ಪಂಚಮಾಧ್ಯಾಯದ ೭, ೮, ೯ನೇ ಶ್ಲೋಕಗಳು ಪ್ರಮಾಣಭೂತವಾಗಿವೆ.

ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ।
ಸರ್ವಭೂತಾತ್ಮಾ ಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೆ ॥

ಭಾವಾರ್ಥ: ಕರ್ಮಯೋಗದಿಂದ – ಇಲ್ಲಿ ಬ್ರಹ್ಮನಿಷ್ಠತೆಯೆಂಬ ಜ್ಞಾನ ಯೋಗದಿಂದ – ಯುಕ್ತನೂ, ಅದರಿಂದಲೇ ಶುದ್ಧನೂ, ಅಂದರೆ ರಾಗ ದ್ವೇಷಾದಿ ರಹಿತ ಮನಸ್ಸುಳ್ಳವನೂ, ಅದರಿಂದಲೇ ಜಿತೇಂದ್ರಿಯನಾದವನೂ, ಅಂದರೆ ವಿಷಯಗಳಿಂದ ಇಂದ್ರಿಯಗಳನ್ನು ಹಿಮ್ಮೆಟ್ಟಿಸಿಕೊಂಡಿರುವವನೂ, ಅದರಿಂದಲೇ ವಿಜಿತಾತ್ಮ ಅಂದರೆ ಬಾಹ್ಯವಾಸನಾ ರೂಪ ಸ್ವಭಾವವನ್ನು ಗೆದ್ದುಕೊಂಡಿರುವವನೂ, ಆಬ್ರಹ್ಮಸ್ತಂಭಪರ್ಯಂತರವಾದ ಸರ್ವ ಭೂತಗಳನ್ನು ತನ್ನ ಆತ್ಮಸ್ವರೂಪವಾಗಿ ಭಾವಿಸಿಕೊಂಡವನೂ, ಈ ರೀತಿ ಸರ್ವಾತ್ಮ ಭಾವವನ್ನು ಪಡೆದ ಬ್ರಹ್ಮವಿತ್ತಮನು ಕರ್ಮದಿಂದ ಲಿಪ್ತನಾಗುವುದಿಲ್ಲ, ಅಂದರೆ ಕರ್ಮದಲ್ಲಿ ಅಕರ್ಮತಾ ದೃಷ್ಟಿಯಿಂದ ಕರ್ಮ ಸಂಬಂಧವನ್ನು ಹೊಂದುವುದಿಲ್ಲ. ಆ ಕರ್ಮವು ಶರೀರ ನಿರ್ವಾಹಕ್ಕವಾಗಿರಲಿ, ಲೌಕಿಕ ಕರ್ಮವಾಗಿರಲಿ, ವೈದಿಕವಾಗಿರಲಿ.

ಶ್ಲೋಕ ನೈವಕಿಂಚಿತ್ಕರೋಮೀತಿ ಯುಕ್ತೋ ಮನ್ಯೇತ ತತ್ವವಿತ್ ।
ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ ಅಶ್ನನ್ ಗಚ್ಛನ್
ಸ್ವಪನ್ ಶ್ವಸನ್ ॥
ಪ್ರಲಪನ್ ವಿಸೃಜನ್ ಗೃಹ್ಣನ್ ಉನ್ಮಿಷನ್ ನಿಮಿಷನ್ನಪಿ ।
ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿಧಾರಯನ್॥

ಭಾವಾರ್ಥ ಪೂರ್ವ ಶ್ಲೋಕದಲ್ಲಿ ಹೇಳಿದ ಯೋಗಯುಕ್ತಾದಿ ಪಂಚ ಲಕ್ಷಣ ಸಂಪನ್ನನಾದ ಜ್ಞಾನಿಯು ನೋಡುತ್ತಾ, ಕೇಳುತ್ತಾ, ಮುಟ್ಟುತ್ತಾ, ಆಘ್ರಾಣಿಸುತ್ತಾ, ಭುಜಿಸುತ್ತಾ, ನಡೆಯುತ್ತಾ, ನಿದ್ರಿಸುತ್ತಾ, ಶ್ವಾಸೋಚ್ಛ್ವಾಸವನ್ನು ಮಾಡುತ್ತಾ, ಮಾತಾಡುತ್ತಾ, ಮಲಮೂತ್ರಗಳನ್ನು ತ್ಯಜಿಸುತ್ತಾ, ಗ್ರಹಿಸುತ್ತಾ ಮತ್ತು ನಿಮಿಷೋನ್ಮೇಷಗಳನ್ನು ಮಾಡುತ್ತಾ, ಇಂದ್ರಿಯಾರ್ಥದಲ್ಲಿ ಇಂದ್ರಿಯಗಳು ವರ್ತಿಸುತ್ತವೆಂದು ವೃತ್ತಿಯನ್ನು ಧರಿಸಿ, ನಾನು ದ್ರಷ್ಟನೂ ಶ್ರೋತ್ರನೂ ಅಲ್ಲ, ಆಯಾ ಕ್ರಿಯೆಗಳಿಗೆ ಸಾಕ್ಷಿಯಾಗಿರುವುದರಿಂದ ನಿಷ್ಕ್ರಿಯರೂಪನಾಗಿರುತ್ತೇನೆಂದು ಭಾವಿಸುತ್ತಾನೆ. ಮೇಲಿನ ವ್ಯಾಪಾರದಲ್ಲಿ ಜ್ಞಾನಿಗೆ "ನಾನು, ನನ್ನದು" ಎಂಬ ಭಾವನೆ ಇರುವುದಿಲ್ಲವೆಂಬುದೇ ಸಾರಾಂಶ

ಇಲ್ಲೊಂದು ರಹಸ್ಯ ಯಾವುದರಿಂದ ಜ್ಞಾನಿಗೆ ನಾನು ಅಕ್ರಿಯನೆಂಬ ನಿಶ್ಚಯವಾಗಿರುವುದೋ, ಅದರಿಂದ ಜ್ಞಾನಿಯು ವಾಸ್ತವವಾಗಿ ಯಾವ ಕ್ರಿಯೆಯನ್ನೂ ಮಾಡುವುದಿಲ್ಲ ಪ್ರಾರಬ್ಧ ಬಲದಿಂದ ಇಂದ್ರಿಯಾದಿಗಳಿಂದ ದರ್ಶನಾದಿ ವ್ಯಾಪಾರವಾಗುತ್ತದೆ ಆದರೂ ಆ ವ್ಯಾಪಾರದ ಫಲವನ್ನು ಭೋಗಿಸುವುದರಲ್ಲಿ ಇರುವ ಆಸಕ್ತಿ ರೂಪ ರಾಗವು ಇಂದ್ರಿಯಗಳಿಂದ ಉಂಟಾಗಲಾರದು ಇಂದ್ರಿಯಗಳು ದರ್ಶನಾದಿ ಕ್ರಿಯಾ ಮಾತ್ರದಿಂದಲೇ ಕೃತಾರ್ಥವಾಗುತ್ತವೆ ಆ ರಾಗವು ಆತ್ಮನಿಂದಲೂ ಉಂಟಾಗುವುದಿಲ್ಲ. ಆತ್ಮನು ಸರ್ವಸಾಧಾರಣ ನಿರ್ವಿಕಾರ ಪ್ರಕಾಶಕತೆಯಿಂದಲೇ ಕೃತಾರ್ಥನಾಗುತ್ತಾನೆ ಉಳಿದದ್ದು ವಿಷಯಗಳ ಗುಣ ದೋಷಗಳ ವಿಚಾರ ಗುಣ ದೋಷ ವಿಚಾರ ಸ್ವಭಾವವುಳ್ಳ ಮನಸ್ಸು, ಅದಕ್ಕೆ ಅನುಕೂಲ ಜ್ಞಾನದಿಂದ ರಾಗವಾಗುತ್ತದೆಂದು ಹೇಳಬೇಕೆಂದರೆ, ಜ್ಞಾನಿಯ ಅಂತಃಕರಣ ಅಂದರೆ ಮನಸ್ಸು ಶಾಂತವಾದುದರಿಂದ ಅದರಲ್ಲಿ ರಾಗಜನಕ ಯೋಗ್ಯತೆ ಇರುವುದಿಲ್ಲ.

ಇದೇ ವಿಷಯವನ್ನು "ರಾಗಮಭೋದಲಿಂಗಮ್" ಅಂದರೆ ರಾಗವು ಅಜ್ಞಾನದ ಚಿಹ್ನವೆಂದು ಚಿತ್ಸುಖಾದಿ ಗ್ರಂಥಗಳು ಸ್ಪಷ್ಟವಾಗಿ ಹೇಳುತ್ತವೆ.

ಯದ್ಯಪಿ ಸರ್ವಥಾ ರಾಗದ ಅಭಾವದಿಂದ ಭೋಜನಾದಿ ಶರೀರ ಯಾತ್ರೆಗೆ ಕಾರಣವಾದ ವ್ಯಾಪಾರದಲ್ಲಿ ಪ್ರವೃತ್ತಿಯ ಅಭಾವದಿಂದ ಜ್ಞಾನಿಗೆ ಪ್ರಾರಬ್ಧ ಭೋಗವೇ ಸಂಭವಿಸಲಾರದು. ಆದರೆ ಈಶ್ವರ ಸಂಕಲ್ಪ ವಿಷಯವಾದ ಪ್ರಾರಬ್ಧ ಭೋಗದ ಅಭಾವವು ಜ್ಞಾನಿಗೂ ಸಂಭವಿಸುವುದಿಲ್ಲ. ತಥಾಪಿ ವಿಚಾರದಿಂದ ದುರ್ನಿವಾರವಾದ ರೋಗಾದಿಗಳಂತೆ ಪ್ರಾರಬ್ಧದಿಂದ ಉಂಟಾದ ರಾಗವು ಜ್ಞಾನಿಗೂ ಸಂಭವಿಸುತ್ತದೆ. ಹೀಗಿದ್ದರೂ ಅಹಂಕಾರದ, ಚಿದಾತ್ಮನ ಭ್ರಮಜ ತಾದಾತ್ಮ್ಯದ ಅಭಾವದಿಂದ ಆ ರಾಗವು ಅದೃಢ ಅಂದರೆ ಆಭಾಸ ಮಾತ್ರವಾಗಿದೆ. ಆ ಅದೃಢರಾಗವು ಸುಟ್ಟ ಬೀಜದಂತೆ ನಿಷ್ಫಲವಾದುದರಿಂದ ದೇಹ ನಿರ್ವಾಹಕ್ಕೆ ಮಾತ್ರ ಹೇತುವಾಗಿದೆ. ವ್ಯಸನೋತ್ಪಾದಕವಾದ ನಿಷಿದ್ಧ ಭೋಗಕ್ಕೆ ಹೇತುವಲ್ಲ.

ಇಲ್ಲವೇ ಜ್ಞಾನಿಗೆ ವಿಷಯಗಳಲ್ಲಿ ಸತ್ಯವೆಂಬ ಭ್ರಾಂತಿಯ ಅಭಾವದಿಂದಲೂ, ಮಿಥ್ಯಾತ್ವ ಬುದ್ಧಿಯಿಂದುಂಟಾದ ದೃಢ ವೈರಾಗ್ಯದ ಸದ್ಭಾವದಿಂದಲೂ ದೃಢ ರಾಗವುಂಟಾಗುವುದಿಲ್ಲ. ಈ ಅರ್ಥವು ಮುಂದೆ ಷಷ್ಟ ತರಂಗದಲ್ಲಿ ಹೇಳಲ್ಪಡುತ್ತದೆ.

ಇಲ್ಲವೇ ಹಗ್ಗದ ಮೇಲೆ ಆಡುವ ದೊಂಬನ ಚಿತ್ತವು ಅಗ್ರ ದೇಶದಲ್ಲಿ ಸಂಲಗ್ನವಾಗಿರುವಂತೆಯೂ, ಇಲ್ಲವೇ ಪರಸ್ಪರ ಮಾತಾಡುತ್ತಾ ನೀರು ತರುವ ಸ್ತ್ರೀಯರ ಚಿತ್ತವು ತಲೆಯ ಮೇಲೆ ಇರುವ ನೀರಿನ ಪಾತ್ರೆಯಲ್ಲಿ ಸಂಲಗ್ನವಾಗಿರುವಂತೆಯೂ ಜ್ಞಾನಿಯ ಅಂತಃಕರಣವು ಸಾಮಾನ್ಯವಾಗಿ ವಿಷಯದಲ್ಲಿ ಪ್ರವೃತ್ತವಾಗಿದ್ದರೂ ವಿಶೇಷವಾಗಿ ಸ್ವರೂಪದಲ್ಲಿ ಸಂಲಗ್ನವಾಗಿರುವುದರಿಂದ, ಅವನ ಸಾಭಾಸ ಇಂದ್ರಿಯಗಳು ಪ್ರಾರಬ್ಧ ಫಲಭೂತವಾದ ದರ್ಶನಾದಿ ಕ್ರಿಯೆಯಿಂದಲೇ ಕೃತಾರ್ಥವಾಗುವುದರಿಂದ ಜ್ಞಾನಿಗೆ ವಿಷಯ ಭೋಗದಲ್ಲಿ ದೃಢ ರಾಗವು ಸಂಭವಿಸುವುದಿಲ್ಲ

ಪ್ರಾರಬ್ಧವುಳ್ಳ ಜ್ಞಾನಿಯ ಮನೋರೂಪ ಗಜವು ವಿಷಯವೆಂಬ ಅರಣ್ಯದಲ್ಲಿ ಕಿಂಚಿತ್ ವಿಕ್ಷೇಪವನ್ನು ಹೊಂದಿದರೂ ವಿವೇಕ ರೂಪ ಅಂದರೆ ವಿಷಯಗಳಲ್ಲಿ ದೋಷದೃಷ್ಟಿ ಅಥವಾ ಮಿಥ್ಯಾತ್ವದೃಷ್ಟಿ ರೂಪವಾದ ಸಿಂಹವು

ಜಾಗರೂಕತೆಯಿಂದಿರುವುದರಿಂದ ಆ ಮನೋರೂಪ ಗಜವು ಶೀಘ್ರವಾಗಿ ವಿಕ್ಷೇಪವನ್ನು ಬಿಟ್ಟು ಶಾಂತವಾಗುವುದು

ಜ್ಞಾನಿಯ ಚಿತ್ತದಲ್ಲಿ ದೃಢರಾಗವು ಇಲ್ಲದಿದ್ದರೂ, ಭೋಗ ಹೇತುವಾದ ಪ್ರಾರಬ್ಧವಿರುವುದರಿಂದ ಆ ಜ್ಞಾನಿಯು ಕಾಕಾಕ್ಷಿ ನ್ಯಾಯದಿಂದ, ಇಲ್ಲವೇ ಗಂಗೆಯಲ್ಲಿ ಮುಳುಗಿದ ಅರ್ಧಕಾಯದಂತೆ ಮುಖ್ಯವಾಗಿ ಸ್ವರೂಪ ಸುಖದಲ್ಲಿ ರಮಿಸುತ್ತಿದ್ದು, ಅಮುಖ್ಯತೆಯಿಂದ ಕ್ಲೇಶವನ್ನು ಹೊಂದಿ ತೀವ್ರ ಪ್ರಾರಬ್ಧ ಫಲವನ್ನು ಉಪಭೋಗಿಸಿ, ಶಿಥಿಲ ಪ್ರಾರಬ್ಧದ ಫಲವನ್ನೂ, ನಿಷಿದ್ಧ ವಿಷಯ ವನ್ನೂ ಪ್ರಯತ್ನಪೂರ್ವಕವಾಗಿ ಬಿಟ್ಟುಬಿಡುತ್ತಾನೆ

"ಜ್ಞಾನಿಯಾದ ಪುರುಷನು ಯುವತಿಯನ್ನು ಭೋಗಿಸಿದರೂ ನಿತ್ಯ ಸನ್ಯಾಸಿ" ಎಂಬುದು ಕೆಲವು ಗ್ರಂಥಗಳಲ್ಲಿ ಕಂಡುಬರುತ್ತದೆ ಇದರ ನಿಜಾಂಶವೇನು ? ತ್ಯಾಗಿಯಾದ ಜ್ಞಾನಿಗಾದರೋ ಸ್ತ್ರೀ ಸಂಗತಿ ಘಟಿಸ ಲಾರದು. ಸ್ತ್ರೀ ಸಂಗತಿಯೇ ಘಟಿಸದಿದ್ದರೆ ಉಪಭೋಗ ಪ್ರಸಂಗವೆಲ್ಲಿ ? ಹೀಗಿದ್ದರೂ ತನ್ನನ್ನು ತ್ಯಾಗಿ ಎಂದು ಹೇಳಿಕೊಂಡು ಸ್ತ್ರೀ ಭೋಗದಲ್ಲಿ ಪ್ರವೃತ್ತನಾದರೆ ಅವನು ವಾತಾಂಶಿ ಅಂದರೆ ವಮನಭಕ್ಷಕನಲ್ಲದೆ ತ್ಯಾಗಿ ಯಲ್ಲ. ಅವನು ತ್ಯಾಗಿಯಂತೆ ನಟಿಸುವ ನಟನೆಂದು ತಿಳಿಯಬೇಕು ತ್ಯಾಗಿ ಜ್ಞಾನಿಯ ವಿಷಯ ಮುಗಿದ ಮೇಲೆ ಗೃಹಸ್ಥ ಜ್ಞಾನಿಯ ವಿಷಯ ಇವನಿಗೆ ಸ್ತ್ರೀ ಭೋಗ ಸಂಭವಿಸಿದರೂ ಘೃತ ಭಕ್ಷಣ ಮಾಡುವ ಅಭ್ಯಾಸ ವುಳ್ಳವನಿಗೆ ತೈಲ ಭಕ್ಷಣದಂತೆ ಶಾಸ್ತ್ರ ಮರ್ಯಾದೆಯನ್ನನುಸರಿಸಿ ಋತು ಕಾಲದಲ್ಲಿ ಅವನು ಸ್ವಸ್ತ್ರೀ ಸಂಗವನ್ನು ಮಾಡುತ್ತಾನೆ. ಅದೂ ಸಹ ವಿಷಯಾಸಕ್ತಿಯಿಂದಲ್ಲ. ಯಾವನಾದರೊಬ್ಬ ಗೃಹಸ್ಥನು ವಿಷಯಾಸಕ್ತ ನಾಗಿದ್ದು ವೇದಾಂತ ವಾರ್ತೆಯಲ್ಲಿ ನಿಪುಣನಾಗಿದ್ದರೂ ಅವನಿಗೆ ಜ್ಞಾನಿಯೆಂಬ ಗೌರವ ಪದವಿಯನ್ನು ಕೊಡಕೂಡದು ಯಾಕೆಂದರೆ, ರಾಗ ರೂಪವಾದ ಅಜ್ಞಾನಿ ಚಿನ್ಹೆಯು ಅವನಲ್ಲಿರುತ್ತದೆ ಇಲ್ಲಿ ಸ್ತ್ರೀ ವಿಷಯವಾಗಿ ಹೇಳಿದ ವಿಚಾರವು ಸರ್ವ ವಿಷಯ ವಿಚಾರ, ರಾಗ ವಿಚಾರಕ್ಕೂ, ದ್ವೇಷ ವಿಚಾರಕ್ಕೂ ಅನ್ವಯಿಸುತ್ತದೆ.

ಸನ್ಮೈಯಾಭಂದ – ನಿಜ ವಿಷಯನ ಮೈ ಇಂದ್ರಿಯವರ್ತೈ,
ತಿನತೈ ಮೇರೋ ನಾಹಿ ಸಂಗ ।

ಮೈ ಇಂದ್ರಿಯ ನಹಿ ಮಮ ಇಂದ್ರಿಯ ನಹಿ,
ಮೈ ಸಾಖಿ ಕೂಟಸ್ಥ ಅಸಂಗ ||
ತ್ಯಾಗಹುಂ ವಿಷಯ ಕಿ ಭೋಗಹು ಇಂದ್ರಿಯ,
ನೋಕು ಲಗೈ ನ ರಂಚಕ ರಂಗ |
ಯಹ ನಿಶ್ಚಯ ಜ್ಞಾನಿಕೋಜಾತೈ,
ಕರ್ತಾ ದೀಖೈ ಕರೈ ನ ಅಂಗ || ೧೬೬||

ಅರ್ಥ. ಅಭಿಪ್ರಾಯವೇನೆಂದರೆ, ಇಂದ್ರಿಯಗಳು ತಮ್ಮ ತಮ್ಮ ವಿಷಯಗಳಲ್ಲಿ ವರ್ತಿಸುತ್ತವೆ. ಆ ಇಂದ್ರಿಯಗಳು ನಾನಲ್ಲ, ಮತ್ತು ಇಂದ್ರಿಯಗಳು ನನ್ನವೂ ಅಲ್ಲ ಇಂದ್ರಿಯಗಳಿಗೂ ನನಗೂ ಯಾವ ವಿಧವಾದ ಸಂಬಂಧವೂ ಇಲ್ಲ. ಆದುದರಿಂದ ಆ ಇಂದ್ರಿಯಗಳು ವಿಷಯಗಳನ್ನು ತ್ಯಜಿಸಲಿ, ಇಲ್ಲವೇ ಉಪಭೋಗಿಸಲಿ, ಅದರ ಸಂಬಂಧವು ಅಸಂಗನೂ, ಅಲಿಪ್ತನೂ, ಕೂಟಸ್ಥನೂ, ಸಾಕ್ಷಿಯೂ ಆಗಿರುವ ನನಗೆ ಲೇಶವೂ ಇಲ್ಲ. ಇದೇ ಜೀವನ್ಮುಕ್ತನ ನಿಶ್ಚಯ

ಈ ರೀತಿ ಗುಪ್ತವಾದ ತತ್ತ್ವೋಪದೇಶವನ್ನು ಮಾಡಿದರೂ. ಶಿಷ್ಯನ ಮುಖವು ಪ್ರಸನ್ನವಾಗದೆ ಇರುವುದನ್ನು ನೋಡಿ, ಶ್ರೀ ಗುರು ತನ್ನ ಮನಸ್ಸಿನಲ್ಲಿ – ಶಿಷ್ಯನು ಕೃತಾರ್ಥನಾಗಲಿಲ್ಲ ಒಂದು ವೇಳೆ ಕೃತಾರ್ಥನಾಗಿದ್ದರೆ ಅವನ ಮುಖದಲ್ಲಿ ಪ್ರಸನ್ನತೆಯು ತೋರಬೇಕಾಗಿತ್ತು ಅಂದುಕೊಂಡರು ಸಾರಾಂಶವೇನೆಂದರೆ, ಇಚ್ಛಿಸಿದ ಪದಾರ್ಥದ ಪ್ರಾಪ್ತಿಯಿಂದ ಚಿತ್ತಚಾಂಚಲ್ಯಕ್ಕೆ ಹೇತುವಾದ ಇಚ್ಛಾರೂಪ ವೃತ್ತಿಯ ನಾಶರೂಪ ನಿಮಿತ್ತದಿಂದ ಸ್ಥಿರವಾದ ದರ್ಪಣದಲ್ಲಿ ಇದ್ದಂತೆ ಅಂತರ್ಮುಖ ವೃತ್ತಿಯಲ್ಲಿ ಉದಯವಾದ ಸಾತ್ವಿಕ ವೃತ್ತಿಯಲ್ಲಿ ಸ್ವರೂಪಾನಂದದ ಪ್ರತಿಬಿಂಬವಾಗುತ್ತದೆ. ಆ ಆನಂದಾನುಭವದಿಂದ ಮುಖವು ಪ್ರಸನ್ನವಾಗುತ್ತದೆ. ಶಿಷ್ಯನಿಗೆ ಜ್ಞಾನದಿಂದ ಇಚ್ಛಿಸಿದ ಅವಿದ್ಯಾ ನಿವೃತ್ತಿ, ಪರಮಾನಂದ ಪ್ರಾಪ್ತಿ ರೂಪವಾದ ಮೋಕ್ಷವು ಸಿದ್ಧವಾಗದೆ ಇದ್ದದ್ದರಿಂದ ಇಚ್ಛಾ ನಿವೃತ್ತಿಯಾಗಲಿಲ್ಲ. ಪ್ರತಿಬಿಂಬಾನಭವದಿಂದ ಮುಖವು ಪ್ರಸನ್ನವಾಗಲಿಲ್ಲ ಆ ಪ್ರಸನ್ನತಾ ರೂಪ ಲಿಂಗದಿಂದ ಇಷ್ಟವಸ್ತುವಿನ ಅಪ್ರಾಪ್ತಿ ರೂಪವಾದ ಅಕೃತಾರ್ಥತೆ ಅನುಮಾನವಾಗುತ್ತದೆ. ಈ ಕಾರಣದಿಂದ ಗುರುಗಳು ಸ್ಥೂಲ ರೀತಿಯಾಗಿ ಉಪದೇಶಿಸುವುದಕ್ಕಾಗಿ ಲಯಚಿಂತನವನ್ನು ಆರಂಭಿಸಿದರು

ಪ್ರಶ್ನೆ. ಲಯಚಿಂತನೆ ಅಂದರೇನು ?

ಉತ್ತರ ಕಾರ್ಯವನ್ನು ಕಾರಣರೂಪವೆಂದು ತಿಳಿದು ಆ ಕಾರಣವೇ ನಾನೆಂದು ಮಾಡುವ ಚಿಂತನೆಗೆ ಲಯಚಿಂತನೆ ಎನ್ನುತ್ತಾರೆ.

## ಲಯಚಿಂತನೆ

ಸವೈಯಾಛಂದ – ಮಾಟೀ ಕೋ ಕಾರಜ ಘಟ ಜೈಸೆ,
ಮಾಟೀ ತಾಕೆ ಬಾಹರ ಮಾಹೀಂ |
ಜಲತೈಂ ಫೈನ ತರಂಗ ಬುದಬುದಾ,
ಉಪಜತ ಜಲತೈಂ ಜುದೈ ಸು ನಾಹೀಂ ||
ಐಸೆ ಜೊ ಜಾಕೊ ಹೈ ಕಾರಜ,
ಕಾರನ ರೂಪ ಪಿಛಾನಹು ತಾಹೀಂ |
ಕಾರನ ಈಸ ಸಕಲ ಕೊ "ಸೋಮ್ಯೈ" .
ಲಯಚಿಂತನ ಜಾನಹು ವಿಧ ಯಾಹಿ || ||೧೬೭||

ಅರ್ಥ: ಮೃತ್ತಿಕೆಯ ಕಾರ್ಯದ ಬಾಹ್ಯಾಂತರದಲ್ಲಿ ಮೃತ್ತಿಕೆಯೇ ಇರುವುದರಿಂದ ಮೃತ್ತಿಕೆಯ ಸರ್ವ ಕಾರ್ಯಗಳೂ ಮೃತ್ತಿಕೆಯ ಸ್ವರೂಪವೇ ಆದಂತೆ ಕಾರ್ಯವು ಕಾರಣದ ಸ್ವರೂಪಕ್ಕಿಂತ ಭಿನ್ನವಲ್ಲ. ತರಂಗ ಬುದು, ದಾದಿಗಳು ಜಲದ ಕಾರ್ಯವಾದುದರಿಂದ ಜಲದ ಸ್ವರೂಪವೇ ಎಂಬುದ್ಧು ಸ್ಪಷ್ಟವೇ ಆಗಿದೆ. ಇದರಂತೆ ಸಕಲ ಪ್ರಪಂಚಕ್ಕೆ ಮೂಲ ಕಾರಣ ಈಶ್ವರ ನಾದುದರಿಂದ ಈಶ್ವರ ಕಾರ್ಯವಾದ ಸಕಲ ಪ್ರಪಂಚವು ಈಶ್ವರನಿಗಿಂತ ಭಿನ್ನವಲ್ಲ ಈಶ್ವರ ಸ್ವರೂಪವೇ ಆಗಿದೆ ಆ ಈಶ್ವರನೇ ನಾನು. ನಿನಗೆ ಅದೃಢವಾದ ಅಪರೋಕ್ಷ ಜ್ಞಾನವಿಲ್ಲದ್ದರಿಂದ ನೀನು ಲಯಚಿಂತನವನ್ನು ಅವಲಂಬಿಸು.

## ಸಕಲ ಸೂಕ್ಷ್ಮ ಸೃಷ್ಟಿಯು ಪಂಚೀಕೃತ ಅತತ್ತ್ವ

ಸಕಲ ಸ್ಥೂಲ ಬ್ರಹ್ಮಾಂಡವು ಪಂಚೀಕೃತ ಭೂತಗಳ ಕಾರ್ಯವೇ. ಪೃಥ್ವಿಯ ಕಾರ್ಯವು ಪೃಥ್ವಿಯ ಸ್ವರೂಪ, ಜಲದ ಕಾರ್ಯವು ಜಲಸ್ವರೂಪ,

ಈ ರೀತಿಯಾಗಿ ಯಾವುದು ಯಾವ ಭೂತದ ಕಾರ್ಯವೋ ಅದು ಅದರ ಸ್ವರೂಪವೇ. ಈ ವಿಧವಾಗಿ ಸಕಲ ಸ್ಥೂಲ ಬ್ರಹ್ಮಾಂಡವು ಪಂಚೀಕೃತ ಭೂತಗಳ ಸ್ವರೂಪವೇ ಆಗಿದೆ. ಆದೇ ರೀತಿ ಪಂಚೀಕೃತ ಭೂತಗಳೂ ಅಪಂಚೀಕೃತ ಭೂತಗಳ ಕಾರ್ಯವಾದುದರಿಂದ ಅಪಂಚೀಕೃತ ಭೂತ ಸ್ವರೂಪಗಳಾಗಿಯೇ ಇರುತ್ತವೆ. ಅವುಗಳಿಗಿಂತ ಬೇರೆಯಲ್ಲ.

ಅಂತಃಕರಣವೇ ಮೊದಲಾದ ಸೂಕ್ಷ್ಮ ಸೃಷ್ಟಿಯೂ ಸಹ ಅಪಂಚೀಕೃತ ಭೂತಕಾರ್ಯವಾದುದರಿಂದ ಅಪಂಚೀಕೃತ ಭೂತಸ್ವರೂಪವಾಗಿಯೇ ಇದೆ ಅದರಲ್ಲಿ ಅಂತಃಕರಣವು ಸಕಲ ಭೂತಗಳ ಸತ್ವಗುಣ ಕಾರ್ಯವಾದುದರಿಂದ ಸತ್ವಗುಣ ಸ್ವರೂಪವೇ ಆಗಿದೆ. ಪ್ರಾಣಗಳು ರಜೋಗುಣ ಕಾರ್ಯವಾದುದರಿಂದ ರಜೋಗುಣ ಸ್ವರೂಪವೇ ಆಗಿವೆ. ಅದರಂತೆ ಜ್ಞಾನೇಂದ್ರಿಯಗಳು ಬೇರೆ ಬೇರೆ ಭೂತಗಳ ಸತ್ವಗುಣ ಕಾರ್ಯವಾದುದರಿಂದ ಆಯಾ ಭೂತಗಳ ಸತ್ವಗುಣ ಸ್ವರೂಪವೇ ಆಗಿವೆ. ಅದರಂತೆ ಕರ್ಮೇಂದ್ರಿಯಗಳು ರಜೋಗುಣ ಕಾರ್ಯವಾದುದರಿಂದ ಅವೂ ಸಹ ಆಯಾ ಭೂತಗಳ ರಜೋಗುಣ ಸ್ವರೂಪವೇ ಆಗಿವೆ.

ಈ ರೀತಿ ಸಕಲ ಸೂಕ್ಷ್ಮ ಸೃಷ್ಟಿಯು ಅಪಂಚೀಕೃತ ಭೂತ ಸ್ವರೂಪವೆಂದು ತಿಳಿಯಬೇಕು.

## ಬ್ರಹ್ಮದಲ್ಲಿ ಸಕಲ ಪದಾರ್ಥಗಳ ಲಯಚಿಂತನೆ

ಮೇಲಿನ ಚಿಂತನೆಯಾದ ನಂತರ, ಅಪಂಚೀಕೃತ ಭೂತಗಳ ಲಯ ಚಿಂತನೆಯನ್ನು ಮಾಡಬೇಕು. ಹೇಗೆಂದರೆ, ಪೃಥ್ವಿಯು ಜಲದ ಕಾರ್ಯವಾದುದರಿಂದ ಜಲ ಸ್ವರೂಪವೇ ಆಗಿದೆ. ಅದರಂತೆ ಜಲ, ತೇಜಸ್ಸು, ವಾಯು – ಇವು ತಮ್ಮ ತಮ್ಮ ಕಾರಣ ಪರಂಪರೆಯಿಂದ ಆಕಾಶ ಸ್ವರೂಪವಾಗಿವೆ. ಆ ಆಕಾಶವು ತಮೋಗುಣ ಪ್ರಧಾನ ಪ್ರಕೃತಿಯ ಕಾರ್ಯವಾದುದರಿಂದ ತಮಃಪ್ರಧಾನ ಪ್ರಕೃತಿಯ ಸ್ವರೂಪವೇ ಆಗಿದೆ. ಆ ಪ್ರಕೃತಿಯು ಮಾಯೆಯ ಅವಸ್ಥಾವಿಶೇಷವಾಗಿರುವುದರಿಂದ ಮಾಯಾ ಸ್ವರೂಪವೇ ಆಗಿದೆ. ಏಕೆಂದರೆ, ಒಂದೇ ವಸ್ತುವಿಗೆ ಪ್ರಧಾನ, ಪ್ರಕೃತಿ, ಮಾಯೆ, ಅವಿದ್ಯಾ, ಅಜ್ಞಾನ ಮತ್ತು ಶಕ್ತಿಯೆಂಬ ಹೆಸರುಗಳು.

ಪ್ರಶ್ನೆ: ಪ್ರಧಾನವೆಂದು ಹೆಸರು ಬರಲು ಕಾರಣವೇನು ?

ಉತ್ತರ. ಸರ್ವ ಕಾರ್ಯವನ್ನು ತನ್ನಲ್ಲಿ ಲಯಮಾಡಿಕೊಂಡು, ಪ್ರಲಯದಲ್ಲಿ ಇರುವ ಉದಾಸೀನ ಸ್ವರೂಪವನ್ನು ಪ್ರಧಾನವೆನ್ನುತ್ತಾರೆ.

ಪ್ರಶ್ನೆ ಪ್ರಕೃತಿ ಎಂಬ ಹೆಸರಿಗೆ ಕಾರಣವೇನು?

ಉತ್ತರ ಸೃಷ್ಟಿಗೆ ಉಪಾದಾನ ಯೋಗ್ಯವಾದ ತಮೋಗುಣ ಪ್ರಧಾನ ಸ್ವರೂಪಕ್ಕೆ ಪ್ರಕೃತಿಯೆನ್ನುತ್ತಾರೆ.

ಅಥವಾ "ಪ್ರ–ಕೃತಿ" ಪ್ರಕರ್ಷದಿಂದ ಯಾವ ಸರ್ವ ಜಗತ್ತು ಸೃಷ್ಟಿಸಲ್ಪಟ್ಟಿರುವುದೋ, ಯಾವುದು ಉಪಾದಾನ ಕಾರಣವಾದ ಶಕ್ತಿಯೋ ಅದು ಪ್ರಕೃತಿ.

ಅಥವಾ "ಪ್ರ" ಅಂದರೆ ಸತ್ವಗುಣ, "ಕೃ" ಅಂದರೆ ರಜೋಗುಣ, "ತಿ" ಅಂದರೆ ತಮೋಗುಣ. ಈ ರೀತಿ ಯಾವುದು ಸತ್ವಗುಣ, ರಜೋಗುಣದಿಂದ ಕೂಡಿದ ತಮೋಗುಣ ಪ್ರಧಾನ ಶಕ್ತಿಯೋ ಅದು ಪ್ರಕೃತಿಯೆನಿಸುತ್ತದೆ.

ಪ್ರಶ್ನೆ. ಮಾಯೆಯೆಂದರೇನು ?

ಉತ್ತರ: ದೇಶಕಾಲ ಸಾಮಗ್ರಿಯಿಲ್ಲದೆ ದುರ್ಘಟ ಪದಾರ್ಥವನ್ನು ಇಂದ್ರಜಾಲವು ಉತ್ಪನ್ನ ಮಾಡಬಲ್ಲುದು. ಲೋಕದಲ್ಲಿ ಈ ಇಂದ್ರಜಾಲಕ್ಕೆ ಮಾಯೆಯೆನ್ನುತ್ತಾರೆ. ಈ ರೀತಿ ಅಸಂಗ ಅದ್ವಿತೀಯ ಬ್ರಹ್ಮದಲ್ಲಿ ದುರ್ಘಟವಾದ ಇಚ್ಛಾದಿಗಳನ್ನು ಹುಟ್ಟಿಸುವುದರಿಂದ ಅದಕ್ಕೆ ಮಾಯೆಯೆನ್ನುತ್ತಾರೆ.

ಪ್ರಶ್ನೆ ಅಜ್ಞಾನವೆಂದರೇನು ?

ಉತ್ತರ ಸ್ವರೂಪವನ್ನು ಆಚ್ಛಾದಿಸುವುದರಿಂದ ಅಜ್ಞಾನವೆನ್ನುತ್ತಾರೆ.

ಪ್ರಶ್ನೆ: ಅವಿದ್ಯೆಯೆಂದರೇನು ?

ಉತ್ತರ ಬ್ರಹ್ಮವಿದ್ಯೆಯಿಂದ ನಾಶವಾಗುವುದರಿಂದ ಅವಿದ್ಯೆಯೆನ್ನುತ್ತಾರೆ

ಪ್ರಶ್ನೆ: ಶಕ್ತಿಯೆಂದರೇನು?

ಉತ್ತರ ಯಾವಾಗಲೂ ಸ್ವತಂತ್ರವಾಗಿರದೆ, ಚೈತನ್ಯಾಶ್ರಯದಲ್ಲಿ ಇರುವುದರಿಂದ ಶಕ್ತಿಯೆನ್ನುತ್ತಾರೆ.

ಶಕ್ತಿಯ ವಿಶೇಷ ವಿಚಾರ. ಬ್ರಹ್ಮದ ಶಕ್ತಿಯು ಬ್ರಹ್ಮಕ್ಕಿಂತ ಭಿನ್ನವೆಂದರೆ, ಅದ್ವೈತ ಶ್ರುತಿಗೆ ವಿರೋಧವಾಗುತ್ತದೆ ಅಭಿನ್ನವೆಂದರೆ ಅದು ಬ್ರಹ್ಮರವಪವಾಗುವುದರಿಂದ ಬ್ರಹ್ಮಕ್ಕಿಂತ ಭಿನ್ನವಾದುದು ಮತ್ತೊಂದು ಶಕ್ತಿಯೆಂದರೆ ಅದು ವ್ಯರ್ಥವಾಗುತ್ತದೆ. ಇನ್ನು ಶಕ್ತಿಗೂ ಬ್ರಹ್ಮಕ್ಕೂ ಭೇದಾಭೇದಗಳೆರಡನ್ನೂ ಹೇಳಬೇಕಾಗುತ್ತದ ಭೇದಾಭೇದಗಳು ಪರಸ್ಪರ ವಿರುದ್ಧವಾಗಿವೆ. ಆದುದರಿಂದ ತಮಃಪ್ರಕಾಶದಂತೆ ಅವು ಏಕಾಶ್ರಯದಲ್ಲಿ ಇರಲಾರವು. ಆದುದರಿಂದ ಶಕ್ತಿಗೆ ಬ್ರಹ್ಮದಿಂದ ರಜ್ಜು ಸರ್ಪ ಸಂಬಂಧದಂತೆ ಕಲ್ಪಿತ ಭೇದವಾಗಿ ವಾಸ್ತವ ಅಭೇದ ರೂಪವಾದ ಅಂದರೆ ಅನಿರ್ವಚನೀಯವಾದ ತಾದಾತ್ಮ್ಯ ಸಂಬಂಧವು ಸಿದ್ಧಿಸುತ್ತದೆ. ಯಾವ ಪ್ರಮಾಣದಿಂದಲೂ ಭಿನ್ನ ಪ್ರತೀತಿಯ ಅಭಾವವು ತೋರುವುದರಿಂದ ಆ ಶಕ್ತಿಯು ಕಲ್ಪಿತ ಸರ್ಪವು ಪರಮಾರ್ಥದಿಂದ ರಜ್ಜು ರೂಪವಾದಂತೆ ಬ್ರಹ್ಮಕ್ಕಿಂತ ಭಿನ್ನವಾಗದೆ ಬ್ರಹ್ಮರೂಪವೇ ಆಗಿದೆ.

ಈ ರೀತಿ ಪ್ರಕೃತಿಯೇ ಮೊದಲಾದವುಗಳು ಪ್ರಧಾನದ ಉಪಭೇದಗಳು. ಆದುದರಿಂದ ಅವು ಪ್ರಧಾನರೂಪಗಳೇ ಆಗಿರುತ್ತವೆ ಆ ಪ್ರಧಾನವು ಬ್ರಹ್ಮಚೈತನ್ಯ ಶಕ್ತಿಯಾಗಿದೆ. ಪುರುಷನಲ್ಲಿ ಇರುವ ಸಾಮರ್ಥ್ಯ ರೂಪ ಶಕ್ತಿಯು ಪುರುಷನಿಗಿಂತ ಭಿನ್ನವಾಗಿರದಂತೆ ಚೈತನ್ಯದ ಪ್ರಧಾನ ರೂಪವಾದ ಶಕ್ತಿಯು ಚೈತನ್ಯಕ್ಕಿಂತ ಭಿನ್ನವಲ್ಲ. ಅದು ಚೈತನ್ಯ ಸ್ವರೂಪವಾಗಿಯೇ ಇವೆ

ಈ ಪ್ರಕಾರ ಸಕಲ ಅನಾತ್ಮ ಪದಾರ್ಥಗಳಿಗೆ ಬ್ರಹ್ಮದಲ್ಲಿ ಲಯಚಿಂತನ ಮಾಡಿ, ಆ ಅದ್ವಯ ಬ್ರಹ್ಮವು ನಾನೇ ಎಂದು ಚಿಂತಿಸಬೇಕು

## ಧ್ಯಾನ ಮತ್ತು ಜ್ಞಾನದ ಅಂತರ್ಭೇದ ಅಹಂಗ್ರಹ ಧ್ಯಾನ

ಪ್ರಶ್ನೆ. ಲಯಚಿಂತನ ಯಾರಿಗೆ ಹೇಳಿದ್ದು ?

ಉತ್ತರ. ಮಹಾವಾಕ್ಯದ ವಿಚಾರವನ್ನು ಮಾಡಿಯೂ, ಬುದ್ಧಿಮಾಂದ್ಯ ಮೊದಲಾದ ಪ್ರತಿಬಂಧಕಗಳಲ್ಲಿ ಯಾವುದೋ ಒಂದು ಪ್ರತಿಬಂಧಕದಿಂದ ಅಪರೋಕ್ಷ ಜ್ಞಾನವಾಗದಿದ್ದವರಿಗೆ ಲಯಚಿಂತನ ರೂಪ ಧ್ಯಾನವು ಹೇಳಲ್ಪಟ್ಟಿದೆ.

## ವಿದ್ಯಾರಣ್ಯಸ್ವಾಮಿ ಕೃತಪಂಚದಶಿಯಲ್ಲಿ ಹೇಳಿದ ಪ್ರತಿಬಂಧಕಗಳು

ಪ್ರಶ್ನೆ: ಪ್ರತಿಬಂಧಕಗಳೆಷ್ಟು ?

ಉತ್ತರ: ೧ ಭೂತಪ್ರತಿಬಂಧಕ, ೨ ವರ್ತಮಾನ ಪ್ರತಿಬಂಧಕ, ೩. ಭಾವೀಪ್ರತಿಬಂಧಕಗಳೆಂದು ಪ್ರತಿಬಂಧಕಗಳು ಮೂರು.

ಪ್ರಶ್ನೆ ಭೂತಪ್ರತಿಬಂಧಕದ ಸ್ವರೂಪವೇನು ?

ಉತ್ತರ ಧನ ಪುತ್ರ ಮೊದಲಾದ ಪ್ರಿಯ ವಸ್ತುಗಳು ನಾಶವಾದನಂತರ ಅವುಗಳ ಅನುಸಂಧಾನ ರೂಪವೆಂಬ ಪ್ರತಿಬಂಧಕ.

ಪ್ರಶ್ನೆ ವರ್ತಮಾನ ಪ್ರತಿಬಂಧಕಗಳೆಷ್ಟು ?

ಉತ್ತರ ವಿಷಯಾಶಕ್ತಿ, ಕುತರ್ಕ, ಬುದ್ಧಿಮಾಂದ್ಯ ಮತ್ತು ವಿಪರ್ಯಯ ದುರಾಗ್ರಹ – ಈ ನಾಲ್ಕು ವರ್ತಮಾನ ಪ್ರತಿಬಂಧಕಗಳು.

ಪ್ರಶ್ನೆ. ಭಾವೀಪ್ರತಿಬಂಧಕವೆಂದರೇನು ?

ಉತ್ತರ. ಬ್ರಹ್ಮಲೋಕದ ಇಚ್ಛೆ ಇಲ್ಲವೇ ಜನ್ಮಾಂತರಕ್ಕೆ ಹೇತುವಾದ ಶೇಷ ಪ್ರಾರಬ್ಧ ರೂಪವಾದದ್ದಕ್ಕೆ ಭವಿಷ್ಯತ್ ಪ್ರತಿಬಂಧಕವೆನ್ನುತ್ತಾರೆ

ಪ್ರಶ್ನೆ. ಧ್ಯಾನಕ್ಕೂ ಜ್ಞಾನಕ್ಕೂ ಭೇದವೇನು ?

ಉತ್ತರ. ಜ್ಞಾನವು ಪ್ರಮಾಣ ಪ್ರಮೇಯಗಳಿಗೆ ಅಧೀನವಾದದ್ದು; ವಿಧಿ ವಿಶ್ವಾಸಗಳಿಗೆ ಅಧೀನವಲ್ಲ.

## ಜ್ಞಾನವು ಪ್ರಮಾಣ ಪ್ರಮೇಯಗಳಿಗೆ ಅಧೀನವಾದದ್ದು ಎಂಬ ವಿಷಯದ ವಿವೇಚನೆ

ಭ್ರಾಂತಿಜ್ಞಾನ, ಸ್ಮೃತಿಜ್ಞಾನ, ಪ್ರಮಾಜ್ಞಾನವೆಂದು ಜ್ಞಾನವು ಮೂರು ವಿಧ. ಇವುಗಳಲ್ಲಿ ಭ್ರಾಂತಿಜ್ಞಾನವು ಕೇವಲ ವಸ್ತುವಿಗೆ ಅಂದರೆ ಭ್ರಮರೂಪ ವಿಷಯಕ್ಕೆ ಅಧೀನವಾಗಿದೆ. ಸ್ಮೃತಿಜ್ಞಾನವಾದರೋ ತನ್ನ ವಿಷಯದೊಂದಿಗೆ, ಸದೃಶ ವಸ್ತು ಜ್ಞಾನದೊಂದಿಗೆ, ಇಲ್ಲವೇ ತತ್ಸಂಬಂಧವಾದ ವಿಷಯಜ್ಞಾನದೊಂದಿಗೆ, ಇಲ್ಲವೇ ತನ್ನ ವಿಷಯ ಅಂದರೆ ಪೂರ್ವ ದೃಷ್ಟ ವಿಷಯದ ಚಿಂತನೆಯಿಂದ ಉದಯವಾದ ಪೂರ್ವ ದೃಷ್ಟ ವಸ್ತುವಿನ ಮನೋ

ಮಯಾಕಾರಕ್ಕೆ ಅಧೀನವಾಗಿದೆ ಮತ್ತು ಪ್ರಮಾ ಜ್ಞಾನಾಂತರ್ಗತವಾದ ಸುಖ ಮೊದಲಾದವುಗಳ ಜ್ಞಾನವಾದರೋ, ನ್ಯಾಯಮತದಲ್ಲಿ ಮತ್ತು ವಾಚಸ್ಪತಿ ಮತದಲ್ಲಿ ಮನೋರೂಪ ಪ್ರಮಾಣಕ್ಕೂ ಮತ್ತು ಸುಖಾದಿ ರೂಪ ಪ್ರಮೇಯಕ್ಕೂ ಅಧೀನವಾಗಿದೆ. ಆದರೆ ವೇದಾಂತ ಸಿದ್ಧಾಂತದಲ್ಲಿ ಮನಸ್ಸಿಗೆ ಪ್ರಮಾಣತೆಯನ್ನು ಅಂಗೀಕರಿಸಿಲ್ಲ. ಆದುದರಿಂದ ಸುಖಾದಿಗಳ ಜ್ಞಾನವು ಕೇವಲ ಜ್ಞೇಯವಾದ ಸುಖಾದಿ ವಸ್ತುವಿಗೆ ಅಧೀನವಾಗಿದೆ.

ಮತ್ತು ಮೂರನೆಯ ಪ್ರಮಾ ಜ್ಞಾನವು ಪ್ರತ್ಯಕ್ಷ, ಅನುಮಾನಾದಿ ಪ್ರಮಾಣದ ಮತ್ತು ಪ್ರಮೇಯ ರೂಪ ವಸ್ತುವಿನೊಂದಿಗಿರುವ ಸಂಬಂಧಕ್ಕೆ ಅಧೀನವಾಗಿದೆ ಇವುಗಳಲ್ಲಿ ಶಬ್ದ ಪ್ರಮಾಣ ಜನ್ಯವಾದ, ಬ್ರಹ್ಮಜ್ಞಾನ ರೂಪವಾದ ಶಾಬ್ದಿಪ್ರಮೆಯು ಮಹಾವಾಕ್ಯ ರೂಪ ಶಬ್ದ ಪ್ರಮಾಣದ ಮತ್ತು ಪ್ರತ್ಯಗಭಿನ್ನ ಬ್ರಹ್ಮರೂಪ ಪ್ರಮೇಯದ ಲಕ್ಷಣಾ ವೃತ್ತಿ ರೂಪವಾದ ಪರಂಪರಾ ಸಂಬಂಧದ ಜ್ಞಾನಕ್ಕೆ ಅಧೀನವಾಗಿದೆ. ಮತ್ತು ಇತರೆ ಲೌಕಿಕ ಪದಾರ್ಥದ ಶಾಬ್ದಿ ಪ್ರಮಾ ರೂಪವಾದ ಜ್ಞಾನವು ಕೆಲವೆಡೆಯಲ್ಲಿ ಶಕ್ತಿ ವೃತ್ತಿರೂಪ ಸಂಬಂಧ ಜ್ಞಾನಕ್ಕೆ ಅಧೀನವಾಗಿಯೂ, ಕೆಲವೆಡೆಯಲ್ಲಿ ಲಕ್ಷಣಾ ವೃತ್ತಿ ರೂಪ ಸಂಬಂಧ ಜ್ಞಾನಕ್ಕೆ ಅಧೀನವಾಗಿಯೂ ಇದೆ.

ಈ ರೀತಿಯಾಗಿ ಕೆಲವು ಜ್ಞಾನವು ಜ್ಞೇಯ ರೂಪ ವಸ್ತು ಮಾತ್ರಕ್ಕೆ ಅಧೀನವಾಗಿಯೂ, ಮತ್ತೆ ಕೆಲವು ಜ್ಞಾನವು ಪ್ರಮಾಣ ಪ್ರಮೇಯ ರೂಪ ವಸ್ತುವಿನ ಸಂಬಂಧದ ಅಧೀನವಾಗಿಯೂ, ಇಲ್ಲವೇ ತತ್ಸಂಬಧ ಜ್ಞಾನಕ್ಕೆ ಅಧೀನವಾಗಿಯೂ ಇದೆ.

ಭ್ರಮ, ಪ್ರಮಾ ಸಾಧಾರಣ ಜ್ಞಾನದ ವಿಷಯವನ್ನು ಜ್ಞೇಯವೆನ್ನುತ್ತಾರೆ. ಅವುಗಳಲ್ಲಿ ಕೇವಲ ಪ್ರಮಾ ಜ್ಞಾನದ ವಿಷಯವನ್ನು ಪ್ರಮೇಯವೆನ್ನುತ್ತಾರೆ. ಆದರಲ್ಲಿ ಜ್ಞೇಯತ್ವವಿರುತ್ತದೆ ಆದರೂ ಜ್ಞೇಯ ಪದಾರ್ಥದಲ್ಲಿ ನಿಯಮದಿಂದ ಪ್ರಮೇಯತ್ವವು ಉಂಟಾಗುವುದಿಲ್ಲ. ಅಂದರೆ ಕೆಲವೆಡೆಯಲ್ಲಿ ಉಂಟಾಗುತ್ತದೆ; ಕೆಲವೆಡೆಯಲ್ಲಿ ಉಂಟಾಗುವುದಿಲ್ಲ

ಇಲ್ಲಿ ವಸ್ತುವೆಂಬ ಶಬ್ದದಿಂದ ಈಶ್ವರರಚಿತ ಪದಾರ್ಥ, ಇಲ್ಲವೇ ಮನೋಮಯ ಪದಾರ್ಥ ಅಂದರೆ ಅಪರೋಕ್ಷ ಜ್ಞಾನದ ವಿಷಯ, ಇಲ್ಲವೇ ಭ್ರಮರೂಪ ಪದಾರ್ಥ, ಇಲ್ಲವೇ ಉಕ್ತ ಪದಾರ್ಥಗಳೊಂದಿಗೆ ವೃತ್ತಿಯ

ಸಂಬಂಧವೆಂದು ಗ್ರಹಿಸಬೇಕು ಆ ವೃತ್ತಿಯ ಸಂಬಂಧವು ಸಾಕ್ಷಾತ್ತಾದರೂ ಆಗಲಿ ಇಲ್ಲವೇ ಪ್ರಮಾಣ ದ್ವಾರವಾದರೂ ಆಗಲಿ

ಈ ರೀತಿಯಾಗಿ ಜ್ಞಾನವು ವಿಧಿ ಮೊದಲಾದವುಗಳಿಗೆ ಅಧೀನವಲ್ಲ ಮತ್ತು ಧ್ಯಾನವು ವಸ್ತುವಿನ ಅಧೀನವಲ್ಲ, ಕರ್ತ್ರಾದಿಗಳಿಗೆ ಅಧೀನವಾಗಿದೆ ಧ್ಯಾನವೆಂದರೆ ಮನಸ್ಸಿನ ವೃತ್ತಿ ರೂಪವಾಗಿದೆ. ಆ ವೃತ್ತಿಯು ಪುರುಷನ ಇಚ್ಛೆಗೆ ಅಧೀನವಾಗಿದೆ, ವಸ್ತುವಿನ ಅಧೀನವಲ್ಲ. ಆದುದರಿಂದ ಧ್ಯಾನವು ಮಾನಸ ಜ್ಞಾನವಾಗಿರದೆ, ಮಾನಸ ಕ್ರಿಯಾರೂಪವಾಗಿದೆ.

ಜ್ಞಾನವು ಪ್ರಮಾಣ ಪ್ರಮೇಯಕ್ಕೆ ಅಧೀನವಾಗಿದೆ, ವಿಧಿ ವಿಶ್ವಾಸಗಳಿಗೆ ಅಧೀನವಲ್ಲವೆಂಬುದು ತಿಳಿದನಂತರ ಧ್ಯಾನದ ವಿಚಾರವನ್ನು ನೋಡೋಣ.

ಧ್ಯಾನವು ವಿಧಿ, ಪುರುಷೇಚ್ಛೆ, ವಿಶ್ವಾಸ, ಹಠ – ಇವುಗಳಿಗೆ ಅಧೀನವಾಗಿದೆ. ಹೇಗೆಂದರೆ, ಪ್ರತ್ಯಕ್ಷ ಜ್ಞಾನದಲ್ಲಿ ಪ್ರಮಾಣ ನೇತ್ರ, ಪ್ರಮೇಯ ಘಟ ಇಲ್ಲಿ ಪ್ರಮಾಣವಾದ ನೇತ್ರಕ್ಕೂ ಪ್ರಮೇಯವಾದ ಘಟಕ್ಕೂ ಸಂಬಂಧವಾದರೆ ಪುರುಷನ ಇಚ್ಛೆಯಿಲ್ಲದಿದ್ದರೂ ಘಟದ ಪ್ರತ್ಯಕ್ಷ ಜ್ಞಾನವಾಗುತ್ತದೆ.

ಉದಾಹರಣೆ ಭಾದ್ರಪದ ಶುದ್ಧ ಚತುರ್ಥಿ ದಿವಸ ಚಂದ್ರನನ್ನು ನೋಡಬಾರದೆಂಬ ನಿಯಮವಿರುತ್ತದೆ ನೋಡಬೇಕೆಂಬ ವಿಧಿಯಿಲ್ಲ ಮತ್ತು ಪುರುಷನಿಗೆ "ನನಗೆ ಈ ದಿವಸ ಚಂದ್ರದರ್ಶನವು ಆಗಕೂಡದು" ಎಂಬ ಇಚ್ಛೆಯೂ ಇದೆ. ಆದರೂ ಯಾವ ರೀತಿಯಿಂದಲಾದರೂ ನೇತ್ರ ರೂಪ ಪ್ರಮಾಣಕ್ಕೂ ಪ್ರಮೇಯವಾದ ಚಂದ್ರನಿಗೂ ಸಂಬಂಧವಾದರ ಚಂದ್ರನ ಪ್ರತ್ಯಕ್ಷ ಜ್ಞಾನವು ಅವಶ್ಯವಾಗಿ ಆಗುತ್ತದೆ. ಈ ರೀತಿಯಾಗಿ ಜ್ಞಾನವು ಪ್ರಮಾಣ ಪ್ರಮೇಯಗಳಿಗೆ ಅಧೀನವಾಗಿದೆ, ವಿಧಿ ಇಚ್ಛಾದಿಗಳ ಅಧೀನವಲ್ಲ.

ಸಾಲಿಗ್ರಾಮವು ವಿಷ್ಣುರೂಪವಾಗಿದೆ ಎಂದು ಧ್ಯಾನ ಮಾಡುವವನಿಗೆ ಉತ್ತಮ ಫಲ ಪ್ರಾಪ್ತಿಯಾಗುತ್ತದೆ ಶಾಸ್ತ್ರ ಪ್ರಮಾಣದಿಂದಲಾದರೂ ವಿಷ್ಣುವು ಚತುರ್ಭುಜ ಮೂರ್ತಿ, ಶಂಖ, ಚಕ್ರ, ಗಧಾ, ಪದ್ಮ, ಲಕ್ಷ್ಮೀ ಸಹಿತನೆಂದು ತಿಳಿದು ಬರುತ್ತದೆ. ಮತ್ತು ನೇತ್ರ ಪ್ರಮಾಣದಿಂದ ಸಾಲಿ

ಗ್ರಾಮವು ಶಿಲೆಯೆಂದು ತಿಳಿದುಬರುತ್ತದೆ. ಆದರೂ ವಿಧಿ ವಿಶ್ವಾಸಾದಿಗಳಿಂದ ಸಾಲಿಗ್ರಾಮವು ವಿಷ್ಣುವೆಂದು ಧ್ಯಾನವಾಗುತ್ತದೆ.

ಧ್ಯಾನವು ನಾನಾ ಪ್ರಕಾರವಾಗಿದೆ. ಕೆಲವರು ಅನ್ಯರೂಪದಿಂದ ಅನ್ಯ ವಸ್ತುವನ್ನು ಧ್ಯಾನಿಸುತ್ತಾರೆ.

ಉದಾಹರಣೆ: ಸಾಲಿಗ್ರಾಮವನ್ನು ವಿಷ್ಣುರೂಪದಿಂದ ಧ್ಯಾನಿಸುತ್ತಾರೆ. ಇದಕ್ಕೆ ಪ್ರತೀಕ ಧ್ಯಾನವೆಂದು ಹೆಸರು. ಮತ್ತೆ ಕೆಲವರು ವೈಕುಂಠ ಲೋಕವಾಸಿಯಾದ ವಿಷ್ಣುವನ್ನು ಶಂಖು ಚಕ್ರ ಗಧಾಧಾರಿಯನ್ನಾಗಿಯೂ, ಚತುರ್ಭುಜ ಮೂರ್ತಿಯನ್ನಾಗಿಯೂ ಧ್ಯಾನಿಸುತ್ತಾರೆ ಇದಕ್ಕೆ ಧ್ಯೇಯಾನುಸಾರ ಧ್ಯಾನವೆನ್ನುತ್ತಾರೆ. ಇಲ್ಲಿ ಒಂದು ವಸ್ತುವನ್ನು ಮತ್ತೊಂದು ರೂಪವಾಗಿ ಧ್ಯಾನಿಸುವುದಿಲ್ಲ. ವೈಕುಂಠವಾಸಿಯಾದ ವಿಷ್ಣು ಸ್ವರೂಪವು ಪ್ರತ್ಯಕ್ಷವಾಗಿಲ್ಲ. ಕೇವಲ ಶಾಸ್ತ್ರದಿಂದ ತಿಳಿದು ಬರುತ್ತದೆ. ಶಾಸ್ತ್ರವಾದರೋ ಶಂಖು ಚಕ್ರಾದಿ ಸಹಿತವಾಗಿ ವಿಷ್ಣು ಸ್ವರೂಪವನ್ನು ಹೇಳಿದೆ

ವಿಧಿ, ವಿಶ್ವಾಸ, ಇಚ್ಛಾ, ಹಠಗಳಿಲ್ಲದೆ ಯಾವ ಧ್ಯಾನವೂ ಆಗಲಾರದು.

೧. ಮೊದಲು "ಈ ರೀತಿ ಉಪಾಸನೆ ಮಾಡಬೇಕು" ಎಂಬ ಪುರುಷನನ್ನು ಪ್ರೇರೇಪಿಸುವ ವೇದ ವಚನ ರೂಪ ವಿಧಿ ಇರಬೇಕು.

೨. ಆ ವಿಧಿರೂಪ ವೇದ ವಚನದಲ್ಲಿ ಶ್ರದ್ಧಾರೂಪವಾದ ವಿಶ್ವಾಸವಿರಬೇಕು.

೩. ಅಂತಃಕರಣದ ಕಾಮನಾರೂಪವಾದ ರಜೋಗುಣ ವೃತ್ತಿರೂಪವಾದ ಇಚ್ಛೆ ಇರಬೇಕು.

೪. ಧ್ಯಾನದಲ್ಲಿ ವೃತ್ತಿಯನ್ನು ಸ್ಥಿರ ಮಾಡುವ ಆಗ್ರಹ ರೂಪವಾದ ಹಠವೂ ಇರಬೇಕು. ನಿರಂತರ ಧ್ಯೇಯಾಕಾರವಾದ ಚಿತ್ತವೃತ್ತಿಗೆ ಧ್ಯಾನವೆನ್ನುತ್ತಾರೆ. ವೃತ್ತಿಯಲ್ಲಿ ವಿಕ್ಷೇಪವುಂಟಾದಾಗ ಹಠದಿಂದ ಚಿತ್ತ ವೃತ್ತಿಯನ್ನು ಸ್ಥಿರ ಮಾಡಬೇಕಾಗಿದೆ. ಆದ್ದರಿಂದ ಧ್ಯಾನದಲ್ಲಿ ಹಠದ ಆವಶ್ಯಕತೆ ಇದೆ.

ಪ್ರಶ್ನೆ: ಜ್ಞಾನದಲ್ಲಿ ಹಠವು ಬೇಕಿಲ್ಲವೇ ?

ಉತ್ತರ. ಇಲ್ಲ, ಯಾಕೆಂದರೆ ಜ್ಞಾನ ರೂಪವಾದ ಅಂತಃಕರಣ ವೃತ್ತಿಯಿಂದ ತಕ್ಷಣ ಆವರಣ ಭಂಗವಾಗುತ್ತದೆ. ನಂತರ ವೃತ್ತಿ ಸ್ಥಿತಿಯು ಅವಶ್ಯಕತೆಯಿಲ್ಲ ಆದುದರಿಂದ ಜ್ಞಾನಕ್ಕೆ ಹಠವು ಬೇಕಾಗಿಲ್ಲ.

ಮೇಲೆ ಹೇಳಿದ ನಾಲ್ಕು ಹೇತುಗಳು ಧ್ಯಾನದಲ್ಲಿರಬೇಕು, ಜ್ಞಾನಕ್ಕೆ ಅವಶ್ಯಕತೆಯಿಲ್ಲ.

ವೈಕುಂಠವಾಸಿ ಚತುರ್ಭುಜ ವಿಷ್ಣು ಧ್ಯಾನದಂತೆ "ನಾನು ಬ್ರಹ್ಮ" ಎಂಬ ಈಧ್ಯಾನವೂ ಸಹ ಧ್ಯೇಯಾನುಸಾರವಾಗಿದೆ,ಅದು ಪ್ರತೀಕ ಧ್ಯಾನವಲ್ಲ ಆದರೂ ಇದು ಅಹಂಗ್ರಹ ಧ್ಯಾನವಾಗಿದೆ. ಧ್ಯೇಯ ಸ್ವರೂಪವನ್ನು ತನ್ನ ಸ್ವರೂಪದಿಂದ ಮಾಡುವ ಚಿಂತನೆಗೆ ಅಹಂಗ್ರಹ ಧ್ಯಾನವೆನ್ನುತ್ತಾರೆ. ಯಾವ ಪುರುಷನಿಗೆ ಬುದ್ಧಿ ಮಾಂದ್ಯಾದಿ ದೋಷದಿಂದ ಅಪರೋಕ್ಷ ಜ್ಞಾನವು ಉಂಟಾಗಿಲ್ಲವೋ ಅವನು ವೇದದ ಆಜ್ಞಾನುಸಾರ ವಿಧಿಯಲ್ಲಿ ವಿಶ್ವಾಸವಿಟ್ಟು, ಹಠದಿಂದ ನಿರಂತರ "ನಾನು ಬ್ರಹ್ಮ" ಎಂಬ ವೃತ್ತಿಯು ಸ್ಥಿರವಾಗುವುದಕ್ಕಾಗಿ ಅಹಂಗ್ರಹ ಧ್ಯಾನವನ್ನು ಮಾಡಿದರೆ ಅವನಿಗೆ ಪ್ರತಿಬಂಧಕ ನಿವೃತ್ತಿಯಾಗಿ ಜ್ಞಾನ ದ್ವಾರಾ ಮುಕ್ತಿಯಾಗುತ್ತದೆ

ಪ್ರಶ್ನೆ ಅಹಂಗ್ರಹ ಧ್ಯಾನವೆಂದರೇನು ? ಅದಕ್ಕೆ ಫಲವೇನು ?

ಉತ್ತರ: ಸಂವಾದಿ ಭ್ರಾಂತಿಯಿಂದ ಪ್ರವೃತ್ತನಾದ ಪುರುಷನಿಗೆ ಯಥಾರ್ಥ ಜ್ಞಾನ ದ್ವಾರಾ ಇಷ್ಟ ವಸ್ತುವಿನ ಪ್ರಾಪ್ತಿಯಾದಂತೆ, "ನಾನು ಬ್ರಹ್ಮ" ಎಂಬ ವೃತ್ತಿಯ ಸ್ಥಿತಿರೂಪವಾದ ಅಹಂಗ್ರಹಧ್ಯಾನವನ್ನು ಮಾಡುವವನಿಗೆ ಜ್ಞಾನ ದ್ವಾರಾ ಮುಕ್ತಿಯಾಗುತ್ತದೆ ಆದರೂ ಇಲ್ಲಿ ಧ್ಯಾನಕ್ಕೆ ವಿಷಯವಾದ ಬ್ರಹ್ಮವು ಪರಮಾರ್ಥವಲ್ಲ, ಮನಃ ಕಲ್ಪಿತವಾದುದರಿಂದ ಭ್ರಮರೂಪವೆಂದು ತಿಳಿಯಬೇಕು ಆದನ್ನು ವಿಷಯೀಕರಿಸುವ ವೃತ್ತಿ ರೂಪವಾದ ಜ್ಞಾನವೂ ಸಹ ಭ್ರಾಂತಿ ಜ್ಞಾನವೇ ಆಗುತ್ತದೆ; ಯಥಾರ್ಥ ಜ್ಞಾನವಲ್ಲ ಹಾಗಿದ್ದರೂ ಮಣಿ ಪ್ರಭೆಯಲ್ಲಿ ಮಣಿ ಬುದ್ಧಿ ರೂಪವಾದ ಸಂವಾದಿ ಭ್ರಮೆಯನ್ನು ಮಾಡಿಕೊಂಡು, ಅದರ ಸಮೀಪಕ್ಕೆ ಹೋಗುವ ಪುರುಷನಿಗೆ ಮಣಿ ಜ್ಞಾನದಿಂದ ಮಣಿ ಪ್ರಾಪ್ತಿಯಾದಂತೆ, ಉಕ್ತವಾದ ಧ್ಯಾನ ದ್ವಾರದಿಂದ ಬ್ರಹ್ಮಜ್ಞಾನವಾಗಿ, ಮೋಕ್ಷ ಪ್ರಾಪ್ತಿಯಾಗು

ತ್ತದೆ. ಈ ಸಂವಾದಿ ಭ್ರಮೆಯ ವರ್ಣನವು ಪಂಚದಶಿ ಧ್ಯಾನ ದೀಪದ ಆರಂಭದಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಅಲ್ಲಿ –

ಶ್ಲೋಕ – ದೀಪ ಪ್ರಭಾಮಣಿ ಭ್ರಾಂತಿರ್ವಿ ಸಂವಾದಿ ಭ್ರಮೋಸ್ಮೃತಃ।
ಮಣಿ ಪ್ರಭಾಮಣಿಭ್ರಾಂತಿ ಸ್ಸಂವಾದಿಭ್ರಮ ಉಚ್ಯತೆ ॥

ಎಂದು ಹೇಳಿದೆ

## ಪ್ರಾಣವೋಪಾಸನ

ಸವೈಯಾಛಂದ – ಧ್ಯಾನ ಅಹಂಗ್ರಹ ಪ್ರನವ ರೂಪ ಕೊ,
ಕಹ್ಯೊ ಸುರೇಶ್ವರ ಶ್ರುತಿ ಅನುಸಾರ ।
ಅಚ್ಛರ ಪ್ರನವ ಬ್ರಹ್ಮರುಮು ರೂಪಸು,
ಯು ಅನುಲವ ನಿಜಮತಿ ಗತಿಧಾರ ॥
ಧ್ಯಾನ–ಸಮಾನ ಆನ ನಹಿ ಯಾಕೆ,
ಪಂಚೀಕರನ ಪ್ರಕಾರ ವಿಚಾರ ।
ಜೋ ಯಹ ಕರತ ಉಪಾಸನ ಸೋ ಮುನಿ,
ತುರತ ನಸೈ ಸಂಸಾರ ಅಪಾರ ॥ ॥೧೬೮॥

ಅರ್ಥ : ಮೇಲಿನ ದೋಹಾದಲ್ಲಿ ಮತ್ತೊಂದು ರೀತಿಯ ಅಹಂಗ್ರಹ ಧ್ಯಾನವು ಪ್ರತಿಪಾದಿಸಲ್ಪಡುತ್ತದೆ. ಹೇ ಶಿಷ್ಯನೇ ! ಪ್ರಣವ ರೂಪದ ಅಂದರೆ ಓಂಕಾರ ಸ್ವರೂಪದ ಅಹಂಗ್ರಹ ಧ್ಯಾನವನ್ನು ಮಾಂಡೂಕ್ಯ ಪ್ರಶ್ನಾದಿ ಉಪನಿಷತ್ತುಗಳಿಗೆ ಅನುಸಾರವಾಗಿ ಸುರೇಶ್ವರಾಚಾರ್ಯರು ಪ್ರತಿಪಾದಿಸಿದ್ದಾರೆ. ಆ ಧ್ಯಾನವನ್ನು ನೀನು ಮಾಡಬೇಕು. ಅದರ ರೀತಿಯೇನೆಂದರೆ – ಸಂಕ್ಷೇಪವಾಗಿ ಹೇಳುತ್ತೇನೆ, ಕೇಳು.

ಪ್ರಣವಾಕ್ಷರವು ಬ್ರಹ್ಮ ಸ್ವರೂಪವು. "ಆ ಪ್ರಣವರೂಪ ಬ್ರಹ್ಮವೇ ನಾನು"– ಈ ರೀತಿಯಾಗಿ ಕ್ಷಣ ಮಾತ್ರ ಅಂತರಾಯ ರಹಿತವಾಗಿ ವೃತ್ತಿಯನ್ನು ಧರಿಸು ಇದಕ್ಕೆ ಸಮಾನವಾದ ಅನ್ಯಧ್ಯಾನವಿಲ್ಲ. ಈ ಧ್ಯಾನದ ವಿಶೇಷ ರೀತಿಯನ್ನು ಶ್ರೀ ಸುರೇಶ್ವರ ಕೃತ ಪಂಚೀಕರಣದಲ್ಲಿ ಚತುರ್ಥ ಪಾದದಲ್ಲಿ ಸ್ಪಷ್ಟವಾಗಿ ವಿವರಿಸಿದೆ.

## ನಿರ್ಗುಣ ಮತ್ತು ಸಗುಣೋಪಾಸನೆಗಳ ಫಲ ಸಹಿತ ಕಥನ

ಪ್ರಣವೋಪಾಸನೆಯು ಅನೇಕ ಉಪನಿಷತ್ತುಗಳಲ್ಲಿ ಇದ್ದರೂ, ಮಾಂಡೂಕ್ಯದಲ್ಲಿ ವಿಶೇಷವಾಗಿದೆ. ಅದರ ವ್ಯಾಖ್ಯಾನವು ಭಾಷ್ಯಕಾರರಿಂದಲೂ, ಆನಂದಗಿರಿಯವರಿಂದಲೂ ಸ್ಪಷ್ಟವಾಗಿ ಬರೆಯಲ್ಪಟ್ಟಿದೆ, ಅದೇ ಪದ್ಧತಿಯನ್ನು ವಾರ್ತಿಕಕಾರರಾದ ಶ್ರೀ ಸುರೇಶ್ವರಾಚಾರ್ಯರು ಅನುಸರಿಸಿದ್ದಾರೆ. ಹೀಗಿದ್ದರೂ ಆ ಗ್ರಂಥ ವಿಚಾರದಲ್ಲಿ ಸಾಮರ್ಥ್ಯವಿಲ್ಲದ ಬುದ್ಧಿಯುಳ್ಳವರಿಗಾಗಿ, ಆ ಉಪಾಸನೆಯ ರೀತಿಯುನ್ನು ಕೆಳಗೆ ವಿವರಿಸಿದೆ.

ಉಪನಿಷತ್ತುಗಳಲ್ಲಿ ಎರಡು ವಿಧವಾದ ಪ್ರಣವದ ಉಪಾಸನೆಯು ಹೇಳಲ್ಪಟ್ಟಿದೆ. ಒಂದನೆಯದು ಪರಬ್ರಹ್ಮರೂಪದಿಂದ, ಎರಡನೆಯದು ಅಪರಬ್ರಹ್ಮರೂಪದಿಂದ ನಿರ್ಗುಣ ಬ್ರಹ್ಮಕ್ಕೆ ಪರಬ್ರಹ್ಮವೆಂತಲೂ, ಸಗುಣ ಪರಬ್ರಹ್ಮಕ್ಕೆಅಪರಬ್ರಹ್ಮವೆಂತಲೂ ಎನ್ನುತ್ತಾರೆ ಪರಬ್ರಹ್ಮರೂಪವಾದ ಪ್ರಣವದ ಚಿಂತನೆಯನ್ನು ಮಾಡುವವನಿಗೆ ಮೋಕ್ಷವಾಗುತ್ತದೆ. ಅಪರ ಬ್ರಹ್ಮವಾದ ಪ್ರಣವಚಿಂತನೆಯನ್ನು ಮಾಡುವವನಿಗೆ ಬ್ರಹ್ಮಲೋಕ ಪ್ರಾಪ್ತಿಯಾಗುತ್ತದೆ. ಇದೇ ವಿಷಯುವನ್ನು ಆಚಾರ್ಯರು –

ಓಂಕಾರ ಬಿಂದುಸ್ಸಂಯುಕ್ತಂ ನಿತ್ಯಂ ಧ್ಯಾಯಂತಿಯೋಗಿನಃ ।
ಕಾಮದಂ ಮೋಕ್ಷದಂಚೈವ ಓಂಕಾರಾಯ ನಮೋನಮಃ ॥

ಎಂದು ಹೇಳಿದ್ದಾರೆ.

ಈ ರೀತಿಯಾಗಿ ನಿರ್ಗುಣ ಭೇದದಿಂದ ಪ್ರಣವೋಪಾಸನೆಯು ಎರಡು ವಿಧ

### ನಿರ್ಗುಣ ಪ್ರಣವೋಪಾಸನೆಯ ರೀತಿ

ಬ್ರಹ್ಮಲೋಕದ ಬಯಕೆಯಿರುವವನು ನಿರ್ಗುಣೋಪಾಸನೆಯನ್ನು ಮಾಡಿದರೂ, ಕಾಮನಾರೂಪ ಪ್ರತಿಬಂಧಕದಿಂದ ಮೋಕ್ಷಕ್ಕೆ ಹೇತುವಾದ ಜ್ಞಾನವುಂಟಾಗಲಾರದು ಈ ಕಾರಣದಿಂದ ಅವನಿಗೆ ಮೋಕ್ಷವಾಗದೆ ಬ್ರಹ್ಮಲೋಕ ಪ್ರಾಪ್ತಿಯಾಗುತ್ತದೆ. ಬ್ರಹ್ಮಲೋಕದಲ್ಲಿ ಹಿರಣ್ಯಗರ್ಭನಿಗೆ ಸಮಾನವಾಗಿ ಭೋಗಿಸಿ, ನಂತರ ಜ್ಞಾನ ದ್ವಾರಾ ಮೋಕ್ಷವು ಲಭಿಸುತ್ತದೆ.

ಬ್ರಹ್ಮಲೋಕದ ಕಾಮನೆ ಇಲ್ಲದವನಿಗೆ, ಇಲ್ಲಿಯೇ ಜ್ಞಾನವಾಗಿ ತದ್ವಾರಾ ಮೋಕ್ಷವಾಗುತ್ತದೆ. ಈ ರೀತಿ ಸಗುಣೋಪಾಸನೆಯ ಫಲವು ನಿರ್ಗು ಣೋಪಾಸನೆಯ ಫಲದಲ್ಲಿ ಅಂತರ್ಭೂತವಾಗಿದೆ ಆದುದರಿಂದ ಕೆಳಗೆ ನಿರ್ಗುಣೋಪಾಸನೆಯು ವರ್ಣಿಸಲ್ಪಡುತ್ತದೆ.

ಕಾರಣ ಕಾರ್ಯ ರೂಪವಾದ ಪ್ರಪಂಚವು ಓಂಕಾರ ರೂಪವಾದುದ ರಿಂದ ಸರ್ವಕ್ಕೂ ಓಂಕಾರವೇ ಸ್ವರೂಪ. ಸರ್ವ ಪದಾರ್ಥಗಳಲ್ಲಿ ನಾಮ ಮತ್ತು ರೂಪವೆಂದು ಎರಡು ಭಾಗಗಳಿರುತ್ತವೆ. ಇಲ್ಲಿ ರೂಪ ಭಾಗವು ನಾಮಭಾಗಕ್ಕಿಂತ ಬೇರೆಯಲ್ಲ ಯಾಕೆಂದರೆ, ಪದಾರ್ಥದ ರೂಪ ಅಂದರೆ ಆಕಾರವು ನಾಮ ನಿರೂಪಣ ದ್ವಾರಾ ಗ್ರಹಣವಾಗುತ್ತದೆ; ಇಲ್ಲವೇ ತ್ಯಾಗವಾಗುತ್ತದೆ. ನಾಮವನ್ನು ತಿಳಿಯದೆ ಕೇವಲ ಆಕಾರದಿಂದ ವ್ಯವ ಹಾರ ಸಿದ್ಧಿಯಾಗಲಾರದು ಆದುದರಿಂದ ನಾಮವೇ ಸಾರ. ಘಟ ನಾಶವಾದ ಮೇಲೆ ಮೃತ್ತಿಕೆಯು ಶೇಷವಾಗಿರುತ್ತದೆ. ಅಲ್ಲಿ ಘಟವು ಮೃತ್ತಿಕೆಗಿಂತ ಬೇರೆಯಲ್ಲ ಅದರಂತೆ ಪದಾರ್ಥದ ಆಕಾರವು ನಾಶವಾದ ಮೇಲೆ ಉಳಿದ ನಾಮಕ್ಕಿಂತ ಆಕಾರವು ಬೇರೆಯಲ್ಲ. ನಾಮವು ರೂಪ ವಾಗಿಯೇ ಇರುತ್ತದೆ.

ಘಟಶರಾವಾದಿಗಳು ಪರಸ್ಪರ ವ್ಯಭಿಚಾರಿಗಳಾದುದರಿಂದ ಮಿಥ್ಯೆ ಯಾಗಿವೆ. ಮತ್ತು ಇವುಗಳಲ್ಲಿ ಅನುಗತವಾದ ಮೃತ್ತಿಕೆಯು ಸತ್ಯವಾ ದಂತೆ ಅಂದರೆ ಘಟಶರಾವಾದಿಗಳ ಅಪೇಕ್ಷೆಯಿಂದ ಮೃತ್ತಿಕೆಯು ಚಿರ ಕಾಲ ಸ್ಥಾಯಿಯಾದುದರಿಂದ ಅದನ್ನು ಅಪೇಕ್ಷಿಕ ಸತ್ಯವೆನ್ನುತ್ತಾರೆ ಘಟದ ಆಕಾರಗಳು ಅನೇಕವಾಗಿರುವುದರಿಂದ, ಅವು ಪರಸ್ಪರ ವ್ಯಭಿಚಾರಿ ಗಳಾಗಿರುವುದರಿಂದ ಮಿಥ್ಯೆ. ಸರ್ವ ಆಕಾರದಲ್ಲಿಯೂ ಇರುವ ಘಟವೆಂಬ ನಾಮವು ಒಂದೇ ಆದುದರಿಂದ ಅದು ಸತ್ಯ. ಅಂದರೆ ಘಟದ ಅಪೇಕ್ಷೆ ಯಿಂದ "ಘಟ"ವೆಂಬ ಎರಡಕ್ಷರಗಳಿರುವ ಹೆಸರು ಬಹುಕಾಲ ಸ್ಥಾಯಿ ಯಾಗಿರುತ್ತದೆ. ದೇವತೆಗಳು ವಾಸ್ತವವಾಗಿ ಮೃತ್ಯುಗ್ರಸ್ತರಾಗಿದ್ದರೂ ಬಹು ಕಾಲ ಸ್ಥಾಯಿಯಾಗಿರುವುದರಿಂದ ಅಮರರೆಂದು ಹೇಳಿಸಿಕೊಳ್ಳುವಂತೆ, ಘಟ ನಾಮವು ಸತ್ಯ ಅಂದರೆ ನಿತ್ಯವೆಂದು ಹೇಳಿಸಿಕೊಳ್ಳುತ್ತದೆ ಆ ಸತ್ಯ ನಾಮ ಕ್ಕಿಂತ ಮಿಥ್ಯೆಯಾದ ಆಕಾರಗಳು ಬೇರೆಯಲ್ಲ; ಅವು ನಾಮಸ್ವರೂಪಗಳೇ.

ಈ ರೀತಿಯಾಗಿ ಸರ್ವ ಪದಾರ್ಥಗಳ ಆಕಾರವೂ, ತಮ್ಮ ತಮ್ಮ ನಾಮಕ್ಕಿಂತ ಮಿಥ್ಯೆಯಾದ ಆಕಾರಗಳೂ ಬೇರೆಯಲ್ಲ ಮತ್ತು ಆ ಸಕಲ ನಾಮಗಳು ಓಂಕಾರಕ್ಕಿಂತ ಭಿನ್ನವಲ್ಲ ಯಾಕೆಂದರೆ, ವಾಚಕ ಶಬ್ದಕ್ಕೆ ನಾಮವೆನ್ನುತ್ತಾರೆ ಲೌಕಿಕ ವೈದಿಕ ಸಕಲ ಶಬ್ದಗಳು ಓಂಕಾರದಿಂದಲೇ ಉತ್ಪನ್ನವಾಗಿರುವವೆಂದು ಶ್ರುತಿ ಹೇಳುತ್ತದೆ. ಕಾರ್ಯವು ಕಾರಣ ಸ್ವರೂಪವಾಗಿರುವುದರಿಂದ ಓಂಕಾರದ ಕಾರ್ಯವಾದ ವಾಚಕ ಶಬ್ದ ರೂಪ ಗಳಾದ ನಾಮಗಳೆಲ್ಲವೂ ಓಂಕಾರ ಸ್ವರೂಪಗಳಾಗಿಯೇ ಇರುತ್ತವೆ ಹಿಂದೆ ಹೇಳಿದಂತೆ ಆಕಾರವು ನಾಮಸ್ವರೂಪವು ಸರ್ವ ನಾಮಗಳಿಗೂ ಓಂಕಾರವೇ ಸ್ವರೂಪವಾದುದರಿಂನ ಸರ್ವ ಪದಾರ್ಥಗಳೂ ಓಂಕಾರ ರೂಪಗಳಾಗಿವೆ.

## ಓಂಕಾರಕ್ಕೂ ಬ್ರಹ್ಮಕ್ಕೂ ಅಭೇದ

ಸರ್ವ ಸ್ವರೂಪವೂ ಓಂಕಾರವಾದಂತೆ, ಸರ್ವ ಸ್ವರೂಪವೂ ಬ್ರಹ್ಮವೇ. ಆದುದರಿಂದ ಓಂಕಾರವೂ ಸಹ ಬ್ರಹ್ಮ ರೂಪವೇ ಇಲ್ಲವೇ ಓಂಕಾರವು ಬ್ರಹ್ಮಕ್ಕೆ ವಾಚಕ; ಬ್ರಹ್ಮವು ವಾಚ್ಯ ವಾಚ್ಯ ವಾಚಕಗಳಿಗೆ ಅಭೇದವಿರು ವುದರಿಂದ ಓಂಕಾರವು ಬ್ರಹ್ಮ ರೂಪವೇ ಆಗಿದೆ. ವಿಚಾರ ದೃಷ್ಟಿಯಿಂದ ಲಾದರೂ 'ಓಂ' ಎಂಬ ಅಕ್ಷರವು ಬ್ರಹ್ಮದಲ್ಲಿ ಅಧ್ಯಸ್ಥ. ಬ್ರಹ್ಮವು 'ಓಂ' ಎಂಬ ಅಕ್ಷರಕ್ಕೆ ಅಧಿಷ್ಠಾನ ಅಧ್ಯಸ್ಥದ ಸ್ವರೂಪವು ಅಧಿಷ್ಠಾನಕ್ಕಿಂತ ಬೇರೆ ಯಲ್ಲ ಆದುದರಿಂದ ಓಂಕಾರವು ಬ್ರಹ್ಮರೂಪವೆಂದು ಚಿಂತಿಸಬೇಕು.

## ಪಾದಚತುಷ್ಟಯ ಕಥನ ಪೂರ್ವಕವಾಗಿ ಆತ್ಮನಿಗೆ ಬ್ರಹ್ಮದೊಂದಿಗೆ ಐಕ್ಯ ಮತ್ತು ವಿಶ್ವ ವಿರಾಟನೊಂದಿಗೆ ಅಭೇದ

ಆತ್ಮನಿಗೂ ಬ್ರಹ್ಮಕ್ಕೂ ಮುಖ್ಯಾಭೇದವಿರುವುದರಿಂದ ಬ್ರಹ್ಮರೂಪ ವಾದ ಓಂಕಾರಕ್ಕೂ ಆತ್ಮನಿಗೂ ಅಭೇದ ಚಿಂತನೆ ಮಾಡಬೇಕು. ಬ್ರಹ್ಮಕ್ಕೆ ನಾಲ್ಕು ಪಾದಗಳಿರುವಂತೆ ಆತ್ಮನಿಗೂ ನಾಲ್ಕು ಪಾದಗಳಿರುತ್ತವೆ. ಬ್ರಹ್ಮಕ್ಕೆ ವಿರಾಟ, ಹಿರಣ್ಯಗರ್ಭ, ಅಂತರ್ಯಾಮಿ, ಅಂದರೆ ಈಶ್ವರ ಮತ್ತು ತತ್‌ಪದ ಲಕ್ಷ್ಯವಾದ ಈಶ್ವರ ಸಾಕ್ಷಿ, ಅಂದರೆ ಮಾಯೋಪಹಿತ ಚೈತನ್ಯ – ಇವು ನಾಲ್ಕು ಪಾದಗಳು. ಆತ್ಮನಿಗೆ ವಿಶ್ವ, ತೈಜಸ, ಪ್ರಾಜ್ಞ

ಮತ್ತು ತ್ವಂ ಪದ ಲಕ್ಷ್ಯವಾದ ಜೀವ ಸಾಕ್ಷಿ ಅಂದರೆ ತುರೀಯವೆಂಬ ನಾಲ್ಕು ಪಾದಗಳು. ಇಲ್ಲಿ "ಪಾದ"ವೆಂಬ ಶಬ್ದವು ಧಾನ್ಯದ ಪಾದದಂತೆ ವಿಭಾಗ ರೂಪವಾದ ಅರ್ಥವನ್ನು ಬೋಧಿಸುತ್ತವೆ ಗೋವಿನ ಪಾದದಂತೆ ಅವಯವ ಅಂದರೆ ಅಂಗರೂಪ ಅರ್ಥವನ್ನು ಬೋಧಿಸುವುದಿಲ್ಲ

ಪ್ರಶ್ನೆ : ವಿರಾಟ್ ಎಂದರೇನು ?

ಉತ್ತರ: ಸಮಷ್ಟಿ ಸ್ಥೂಲ ಪ್ರಪಂಚ ಸಹಿತ ಚೈತನ್ಯವೇ ವಿರಾಟ್.

ಪ್ರಶ್ನೆ : ವಿಶ್ವನೆಂದರೇನು ?

ಉತ್ತರ: ವ್ಯಷ್ಟಿ ಸ್ಥೂಲ ಶರೀರದ ಅಭಿಮಾನಿಯೇ ವಿಶ್ವ. ವಿರಾಟ್ ಮತ್ತು ವಿಶ್ವನ ಉಪಾಧಿ ಸ್ಥೂಲವಾದುದರಿಂದ ವಿಶ್ವನು ವಿರಾಟ್ ರೂಪನಾಗಿದ್ದಾನೆ. ಈ ವಿರಾಡ್ರೂಪ ವಿಶ್ವನಿಗೆ ಏಳು ಅಂಗಗಳು: ೧. ಮೂರ್ಧವೇ ಸ್ವರ್ಗಲೋಕ; ೨. ನೇತ್ರವೇ ಸೂರ್ಯ; ೩. ಪ್ರಾಣವೇ ವಾಯು; ೪. ಆಕಾಶವೇ ಕಂಠದ ಅಧೋಭಾಗ; ೫. ಸಮುದ್ರಾದಿ ಜಲವೇ ಮೂತ್ರ ಸ್ಥಾನ; ೬. ಪೃಥ್ವಿಯೇ ಪಾದ; ಮತ್ತು ೭. ಮುಖವೇ ಹೋಮಾಗ್ನಿ.

ಯದ್ಯಪಿ ಮಾಂಡೂಕ್ಯ ಉಪನಿಷತ್ತಿನಲ್ಲಿ ಸ್ವರ್ಗಾದಿಗಳು ವಿರಾಟನ ಅಂಗಗಳೆಂದು ಹೇಳಿದೆ. ವಿಶ್ವನ ಅಂಗಗಳೆಂದು ಹೇಳಿಲ್ಲ. ತಥಾಪಿ ಆ ವಿರಾಟನಿಗೂ, ವಿಶ್ವನಿಗೂ ಅಭೇದವಿರುವುದರಿಂದ ಆ ಸಪ್ತಾಂಗಗಳನ್ನು ಇಲ್ಲಿ ವಿಶ್ವನಿಗೆ ಹೇಳಿದೆ.

ಮತ್ತು ವಿರಾಟನಾದ ವಿಶ್ವನಿಗೆ ಹತ್ತೊಂಭತ್ತು ಮುಖಗಳು. ಅವು ಯಾವುವೆಂದರೆ: ಪಂಚಪ್ರಾಣಗಳು, ಪಂಚಕರ್ಮೇಂದ್ರಿಯಗಳು, ಪಂಚ ಜ್ಞಾನೇಂದ್ರಿಯಗಳು, ಅಂತಃಕರಣ ಚತುಷ್ಟಯಗಳೆಂಬ ಈ ಹತ್ತೊಂಭತ್ತು ಮುಖಗಳು (ಭೋಗ ಸಾಧನವಾದುದರಿಂದ ಅವುಗಳನ್ನು ಮುಖ ಗಳೆನ್ನುತ್ತಾರೆ). ಈ ಹತ್ತೊಂಭತ್ತು ಮುಖಗಳಿಂದ ಸ್ಥೂಲ ಶಬ್ದಾದಿ ವಿಷಯಗಳನ್ನು ಬಾಹ್ಯ ವೃತ್ತಿ ದ್ವಾರಾ ಜಾಗ್ರದಾವಸ್ಥೆಯಲ್ಲಿ ಭೋಗಿ ಸುತ್ತಾ ಇದ್ದಾನೆ. ಆದುದರಿಂದ ವಿರಾಡ್ರೂಪನಾದ ವಿಶ್ವನು ಸ್ಥೂಲಕ್ಕೆ ಭೋಕ್ತ, ಮತ್ತು ಇವನನ್ನು ಬಹಿಃಪ್ರಜ್ಞನೆನ್ನುತ್ತಾರೆ. ಅಲ್ಲದೆ ಜಾಗ್ರದ ವಸ್ಥೆಯುಳ್ಳವನೆಂದೂ ಹೇಳುತ್ತಾರೆ.

ಸಕಲ ಜೀವರಿಗೆ ಕರ್ಮಾನುಸಾರವಾಗಿ ಫಲವನ್ನು ಕೊಡುವುದರಿಂದ ಈಶ್ವರನೆಂಬ ಹೆಸರುಂಟಾಯಿತು. ಸಕಲ ಸೂಕ್ಷ್ಮ ಶರೀರದಲ್ಲಿ ನಾನು ನಾನೆಂಬ ಅಭಿಮಾನಿಯಾದ ಚೈತನ್ಯಕ್ಕೆ ಹಿರಣ್ಯಗರ್ಭನೆಂದು ಹೆಸರು ಸಕಲ ಪ್ರಾಣಿಗಳ ಶರೀರದಲ್ಲಿ "ನಾನು ನಾನು" ಎಂಬ ಅಭಿಮಾನವನ್ನು ಧರಿಸುವುದರಿಂದ ಈಶ್ವರನನ್ನು ವೈಶ್ವಾನರನೆಂದು ಹೇಳುತ್ತಾರೆ. ಈ ವೈಶ್ವಾನರನು ಅನೇಕ ವಿಧವಾಗಿ ಪ್ರತೀತಿಯಾಗುವುದರಿಂದ ಅವನನ್ನು ವಿರಾಟ್ ಎನ್ನುತ್ತಾರೆ

ಪ್ರಶ್ನೆ. ಜೀವನಿಗೆ ಪ್ರಾಜ್ಞನೆಂಬ ಹೆಸರು ಬರಲು ಕಾರಣವೇನು ?

ಉತ್ತರ ಪ್ರ x ಅಜ್ಞ = ಪ್ರಾಜ್ಞ; ಸುಷುಪ್ತಿಯಲ್ಲಿ ಸ್ವಪ್ರಕಾಶವಾದ ಆತ್ಮಾನಂದವು ಅಜ್ಞಾನ ವೃತ್ತಿಯನ್ನು ಕೂಡಿರುವುದರಿಂದ ಸುಷುಪ್ತಿ ಅಭಿಮಾನಿಯಾದ ಜೀವನಿಗೆ ಪ್ರಾಜ್ಞನೆಂದು ಹೆಸರು.

ಪ್ರಶ್ನೆ ತೈಜಸನೆಂದರೇನು ?

ಉತ್ತರ: ತೇಜಶ್ಶಬ್ದವಾಚ್ಯವಾದ ಅಂತಃಕರಣದೊಂದಿಗೆ ಪ್ರಾಣದೊಂದಿಗೆ ಕೂಡಿಕೊಂಡಿರುವ ಸ್ವಪ್ನಾಭಿಮಾನಿಯಾದ ಜೀವನನ್ನು ತೈಜಸನೆನ್ನುತ್ತಾರೆ

ಪ್ರಶ್ನೆ. ವಿಶ್ವನ ಸ್ವರೂಪವೇನು ?

ಉತ್ತರ. ಸೂಕ್ಷ್ಮ ದೇಹದ ಅಭಿಮಾನವನ್ನು ಬಿಡದೆ ಸ್ಥೂಲ ದೇಹದಲ್ಲಿ "ನಾನು ನಾನು" ಎಂಬ ಅಭಿಮಾನವನ್ನು ಸ್ವೀಕರಿಸುವುದರಿಂದ ಜಾಗ್ರದಭಿಮಾನಿಯಾದ ಜೀವನಿಗೆ ವಿಶ್ವನೆಂದು ಹೆಸರು.

**ಚತುರ್ದಶ ತ್ರಿಪುಟಿ**

ಪ್ರಶ್ನೆ ತ್ರಿಪುಟಿಯೆಂದರೇನು ?

ಉತ್ತರ: ಪ್ರಾಣವೇ ಮೊದಲಾದ ಹತ್ತೊಂಭತ್ತು ಸಾಧನಗಳಲ್ಲಿ ಪಂಚಪ್ರಾಣಗಳನ್ನು ಬಿಟ್ಟು, ಉಳಿದ ಇಂದ್ರಿಯಾಂತಃಕರಣಾದಿಗಳಾದ ಚತುರ್ದಶ ಮುಖಗಳು, ತಮ್ಮ ತಮ್ಮ ವಿಷಯಗಳ, ತಮ್ಮ ತಮ್ಮ ದೇವತೆಗಳ ಸಹಾಯವನ್ನು ಕೋರುತ್ತವೆ. ದೇವತೆ ಮತ್ತು ವಿಷಯಗಳ ಸಹಾಯವಿಲ್ಲದೆ ಕೇವಲ ಮುಖ ಮಾತ್ರದಿಂದ ಭೋಗವು ಸಂಭವಿಸಲಾರದು. ಈ ಮುಖ, ವಿಷಯ, ದೇವತಾ ಈ ಮೂರರ ಸಮುದಾಯಕ್ಕೆ ತ್ರಿಪುಟಿಯೆನ್ನುತ್ತಾರೆ.

## ತ್ರಿಪುಟಿಯ ಸ್ವರೂಪ

| | ಮುಖ<br>ಅಧ್ಯಾತ್ಮ | ವಿಷಯ<br>ಅಧಿಭೂತ | ಅಧಿದೈವತ<br>ಅಧಿದೈವ |
|---|---|---|---|
| ೧ | ಶ್ರೋತ್ರೇಂದ್ರಿಯ | ಶಬ್ದ | ದಿಗ್ದೇವತೆ |
| ೨ | ತ್ವಗಿಂದ್ರಿಯ | ಸ್ಪರ್ಶ | ವಾಯು |
| ೩ | ನೇತ್ರೇಂದ್ರಿಯ | ರೂಪ | ಸೂರ್ಯ |
| ೪ | ರಸನೇಂದ್ರಿಯ | ರಸ | ವರುಣ |
| ೫ | ಘ್ರಾಣೇಂದ್ರಿಯ | ಗಂಧ | ಅಶ್ವಿನೀ ದೇವತೆಗಳು |
| ೬ | ವಾಗಿಂದ್ರಿಯ | ಮುಖ | ಅಗ್ನಿ |
| ೭ | ಹಸ್ತೇಂದ್ರಿಯ | ಲೇನಾ ದೇನಾ | ಇಂದ್ರ |
| ೮ | ಪಾದೇಂದ್ರಿಯ | ಗಮನ | ಉಪೇಂದ್ರ ಇಲ್ಲವೆ ವಾಮನ |
| ೯ | ಉಪಸ್ಥೇಂದ್ರಿಯ | ಗ್ರಾಮ್ಯಧರ್ಮ | ಪ್ರಜಾಪತಿ |
| ೧೦ | ಗುದೇಂದ್ರಿಯ | ಮಲವಿಸರ್ಜನೆ | ಯಮ ಇಲ್ಲವೆ ನಿರುತಿ |
| ೧೧ | ಮನಸ್ಸು | ಮನನ | ಚಂದ್ರ |
| ೧೨ | ಬುದ್ಧಿ | ಬೌದ್ಧವ್ಯ | ಬೃಹಸ್ಪತಿ ಇಲ್ಲವೆ ಬ್ರಹ್ಮ |
| ೧೩ | ಚಿತ್ತ | ಚಿಂತನ | ಕ್ಷೇತ್ರಜ್ಞ ಇಲ್ಲವೆ ಸಾಕ್ಷಿ |
| ೧೪ | ಅಹಂಕಾರ | ಅಹಂಕಾರ ವಿಷಯ | ರುದ್ರ |

## ವಾಗೀಂದ್ರಿಯದ ವಿಶೇಷ ವಿಚಾರ

ವಚನ ಕ್ರಿಯೆಯ ವಿಷಯಕ್ಕೆ ವಕ್ತವ್ಯವೆನ್ನುತ್ತಾರೆ ಅದು ವಚನ ಕ್ರಿಯಾ ದ್ವಾರಾ ವಾಗೀಂದ್ರಿಯಕ್ಕೆ ಅಧಿಭೂತವಾಗಿದೆ. ಇದೇ ಪ್ರಕಾರ ಯಾವ ಇಂದ್ರಿಯಗಳಿಗೆ ಯಾವ ಯಾವ ವಿಷಯವೋ, ಆಯಾ ವಿಷಯಗಳು ಆಯಾ ಇಂದ್ರಿಯಗಳಿಗೆ ತಮ್ಮ ತಮ್ಮ ಕ್ರಿಯಾ ದ್ವಾರಾ ಅಧಿಭೂತಗಳಾಗಿವೆ. ಒಂದೊಂದು ಸ್ಥಲದಲ್ಲಿ ವಚನಾದಿ ಕ್ರಿಯೆಯನ್ನು ಅಧಿಭೂತವೆನ್ನುತ್ತಾರೆ ಅದು ಸ್ಥೂಲ ದೃಷ್ಟಿಯವರಿಗೆ ಬೋಧಾರ್ಥವಾಗಿ ಹೇಳಲ್ಪಟ್ಟಿದೆ

ಪ್ರಶ್ನೆ ಚಿತ್ತಕ್ಕೆ ಅಧಿದೇವತೆ ಸಾಕ್ಷಿ ಎಂದರೇನು ?

ಉತ್ತರ ಸಾಕ್ಷಿ ಚೈತನ್ಯವು ಚಿತ್ತಕ್ಕೆ ಆಶ್ರಯವಾಗಿರುವುದರಿಂದ ಅದನ್ನು ಚಿತ್ತಕ್ಕೆ ಅಧಿದೇವತೆಯೆನ್ನುತ್ತಾರೆ ಆದುದರಿಂದಲೇ ಕೆಲವು ಆಚಾರ್ಯರು ಚಿಂತನರೂಪವಾದ ಸ್ಮೃತಿ ಜ್ಞಾನವು ಸಾಕ್ಷಿಗೆ ಆಶ್ರಿತ ವೆನ್ನುತ್ತಾರೆ ಕೆಲವರು ಚಿತ್ತಕ್ಕೆ ವಸುದೇವನೆನ್ನುತ್ತಾರೆ ಮತ್ತು ಚಿತ್ತಕ್ಕೆ ಅಧಿದೇವತೆಯು ವಾಸುದೇವನೆನ್ನುತ್ತಾರೆ

ಈ ಚತುರ್ದಶ ತ್ರಿಪುಟಿಗಳೂ ಪಂಚಪ್ರಾಣಗಳೂ ನೇರಿ ಹತ್ತೊಂಭತ್ತು ವಿರಾಡ್ರೂಪನಾದ ವಿಶ್ವನ ಮುಖಗಳಾಗುತ್ತವೆ

## ವಿಶ್ವ, ವಿರಾಟ್ ಮತ್ತು ಅಕಾರಗಳಿಗೆ ಅಭೇದ

ವಿರಾಟ್ ವಿಶ್ವರಿಗೆ ಅಭೇದವಿರುವಂತೆ ಓಂಕಾರದ ಪ್ರಥಮ ಮಾತ್ರೆ ಯಾದ ಅಕಾರಕ್ಕೂ ವಿರಾಡ್ರೂಪನಾದ ವಿಶ್ವನಿಗೂ ಅಭೇದವಿರುತ್ತದೆ. ಯಾಕೆಂದರೆ, ಬ್ರಹ್ಮದ ನಾಲ್ಕು ಪಾದಗಳಲ್ಲಿ ಪ್ರಥಮ ಪಾದವು ವಿರಾಟ್; ಆತ್ಮನ ನಾಲ್ಕು ಪಾದಗಳಲ್ಲಿ ಪ್ರಥಮ ಪಾದವು ವಿಶ್ವ, ಇದರಂತೆ ಓಂಕಾರದ ಮಾತ್ರಾರೂಪವಾದ ನಾಲ್ಕು ಪಾದಗಳಲ್ಲಿ ಪ್ರಥಮ ಪಾದವು ಅಕಾರ. ಈ ಪ್ರಕಾರ ಪ್ರಥಮ ಎಂಬ ಸಮಾನತೆಯಿಂದ ಮೂರರಲ್ಲಿಯೂ ಸಮಾನ ಧರ್ಮವಿರುವುದರಿಂದ ವಿಶ್ವ, ವಿರಾಟ್, ಅಕಾರಗಳಿಗೆ ಅಭೇದವೆಂದು ಚಿಂತಿಸಬೇಕು

## ವಿಶ್ವ ತೈಜಸರ ಪರಸ್ಪರ ವಿಲಕ್ಷಣ

ವಿಶ್ವನಿಗೆ ಹೇಳಿದ ಸಪ್ತಾಂಗಗಳೂ, ಹತ್ತೊಂಭತ್ತು ಮುಖಗಳೂ ತೈಜಸನಿಗೂ ಇರುವವೆಂದು ತಿಳಿಯಬೇಕು ಆದರೂ ಆ ಎರಡರಲ್ಲಿ ವಿಶ್ವನ ಅಂಗ ಮತ್ತು ಮುಖಗಳು ಈಶ್ವರ ರಚಿತವಾಗಿವೆ; ಅವು ಬಾಹ್ಯದಲ್ಲಿ ಇರುತ್ತವೆ. ತೈಜಸನ ಅಂಗ ಮತ್ತು ಮುಖಗಳು ಜೀವರಚಿತಗಳಾಗಿವೆ ಅಂದರೆ ಮನೋಮಯಗಳಾಗಿವೆ. ವಿಶ್ವನ ಭೋಗವು ಸ್ಥೂಲ, ತೈಜಸನ ಭೋಗವು ಸೂಕ್ಷ್ಮವೆಂದು ತಿಳಿಯಬೇಕು.

ಯದ್ಯಪಿ ಭೋಗವೆಂದರೆ ಸುಖ ದುಃಖಗಳ ಜ್ಞಾನವಾದುದರಿಂದ ಅದರಲ್ಲಿ ಸ್ಥೂಲ ಸೂಕ್ಷ್ಮತೆಗಳೆಂಬ ಭೇದವು ಸಂಭವಿಸಲಾರದು. ತಥಾಪಿ ಬಾಹ್ಯವಾದ ಶಬ್ದಾದಿ ವಿಷಯ ಸಂಬಂಧದಿಂದ ಉಂಟಾಗುವ ಸುಖ ದುಃಖಗಳ ಸಾಕ್ಷಾತ್ಕಾರವು ಸ್ಥೂಲವೆನಿಸುತ್ತದೆ. ಮಾನಸಿಕವಾದ ಶಬ್ದಾದಿಗಳ ಸಂಬಂಧದಿಂದ ಆಗುವ ಭೋಗವು ಸೂಕ್ಷ್ಮವೆನಿಸುತ್ತದೆ. ವಿಶ್ವನ ಬುದ್ಧಿಯು ಹೊರಗೆ ಹೋಗುತ್ತದೆ, ತೈಜಸನ ಬುದ್ಧಿಯು ಹೊರಗೆ ಹೋಗುವುದಿಲ್ಲ. ಈ ಕಾರಣದಿಂದ ವಿಶ್ವನು ಸ್ಥೂಲಕ್ಕೆ ಭೋಕ್ತನೆಂದೂ, ಬಹಿಃಪ್ರಜ್ಞನೆಂದೂ, ತೈಜಸನು ಸೂಕ್ಷ್ಮಕ್ಕೆ ಭೋಕ್ತನೆಂದೂ, ಅಂತ ಪ್ರಜ್ಞನೆಂದೂ ಶ್ರುತಿಯಲ್ಲಿ ಹೇಳಿದೆ

## ತೈಜಸ, ಹಿರಣ್ಯಗರ್ಭ, ಉಕಾರಗಳಿಗೆ ಅಭೇದ

ಆತ್ಮನ ದ್ವಿತೀಯ ಪಾದವು ತೈಜಸ; ಬ್ರಹ್ಮದ ದ್ವಿತೀಯ ಪಾದವು ಹಿರಣ್ಯಗರ್ಭ, ಓಂಕಾರದ ದ್ವಿತೀಯ ಪಾದವು ಉಕಾರ. ಈ ಪ್ರಕಾರ ದ್ವಿತೀಯತ್ವವು ಮೂರರಲ್ಲಿ ಸಮಾನವಾದುದರಿಂದ ತೈಜಸ, ಹಿರಣ್ಯಗರ್ಭ, ಉಕಾರ ಈ ಮೂರೂ ಒಂದೇ ಎಂದು ತಿಳಿಯಬೇಕು.

## ಪ್ರಾಜ್ಞ, ಈಶ್ವರ, ಮಕಾರಗಳಿಗೆ ಅಭೇದ

ಪ್ರಾಜ್ಞನು ಆತ್ಮನ ತೃತೀಯ ಪಾದ; ಈಶ್ವರನು ಬ್ರಹ್ಮಕ್ಕೆ ತೃತೀಯ ಪಾದ; ಮಕಾರವು ಓಂಕಾರಕ್ಕೆ ತೃತೀಯ ಪಾದ. ತೃತೀಯ ಎಂಬ

ಸಮಾನ ಧರ್ಮವು ಮೂರರಲ್ಲಿಯೂ ಇರುವುದರಿಂದ, ಪ್ರಾಜ್ಞ, ಈಶ್ವರ, ಮಕಾರ ಈ ಮೂರೂ ಒಂದೇ ಎಂದು ಚಿಂತಿಸಬೇಕು

## ಪ್ರಜ್ಞಾನ ಘನ ಎಂಬ ವಿಷಯದ ವಿವೇಚನೆ

ಹಿಟ್ಟನ್ನು ನೀರಿನಲ್ಲಿ ಕಲಸಿದರೆ ಮುದ್ದೆಯಾಗಿ ಏಕರೂಪವಾಗುವಂತೆ, ಮಳೆಯ ಅನಂತ ಹನಿಗಳು ತಟಾಕದಲ್ಲಿ ಏಕರೂಪವಾಗುವಂತೆ, ಜಾಗ್ರತ್ತು ಜ್ಞಾನವೂ ಸ್ವಪ್ನ ಜ್ಞಾನವೂ ಸುಷುಪ್ತಿಯಲ್ಲಿ ಏಕಾವಿದ್ಯೆ ರೂಪವಾಗುತ್ತದೆ. ಈ ಅವಿದ್ಯೆಯಲ್ಲಿ ಇರುವ ಅಧಿಷ್ಠಾನ ಕೂಟಸ್ಥ ಸಹಿತ ಪ್ರತಿಬಿಂಬ ರೂಪ ಪ್ರಾಜ್ಞನೆಂಬ ಹೆಸರುಳ್ಳ ಜೀವನನ್ನು "ಪ್ರಜ್ಞಾನಘನ"ನೆನ್ನುತ್ತಾರೆ. ವಿಶ್ವ ತೈಜಸರ ಭೋಗದಂತೆ ಪ್ರಾಜ್ಞನ ಭೋಗಕ್ಕೂ ತ್ರಿಪುಟಿ ಇದೆ. ಚಿತ್ಪ್ರತಿಬಿಂಬ ಸಹಿತ ಅವಿದ್ಯೆಯೇ ಅಧ್ಯಾತ್ಮ; ಅಜ್ಞಾನಾವೃತವಾದ ಆತ್ಮಾನಂದವು ಅಧಿಭೂತ ಈಶ್ವರನು ಆದಿದೈವ.

## ವಿಶ್ವ ತೈಜಸ ಪ್ರಾಜ್ಞ ಈ ಮೂವರಿಗೆ ಏಕತೆ
## ತುರೀಯ ಈಶ್ವರ ಸಾಕ್ಷಿ ಇವುಗಳ ಏಕತೆ

ವಿಶ್ವಾದಿತ್ರಯದಲ್ಲಿ ತೋರುವ ಭೇದವು ಉಪಾಧಿ ದೃಷ್ಟಿಯಿಂದಲೇ ಆಗಿದೆ ಏಕೆಂದರೆ ವಿಶ್ವನಿಗೆ ಸ್ಥೂಲ, ಸೂಕ್ಷ್ಮ, ಅಜ್ಞಾನಗಳೆಂಬ ಮೂರು ಉಪಾಧಿಗಳು. ತೈಜಸನಿಗೆ ಸೂಕ್ಷ್ಮ, ಅಜ್ಞಾನಗಳೆಂಬ ಎರಡು ಉಪಾಧಿಗಳು. ಪ್ರಾಜ್ಞನಿಗೆ ಅಜ್ಞಾನವೆಂಬ ಒಂದೇ ಉಪಾಧಿ ಈ ರೀತಿ ಉಪಾಧಿಗಳ ನ್ಯೂನಾಧಿಕತೆಯಿಂದ ಮೂವರಿಗೆ ಭೇದವು ಕಂಡುಬರುತ್ತದೆ. ಈ ಉಪಾಧಿಯಿಂದಲ್ಲದೆ ಪಾರಮಾರ್ಥಿಕದಿಂದ ಭೇದವಿಲ್ಲ

ಈ ಮೂರರಲ್ಲಿ ಅನುಗತವಾದ ಚೈತನ್ಯಕ್ಕೆ ಪರಮಾರ್ಥದಿಂದ ಮೂರು ಉಪಾಧಿಗಳ ಸಂಬಂಧವೇ ಇಲ್ಲ ಈ ಮೂರು ಉಪಾಧಿಗಳ ಅಧಿಷ್ಠಾನವಾದ ತುರೀಯ ಚೈತನ್ಯವು ಬಹಿಃಪ್ರಜ್ಞವಲ್ಲ; ಅಂತಃ ಪ್ರಜ್ಞವೂ ಅಲ್ಲ; ಪ್ರಜ್ಞಾನ ಘನವೂ ಅಲ್ಲ. ಜ್ಞಾನೇಂದ್ರಿಯಗಳಿಗೇ ಆಗಲಿ, ಕರ್ಮೇಂದ್ರಿಯಗಳಿಗೇ ಆಗಲಿ. ಶಬ್ದಕ್ಕೇ ಆಗಲಿ, ಇಲ್ಲವೇ ಬುದ್ಧಿಗೇ ಆಗಲಿ, ವಿಷಯವಲ್ಲ ಈ ರೀತಿಯಾದ ತುರೀಯವನ್ನು ಪರಮಾತ್ಮನ ಚತುರ್ಥ ಪಾದವಾದ ಈಶ್ವರ ಸಾಕ್ಷಿ ಶುದ್ಧ ಬ್ರಹ್ಮ ರೂಪವೆಂದು ತಿಳಿ.

## ಓಂಕಾರಕ್ಕೂ, ಆತ್ಮನಿಗೂ, ಬ್ರಹ್ಮಕ್ಕೆ ಇರುವ ಪಾದಗಳಿಂದ ಅಭೇದ

ಹಿಂದೆ ಹೇಳಿದ ಆತ್ಮ ಸ್ವರೂಪವು ಪರಮಾರ್ಥ ರೂಪವೆಂತಲೂ, ಅಪರಮಾರ್ಥ ರೂಪವೆಂತಲೂ ಎರಡು ವಿಧ. ಇವುಗಳಲ್ಲಿ ವಿಶ್ವಾದಿ ಮೂರು ಪಾದಗಳು ಅಪರಮಾರ್ಥ ರೂಪಗಳು. ನಾಲ್ಕನೆಯದಾದ ತುರೀಯ ಪಾದವು ಪರಮಾರ್ಥ ರೂಪವೆಂದು ತಿಳಿಯಬೇಕು.

ಆತ್ಮನಿಗೆ ಎರಡು ರೂಪಗಳಿರುವಂತೆ ಓಂಕಾರಕ್ಕೂ ಎರಡು ರೂಪಗಳಿವೆ. ಅವುಗಳಲ್ಲಿ ಅಕಾರದಿಂದ ಮಕಾರಾಂತದವರೆಗೆ ಇರುವ ತ್ರಿಮಾತ್ರರೂಪ ವರ್ಣವು ಅಪರಮಾರ್ಥ ರೂಪವು ಮತ್ತು ತ್ರಿಮಾತ್ರಗಳಲ್ಲಿ ವ್ಯಾಪಕವಾದ ಅಸ್ತಿ ಭಾತಿ ಪ್ರಿಯರೂಪವಾದ ಅಧಿಷ್ಠಾನ ಚೈತನ್ಯವು ಪರಮಾರ್ಥ ರೂಪವು. ಓಂಕಾರದ ಪರಮಾರ್ಥ ರೂಪಕ್ಕೆ ಶ್ರುತಿಯಲ್ಲಿ ಅಮಾತ್ರವೆನ್ನುತ್ತಾರೆ. ಮಾತ್ರಾ ವಿಭಾಗ ರಹಿತಕ್ಕೆ ಅಮಾತ್ರಾ ಎನ್ನುತ್ತಾರೆ. ಈ ರೀತಿಯಾಗಿ ಎರಡು ರೂಪವುಳ್ಳ ಓಂಕಾರಕ್ಕೆ ಎರಡು ರೂಪಗಳಿರುವ ಆತ್ಮನೊಂದಿಗೆ ಅಭೇದವೆಂದು ತಿಳಿಯಬೇಕು.

ಪ್ರಥಮ ಪಾದವಾದುದರಿಂದ ಸಮಷ್ಟಿ ವ್ಯಷ್ಟಿ ಸ್ಥೂಲ ಸೃಷ್ಟಿಸಹಿತವಾದ ವಿರಾಟ್, ವಿಶ್ವ, ಅಕಾರಗಳಿಗೆ ಅಭೇದವನ್ನು ತಿಳಿಯಬೇಕು. ದ್ವಿತೀಯ ಪಾದವಾದುದರಿಂದ ಸಮಷ್ಟಿ ವ್ಯಷ್ಟಿ ಸೂಕ್ಷ್ಮ ಸೃಷ್ಟಿ ಸಹಿತವಾದ ಹಿರಣ್ಯ ಗರ್ಭ, ತೈಜಸ, ಉಕಾರಗಳಿಗೆ ಅಭೇದವೆಂದು ತಿಳಿಯಬೇಕು ತೃತೀಯ ಪಾದವಾದುದರಿಂದ ಸಮಷ್ಟಿ ವ್ಯಷ್ಟಿ ಕಾರಣೋಪಾಧಿ ಸಹಿತವಾದ ಈಶ್ವರ, ಪ್ರಾಜ್ಞ, ಮಕಾರಗಳಿಗೆ ಅಭೇದವೆಂದು ತಿಳಿಯಬೇಕು. ಚತುರ್ಥ ಪಾದ ವಾದುದರಿಂದ ಸಾಕ್ಷಿ ತುರೀಯ ಅಮಾತ್ರಗಳಿಗೆ ಅಭೇದವನ್ನು ತಿಳಿಯ ಬೇಕು

### ಲಯ ಚಿಂತನೆಗೆ ಅನುವಾದ
### ಒಂದೊಂದು ಮಾತ್ರಾ ರೂಪಕ್ಕೆ ಅನ್ಯಮಾತ್ರಾ ರೂಪತಾ

ವಿರಾಟ್, ವಿಶ್ವವಾದ ಅಕಾರವು ಹಿರಣ್ಯಗರ್ಭ, ತೈಜಸವಾದ ಉಕಾರಕ್ಕಿಂತ ಭಿನ್ನವಲ್ಲವೆಂದು ತಿಳಿದು ಆ ಹಿರಣ್ಯಗರ್ಭ, ತೈಜಸ ರೂಪ

ಅಕಾರದ ಲಯವನ್ನು ಈಶ್ವರ ಪ್ರಾಜ್ಞರೂಪ ಮಕಾರದಲ್ಲಿ ಮಾಡಬೇಕು ಅದರಂತೆ ಈಶ್ವರ ಪ್ರಾಜ್ಞರೂಪ ಮಕಾರದ ಲಯವನ್ನು ಈಶ ಸಾಕ್ಷಿ ತುರೀಯ ರೂಪವಾದ ಅಮಾತ್ರೆಯಲ್ಲಿ ಮಾಡಬೇಕು ಏಕೆಂದರೆ, ಸ್ಥೂಲವು ಸೂಕ್ಷ್ಮದಲ್ಲಿ, ಸೂಕ್ಷ್ಮವು ಕಾರಣದಲ್ಲಿ ಲಯವಾಗುತ್ತವೆ ಆ ಕಾರಣವು ಶುದ್ಧ ಚೈತನ್ಯದಲ್ಲಿ ಕಲ್ಪಿತವಾಗಿದೆ. ಯಾವುದು ಯಾವುದರಲ್ಲಿ ಕಲ್ಪಿತವೋ ಅದು ಅದರ ಸ್ವರೂಪವಾಗಿಯೇ ಇದೆ; ಬೇರೆಯಲ್ಲ.

ಈ ರೀತಿಯಾಗಿ ಸರ್ವ ಕಲ್ಪಿತಕ್ಕೆ ಅಧಿಷ್ಠಾನವಾಗಿ ಪರಮಾರ್ಥ ರೂಪವಾದ, ಚತುರ್ಥ ಪಾದವಾದ ಈಶ, ಸಾಕ್ಷಿ, ತುರೀಯ, ಅಮಾತ್ರ ಚೈತನ್ಯದಲ್ಲಿ ಸಮಷ್ಟಿ ವ್ಯಷ್ಟಿಗಳು, ಸ್ಥೂಲ ಸೂಕ್ಷ್ಮ ಕಾರಣ ಪ್ರಪಂಚಗಳು, ಈಶ್ವರ ಹಿರಣ್ಯಗರ್ಭ ವಿರಾಟ್‌ಗಳು, ಪ್ರಾಜ್ಞ ತೈಜಸ ವಿಶ್ವರುಗಳು, ಅಕಾರ ಉಕಾರ ಮಕಾರಗಳು – ಇವೆಲ್ಲ ಕಲ್ಪಿತವಾದುದರಿಂದ ಲಯವಾಗುತ್ತವೆ ಈ ರೀತಿ ಅಮಾತ್ರರೂಪ ಶುದ್ಧ ಚೈತನ್ಯವೇ ನಾನು ಎಂದು ಏಕಾಗ್ರ ಚಿತ್ತದಿಂದ ಚಿಂತಿಸಬೇಕು.

ಸ್ಥಾವರ ಜಂಗಮ ರೂಪವಾದ, ನಿತ್ಯ ಮುಕ್ತಾ ಸಂಗ ಪರಬ್ರಹ್ಮವಾದ ಓಂಕಾರದ ಪರಮಾರ್ಥ ಸ್ವರೂಪವೇ ನಾನು ಈ ರೀತಿ ತನ್ನನ್ನು ಚಿಂತಿಸುವುದರಿಂದ ಜ್ಞಾನೋದಯವಾಗುತ್ತದೆ. ಆದುದರಿಂದ ಈ ಓಂಕಾರದ ನಿರ್ಗುಣೋಪಾಸನೆಯು ಜ್ಞಾನ ದ್ವಾರಾ ಮುಕ್ತಿ ರೂಪ ಫಲವನ್ನು ಕೊಡುವುದಾಗಿದೆ ಇತರೆ ಉಪಾಸನೆಗಳಿಗಿಂತ ಇದು ಉತ್ತಮವಾಗಿದೆ.

## ಓಂಕಾರ ಚಿಂತನದಲ್ಲಿ ಪರಮಹಂಸರಿಗೆ ಅಧಿಕಾರ

ಹಿಂದೆ ಹೇಳಿದ ಪ್ರಕಾರ ಓಂಕಾರ ಸ್ವರೂಪವನ್ನು ಅರಿತವನೇ ಮುನಿ. ಅರಿಯದಿದ್ದವನು ಮುನಿಯಲ್ಲ. ಏಕೆಂದರೆ, ಮನನ ಮಾಡಬಲ್ಲವನು ಮುನಿಯೆನಿಸುತ್ತಾನೆ. ಇಲ್ಲಿ ಓಂಕಾರ ಚಿಂತನೆಯು ಮನನ ರೂಪವಾಗಿದೆ. ಆದುದರಿಂದ ಓಂಕಾರ ಚಿಂತನ ರೂಪ ಮನನವಿಲ್ಲದವನು ಮುನಿಯಲ್ಲ. ಇಲ್ಲಿಯವರೆಗೆ ಮಾಂಡೂಕ್ಯೋಪನಿಷತ್ತಿನ ರೀತಿಯಾಗಿ ಓಂಕಾರದ ಚಿಂತನೆ

ಯನ್ನು ಸಂಕ್ಷೇಪವಾಗಿ ಹೇಳಲಾಗಿದೆ. ಮತ್ತು ನೃಸಿಂಹತಾಪನೀಯಾದಿ ಉಪನಿಷತ್ತುಗಳಲ್ಲಿ ಈ ವಿಷಯವು ಬೇರೆ ಪ್ರಕಾರವಾಗಿ ವರ್ಣಿಸಲ್ಪಟ್ಟಿದೆ.

ಓಂಕಾರ ಚಿಂತನವು ಪರಮಹಂಸರ ಗೌಪ್ಯಧನವಾಗಿದೆ ಬಹಿರ್ಮುಖ ಪುರುಷನಿಗೆ ಇದರಲ್ಲಿ ಅಧಿಕಾರವಿಲ್ಲ. ಇದರಲ್ಲಿ ಅತ್ಯಂತ ಅಂತರ್ಮುಖನಾದ ವನಿಗೆ ಮಾತ್ರ ಅಧಿಕಾರ ಅನೇಕ ಕಡೆಗಳಲ್ಲಿ ಗೃಹಸ್ಥನಿಗೆ ಅಧಿಕಾರವಿಲ್ಲ. ಧನ ಪುತ್ರ ಸ್ತ್ರೀಸಂಗ ರಹಿತನಾದ ಪರಮಹಂಸನಿಗೆ ಅಧಿಕಾರವೆಂದು ಹೇಳಿದ ತಾತ್ಪರ್ಯವನ್ನು ಸರಿಯಾಗಿ ತಿಳಿದುಕೊಳ್ಳಬೇಕು.

## ಪ್ರಣವೋಪಾಸನೆಯ ಫಲ

ಪೂರ್ವ ಪ್ರಕಾರವಾಗಿ ಓಂಕಾರವನ್ನು ಬ್ರಹ್ಮರೂಪವಾಗಿ ಧ್ಯಾನಮಾಡು ವುದರಿಂದ ಜ್ಞಾನ ದ್ವಾರಾ ಮೋಕ್ಷವಾಗುವುದು ಎಂಬ ವಿಷಯದಲ್ಲಿ ಸಂದೇಹವಿಲ್ಲ. ಆದರೆ ಇಹಲೋಕದ ಭೋಗದಲ್ಲಿಯೂ, ಇಲ್ಲವೇ ಬ್ರಹ್ಮ ಲೋಕದ ಭೋಗದಲ್ಲಿಯೂ ಬಯಕೆ ಇದ್ದ ಪುರುಷನಿಗೆ ತೀವ್ರ ವೈರಾಗ್ಯ ವಿಲ್ಲದಿದ್ದರೂ ಹಠದಿಂದ ಕಾಮನೆಯನ್ನು ಅಣಗಿಸಿ, ಧನ ಪುತ್ರಾದಿಗಳನ್ನು ತ್ಯಜಿಸಿ, ಪರಮಹಂಸ ಗುರೂಪದೇಶದಿಂದ ಓಂಕಾರರೂಪ ಬ್ರಹ್ಮಧ್ಯಾನವು ಲಭಿಸಿದರೂ ಅವನಿಗಿರುವ ಭೋಗದ ಬಯಕೆಯು ಜ್ಞಾನಕ್ಕೆ ಪ್ರತಿಬಂಧಕ ವಾದುದರಿಂದ ಜ್ಞಾನವು ಉಂಟಾಗಲಾರದು. ಈ ರೀತಿ ಧ್ಯಾನವನ್ನು ಮಾಡುತ್ತಿದ್ದ ಶರೀರ ತ್ಯಾಗಾನಂತರ ಅವನಿಗೆ ಮತ್ತೊಂದು ಶರೀರ ಪ್ರಾಪ್ತಿಯಾಗುತ್ತದೆ.

ಇಹಲೋಕದ ಭೋಗ ಕಾಮನೆಯನ್ನು ಅಣಗಿಸಿ ಧ್ಯಾನದಲ್ಲಿ ನಿಮಗ್ನನಾದವನಿಗೆ ಈ ಲೋಕದಲ್ಲಿ ಅತ್ಯಂತ ವಿಭೂತಿ ಸಂಪನ್ನ ಪವಿತ್ರ ಕುಲದಲ್ಲಿ ಜನ್ಮವಾಗುತ್ತದೆ. ಅಲ್ಲಿ ಪೂರ್ವದ ಕಾಮನೆಗೆ ಅನುಸಾರವಾಗಿ ಸಕಲ ಭೋಗಗಳು ಪ್ರಾಪ್ತಿಯಾಗುತ್ತವೆ. ಮತ್ತು ಪೂರ್ವಜನ್ಮದಲ್ಲಿ ಮಾಡಿದ ಧ್ಯಾನ ಸಂಸ್ಕಾರದಿಂದ ಪುನರಪಿ ವಿಚಾರದಲ್ಲಿ ಇಲ್ಲವೇ ಧ್ಯಾನದಲ್ಲಿ ಪ್ರವೃತ್ತಿಯುಂಟಾಗುತ್ತದೆ. ತದನಂತರ ಜ್ಞಾನವಾಗಿ ಮೋಕ್ಷವಾಗು ತ್ತದೆ.

ಬ್ರಹ್ಮಲೋಕದ ಭೋಗದ ಕಾಮನೆಯನ್ನು ಅಣಗಿಸಿ ಓಂಕಾರ ರೂಪ ಬ್ರಹ್ಮಧ್ಯಾನದಲ್ಲಿ ನಿಮಗ್ನನಾದವನು ಶರೀರವನ್ನು ಬಿಟ್ಟ ಮೇಲೆ ಬ್ರಹ್ಮಲೋಕಕ್ಕೆ ಹೋಗಿ ಅಲ್ಲಿ ಮನುಷ್ಯರಿಗೆ, ಪಿತೃಗಳಿಗೆ, ದೇವತೆಗಳಿಗೆ ದುರ್ಲಭವಾದ ಸ್ವತಂತ್ರಾನಂದವನ್ನು ಭೋಗಿಸುತ್ತಾನೆ ಸತ್ಯಸಂಕಲ್ಪಾದಿಗಳಾದ ಹಿರಣ್ಯಗರ್ಭನ ವಿಭೂತಿಗಳೆಲ್ಲವೂ ಅವನಿಗೆ ಸೂರೆ

## ಬ್ರಹ್ಮಲೋಕದ ಮಾರ್ಗ ವರ್ಣನೆ

ಈ ಮಾರ್ಗದ ವಿಚಾರವು ಶುಕ್ಲಯಜುರ್ವೇದದ ಈಶಾವಾಸ್ಯೋಪನಿಷತ್ತಿನಲ್ಲಿ ವಿವರಿಸಲ್ಪಟ್ಟಿದೆ

ಬ್ರಹ್ಮೋಪಾಸನೆಯಲ್ಲಿ ತತ್ಪರನಾದ ಪುರುಷನಿಗೆ ಮರಣ ಸಮಯದಲ್ಲಿ ಇಂದ್ರಿಯ, ಅಂತಃಕರಣಗಳೆಲ್ಲವೂ ಮೂರ್ಛಿತವಾಗುತ್ತವೆ. ಅವುಗಳಿಗ ಎಲ್ಲಿಗೆ ಹೋಗಬೇಕೆಂಬ ಸಾಮರ್ಥ್ಯವಿರುವುದಿಲ್ಲ. ಮತ್ತು ಲಿಂಗಶರೀರವನ್ನು ತೆಗೆದುಕೊಂಡು ಹೋಗುವ ಯಮಭಟರು ಅವನ ಹತ್ತಿರ ಬರಲಾರರು. ಆ ಸಮಯದಲ್ಲಿ ಅಗ್ನಿಯ ಅಭಿಮಾನಿ ದೇವತೆಯು ಮರಣ ಸಮಯದಲ್ಲಿ ಸ್ಥೂಲ ಶರೀರದಿಂದ ಅವನನ್ನು ಬೇರ್ಪಡಿಸಿ, ತನ್ನ ಲೋಕಕ್ಕೆ ತೆಗೆದುಕೊಂಡು ಹೋಗುತ್ತದೆ

ಆ ಅಗ್ನಿಲೋಕದಿಂದ ಕ್ರಮವಾಗಿ ದಿನಾಭಿಮಾನಿ ದೇವತಾ, ಶುಕ್ಲಪಕ್ಷಾಭಿಮಾನಿ ದೇವತಾ, ಉತ್ತರಾಯಣಾಭಿಮಾನಿ ದೇವತಾ, ಸಂವತ್ಸರಾಭಿಮಾನಿ ದೇವತಾ, ದೇವಲೋಕಾಭಿಮಾನಿ ದೇವತಾ, ವಾಯು ದೇವತಾ, ಸೂರ್ಯದೇವತಾ, ಚಂದ್ರದೇವತಾ, ವಿದ್ಯುದ್ದೇವತಾ – ಇವೆಲ್ಲವು ತಮ್ಮ ತಮ್ಮ ಲೋಕಕ್ಕೆ ತೆಗೆದುಕೊಂಡು ಹೋಗುತ್ತವೆ

ವಿದ್ಯುಲ್ಲೋಕಕ್ಕೆ ಹೋದನಂತರ ಅಲ್ಲಿಗೆ ಹಿರಣ್ಯಗರ್ಭನ ಆಜ್ಞೆಯನ್ನು ಪಡೆದು ದಿವ್ಯರೂಪನೂ, ಹಿರಣ್ಯಗರ್ಭವಾಸಿಯೂ ಆದ ಹಿರಣ್ಯಗರ್ಭನಿಗೆ ಸಮಾನನಾದ ಪುರುಷನು ಎದುರಿಗೆ ಬಂದು ಉಪಾಸಕನನ್ನು ಸ್ವಾಗತಿಸಿ ಅವನನ್ನು ವಿದ್ಯುಲ್ಲೋಕದಿಂದ ವರುಣಲೋಕಕ್ಕೆ ತೆಗೆದುಕೊಂಡು ಹೋಗುತ್ತಾನೆ. ಆಗ ವಿದ್ಯುದ್ದೇವತೆಯು ಅವನ ಸಂಗಡವೇ ಇರುತ್ತಾನೆ. ಈ ಕ್ರಮವಾಗಿ ವರುಣಲೋಕದಿಂದ ಇಂದ್ರಲೋಕಕ್ಕೆ, ಇಂದ್ರಲೋಕದಿಂದ ಪ್ರಜಾಪತಿಲೋಕಕ್ಕೆ ತೆಗೆದುಕೊಂಡು ಹೋಗುತ್ತಾನೆ.

ಅಲ್ಲಿಂದ ಮುಂದಕ್ಕೆ ಇವರಿಬ್ಬರಿಗೆ ಪ್ರಜಾಪತಿ ಬ್ರಹ್ಮಲೋಕಕ್ಕೆ ಹೋಗುವ ಸಾಮರ್ಥ್ಯವಿಲ್ಲ. ಆದುದರಿಂದ ಆ ದಿವ್ಯಪುರುಷನೊಂದಿಗೆ ಆ ಉಪಾಸಕನು ಬ್ರಹ್ಮಲೋಕಕ್ಕೆ ಹೋಗುತ್ತಾನೆ

ಆ ಬ್ರಹ್ಮಲೋಕಕ್ಕೆ ಅಧಿಪತಿ ಹಿರಣ್ಯಗರ್ಭ. ಹಿರಣ್ಯಗರ್ಭನೆಂದರೆ ಸೂಕ್ಷ್ಮ ಸಮಷ್ಟಿಯ ಅಭಿಮಾನಿಯಾದ ಚೈತನ್ಯ. ಅವನಿಗೆ ಕಾರ್ಯ ಬ್ರಹ್ಮವೆಂದು ಮತ್ತೊಂದು ಹೆಸರು ಈ ಕಾರ್ಯಬ್ರಹ್ಮನ ನಿವಾಸ ಸ್ಥಾನವೇ ಬ್ರಹ್ಮಲೋಕ ಇಲ್ಲವೇ ಸತ್ಯಲೋಕವೆನ್ನುತ್ತಾರೆ

## ಸಾಯುಜ್ಯ ಮೋಕ್ಷ ವರ್ಣನ

ಪೂರ್ವ ರೀತಿಯಾಗಿ ಓಂಕಾರದ ಉಪಾಸನೆಯು ಶುದ್ಧ ಬ್ರಹ ರೂಪದಿಂದ ಹೇಳಲ್ಪಟ್ಟಿದೆ ಆದುದರಿಂದ ಆ ಉಪಾಸನೆಗೆ ಶುದ್ಧ ಬ್ರಹ್ಮ ಪ್ರಾಪ್ತಿಯಾಗಬೇಕು. ಆದರೂ ಶುದ್ಧ ಬ್ರಹ್ಮ ಪ್ರಾಪ್ತಿಯಾದರೂ ಅದು ಜ್ಞಾನದಿಂದಲೇ ಎಂಬುದು ವೇದಾಂತ ಸಿದ್ಧಾಂತ, ಅದು ಉಪಾಸನೆಗೆ ಸಿಗುವುದಲ್ಲ ಕಾಮನಾರೂಪ ಪ್ರತಿಬಂಧದಿಂದ ಜ್ಞಾನೋತ್ಪತ್ತಿಯಾಗದವನಿಗೆ ಕಾರ್ಯ ಬ್ರಹ್ಮಪ್ರಾಪ್ತಿಯೆಂಬ ಸಾಯುಜ್ಯ ಮೋಕ್ಷವಾಗುತ್ತದೆ.

ಪ್ರಶ್ನೆ · ಸಾಯುಜ್ಯ ಮೋಕ್ಷವೆಂದರೇನು ?

ಉತ್ತರ. ಚತುರ್ವಿಧ ಮುಕ್ತಿಗಳಲ್ಲಿ, ರಾಜನ ರಾಷ್ಟ್ರದಲ್ಲಿ ಪ್ರಜೆಗಳು ಇರುವಂತೆ ಈಶ್ವರನ ಲೋಕದಲ್ಲಿ ವಾಸಮಾಡುವುದಕ್ಕೆ ಸಾಲೋಕ್ಯ ಮುಕ್ತಿಯೆನ್ನುತ್ತಾರೆ ರಾಜನ ಸೇವಕರಂತೆ ಈಶ್ವರನ ಸಮೀಪದಲ್ಲಿ ಇರುವುದಕ್ಕೆ ಸಾಮೀಪ್ಯ ಮುಕ್ತಿಯೆನ್ನುತ್ತಾರೆ. ರಾಜನ ಸಹೋದರರಂತೆ ಈಶ್ವರನ ಸಮಾನರೂಪದ ಪ್ರಾಪ್ತಿಗೆ ಸಾರೂಪ್ಯ ಮುಕ್ತಿಯೆನ್ನುತ್ತಾರೆ. ರಾಜನ ಜೇಷ್ಠ ಪುತ್ರನಂತೆ, ಈಶ್ವರನಂತೆ ಸತ್ಯ ಸಂಕಲ್ಪಾದಿ ಐಶ್ವರ್ಯ ಪ್ರಾಪ್ತಿಗೆ ಸಾರ್ಷ್ಟಿ ಅಥವಾ ಸಾಯುಜ್ಯ ಮುಕ್ತಿಯೆನ್ನುತ್ತಾರೆ. ಈ ರೀತಿ ಶಾಸ್ತ್ರದಲ್ಲಿ ಫಲರೂಪವಾಗಿ ಶ್ರೇಷ್ಠವಾದ ಚತುರ್ವಿಧ ಮುಕ್ತಿಯು ಹೇಳಲ್ಪಟ್ಟಿದೆ. ಇವುಗಳಲ್ಲಿ ಕೊನೆಯದು ಅತ್ಯಂತ ಶ್ರೇಷ್ಠವಾದುದರಿಂದ ಅದಕ್ಕೆ ಸಾಯುಜ್ಯ ಮುಕ್ತಿಯೆನ್ನುತ್ತಾರೆ.

ಬ್ರಹ್ಮಲೋಕವನ್ನು ಹೊಂದಿದ ಉಪಾಸಕನ ಯೋಗ್ಯತೆಯು

ಹಿರಣ್ಯಗರ್ಭನಿಗೆ ಸಮಾನವಾದುದು. ಅವನಿಗೆ ಹಿರಣ್ಯಗರ್ಭನ ಸರ್ವ ವಿಭೂತಿಗಳೂ ಲಭಿಸುತ್ತವೆ ಅವನ ಸಂಕಲ್ಪವು ಸತ್ಯವಾಗುತ್ತದೆ. ಅವನು ಬಯಸಿದ ಶರೀರವು ದೊರೆಯುತ್ತದೆ. ಅವನು ಬಯಸಿದ ಸರ್ವ ಭೋಗಗಳೂ ಸಂಕಲ್ಪ ಮಾತ್ರದಿಂದ ತತ್ಕಾಲವೇ ಲಭಿಸುತ್ತವೆ. ಅವನು ಒಂದೇ ಸಮಯದಲ್ಲಿ ಸಹಸ್ರ ಶರೀರಗಳಲ್ಲಿದ್ದು ಬೇರೆ ಬೇರೆ ಭೋಗಗಳನ್ನು ಬಯಸಿದರೆ ಅವನಿಗೆ ಸಹಸ್ರ ಶರೀರಗಳೂ, ಅವುಗಳಿಗನುಸಾರವಾದ ಭೋಗಗಳೂ, ಆ ಭೋಗ ಸಾಮಗ್ರಿಗಳೂ ಉತ್ಪನ್ನವಾಗುತ್ತವೆ. ಅವನು ಯಾವ ಸಂಕಲ್ಪವನ್ನು ಮಾಡಿದರೂ ಅದು ತತ್ಕಾಲವೇ ಸಿದ್ಧಿಯಾಗುತ್ತದೆ. ಆದರೂ ಜಗದುತ್ಪತ್ತಿ, ಪಾಲನ, ಸಂಹಾರಗಳು ಮಾತ್ರ ಸಿದ್ಧಿಸದೆ ಇನ್ನುಳಿದ ಸರ್ವ ವಿಭೂತಿಗಳೆಲ್ಲವೂ ಈಶ್ವರನಿಗೆ ಸಮಾನವಾದವುಗಳು ದೊರೆಯುತ್ತವೆ. ಇದೇ ಸಾಯುಜ್ಯ ಮುಕ್ತಿ

ಪ್ರಶ್ನೆ. ಈ ಉಪಾಸಕನಿಗೆ ವಿದೇಹ ಮುಕ್ತಿ ಯಾವಾಗ ?

ಉತ್ತರ. ಈ ಪ್ರಕಾರವಾಗಿ ಹಿರಣ್ಯಗರ್ಭನಿಗೆ ಸಮಾನವಾಗಿದ್ದು, ಅನೇಕ ಕಾಲ ಸಂಕಲ್ಪದಿಂದ ಸಿದ್ಧವಾದ ದಿವ್ಯ ಪದಾರ್ಥಗಳನ್ನು ಭೋಗಿಸಿ, ಪ್ರಲಯಕಾಲದಲ್ಲಿ ಹಿರಣ್ಯಗರ್ಭನು ನಾಶವಾದಾಗ ಜ್ಞಾನೋದಯವಾಗಿ, ಆ ಉಪಾಸಕನಿಗೆ ವಿದೇಹ ಮೋಕ್ಷ ಪ್ರಾಪ್ತಿಯಾಗುತ್ತದೆ.

## ಅಹಂಗ್ರಹೋಪಾಸನೆಯಿಂದ ಬ್ರಹ್ಮಲೋಕ ಪ್ರಾಪ್ತಿ

ಪ್ರಣವೋಪಾಸನೆ ಮಾಡುವವನು ಬ್ರಹ್ಮಲೋಕ ದ್ವಾರಾ ಮೋಕ್ಷವನ್ನು ಪಡೆದುಕೊಂಡಂತೆ, ಉಪನಿಷತ್ತುಗಳಲ್ಲಿ ಹೇಳಿದ ಅನ್ಯವಾದ ಬ್ರಹ್ಮೋಪಾಸನೆ ಮಾಡುವವರಿಗೂ ಸಹ ಹಿಂದೆ ಹೇಳಿದ ಫಲವು ಲಭಿಸುತ್ತದೆ. ಆದರೂ ಅದು ಅಹಂಗ್ರಹೋಪಾಸನೆಯಾಗಿರಬೇಕು. ಇದಲ್ಲದೆ ಅನ್ಯವಾದ ಉಪಾಸನೆಯಿಂದ ಬ್ರಹ್ಮಲೋಕ ಪ್ರಾಪ್ತಿಯಾಗಲಾರದು. ಈ ವಿಷಯವು ಸೂತ್ರ ಭಾಷ್ಯಕಾರರಿಂದ ಬ್ರಹ್ಮಸೂತ್ರದ ಚತುರ್ಥಾಧ್ಯಾಯದಲ್ಲಿ ಪ್ರತಿಪಾದಿಸಲ್ಪಟ್ಟಿದೆ.

ನರ್ಮದೇಶ್ವರನನ್ನು ಶಿವರೂಪವಾಗಿಯೂ, ಸಾಲಗ್ರಾಮವನ್ನು ವಿಷ್ಣುರೂಪವನ್ನಾಗಿಯೂ, ಮನಸ್ಸನ್ನು ಬ್ರಹ್ಮರೂಪವಾಗಿಯೂ,

ಆದಿತ್ಯನನ್ನು ಬ್ರಹ್ಮರೂಪವನ್ನಾಗಿಯೂ ಉಪಾಸನೆ ಮಾಡುವುದಕ್ಕೆ ಪ್ರತೀಕೋಪಾಸನೆ ಎನ್ನುತ್ತಾರೆ. ಅದು ಅಹಂಗ್ರಹೋಪಾಸನೆಯಲ್ಲ ಆದುದರಿಂದ ಪ್ರತೀಕೋಪಾಸನೆಯಿಂದ ಬ್ರಹ್ಮಲೋಕದ ಪ್ರಾಪ್ತಿಯಾಗುವುದಿಲ್ಲ. ಸಗುಣ ಬ್ರಹ್ಮವನ್ನೇ ಆಗಲಿ, ನಿರ್ಗುಣ ಬ್ರಹ್ಮವನ್ನೇ ಆಗಲಿ ತನಗೆ ಅಭಿನ್ನವೆಂದು ತಿಳಿದು ಚಿಂತಿಸುವುದಕ್ಕೆ ಅಹಂಗ್ರಹಧ್ಯಾನವೆನ್ನುತ್ತಾರೆ. ಈ ಧ್ಯಾನದಿಂದಲೇ ಬ್ರಹ್ಮಲೋಕ ಪ್ರಾಪ್ತಿ.

## ಉತ್ತರಾಯಣ ಮಾರ್ಗದಿಂದ ಅಪುನರಾವೃತ್ತಿ

ಪೂರ್ವೋಕ್ತ ಮಾರ್ಗವನ್ನು ಉತ್ತರಾಯಣ ಮಾರ್ಗ ಅಥವಾ ದೇವಯಾನ ಮಾರ್ಗವೆನ್ನುತ್ತಾರೆ. ಈ ದೇವಯಾನ ಮಾರ್ಗದಿಂದ ಬ್ರಹ್ಮಲೋಕಕ್ಕೆ ಹೋದ ಉಪಾಸಕನು ಪುನಃ ಸಂಸಾರಕ್ಕೆ ಬರುವುದಿಲ್ಲ. ಅಲ್ಲಿಂದಲೇ ಜ್ಞಾನವುಂಟಾಗಿ, ಅವನಿಗೆ ವಿದೇಹ ಮೋಕ್ಷ ಲಭಿಸುತ್ತದೆ.

ಅಲ್ಲಿ ಜ್ಞಾನ ಸಾಧನವಾದ ಗುರೂಪದೇಶದ ಅಗತ್ಯವಿಲ್ಲ. ಅಲ್ಲಿ ಗುರೂಪದೇಶಾದಿ ಸಾಧನವಿಲ್ಲದೆ ಜ್ಞಾನವಾಗುತ್ತದೆ. ಏಕೆಂದರೆ, ಬ್ರಹ್ಮಲೋಕದಲ್ಲಿ ತಮೋಗುಣ ರಜೋಗುಣಗಳು ಲೇಶವೂ ಇಲ್ಲ. ಅಲ್ಲಿ ಕೇವಲ ಸತ್ವಗುಣ ಪ್ರಧಾನವಾಗಿದೆ. ತಮೋಗುಣವಿಲ್ಲದ್ದರಿಂದ ಜಡತ್ವ ಆಲಸ್ಯಾದಿಗಳು ಇಲ್ಲ. ರಜೋಗುಣವಿಲ್ಲದ್ದರಿಂದ ಕಾಮಕ್ರೋಧಾದಿ ವಿಕ್ಷೇಪಗಳೂ ಇಲ್ಲ. ಅಲ್ಲಿ ಕೇವಲ ಸತ್ವಗುಣವಿರುವುದರಿಂದ ಸತ್ವಗುಣ ಕಾರ್ಯವಾದ ಜ್ಞಾನದ ಪ್ರಕಾಶವು ಪ್ರಧಾನವಾಗಿರುತ್ತದೆ.

## ಹಿರಣ್ಯಗರ್ಭಲೋಕವಾಸಿಗೆ ಬ್ರಹ್ಮತ್ವ ಜ್ಞಾನದಲ್ಲಿ ಹೇತುತ್ವ

ಪ್ರಶ್ನೆ : ಹಿರಣ್ಯಗರ್ಭವಾಸಿಗೆ ಬ್ರಹ್ಮಜ್ಞಾನದಲ್ಲಿ ಹೇತುವೇನು ?

ಉತ್ತರ . ಪೂರ್ವಕಾಲದಲ್ಲಿ ಬ್ರಹ್ಮರೂಪದಿಂದ ಓಂಕಾರವನ್ನು ಉಪಾಸನೆ ಮಾಡಿದಾಗ ಅವನ ಸ್ಥೂಲೋಪಾಧಿ ಸಹಿತ ಚೈತನ್ಯವು ವಿರಾಟ್, ವಿಶ್ವ ಮತ್ತು ಅಕಾರಗಳಿಗೆ ವಾಚ್ಯವಾಗಿದೆ. ಸೂಕ್ಷ್ಮೋಪಾಧಿ ಸಹಿತ ಚೈತನ್ಯವು ಹಿರಣ್ಯಗರ್ಭ ತೈಜಸ ಮತ್ತು ಉಕಾರಗಳಿಗೆ ವಾಚ್ಯವಾಗಿದೆ. ಕಾರಣೋಪಾಧಿ ಸಹಿತ ಚೈತನ್ಯವು ಈಶ್ವರ, ಪ್ರಾಜ್ಞ ಮತ್ತು

ಮಕಾರಗಳಿಗೆ ವಾಚ್ಯವಾಗಿದೆ ಎಂದು ಪೂರ್ವದಲ್ಲಿ ಚಿಂತನೆ ಮಾಡಿದ ಸ್ಮೃತಿಯು ಅವನಿಗೆ ಬ್ರಹ್ಮಲೋಕದಲ್ಲಿ ಆಗುತ್ತದೆ.

ಮತ್ತು ಇದಲ್ಲದೆ ಅಲ್ಲಿ ಸತ್ವಗುಣ ಪ್ರಧಾನ ಪ್ರಭಾವದಿಂದ ಅವನಿಗೆ ಸ್ಥೂಲೋಪಾಧಿ ದೃಷ್ಟಿಯಿಂದ ಚೈತನ್ಯದಲ್ಲಿ ವಿರಾಟ್ ವಿಶ್ವವೆಂಬ ಭಾವನೆಯು ಪ್ರತೀತಿಯಾಗುತ್ತದೆ, ಅಂದರೆ ಸ್ಥೂಲ ಸಮಷ್ಟಿ ದೃಷ್ಟಿಯಿಂದ ವಿರಾಟ್ಟೆಂತಲೂ, ಸ್ಥೂಲವ್ಯಷ್ಟಿ ದೃಷ್ಟಿಯಿಂದ ವಿಶ್ವನೆಂತಲೂ ಭಾವನೆಯುಂಟಾಗುತ್ತದೆ. ಈ ದೃಷ್ಟಿಯಿಲ್ಲದೆ ವಿರಾಟ್ ವಿಶ್ವ ಭಾವಗಳು ಪ್ರತೀತಿಯಾಗಲಾರವು ಅದರಂತೆ ಸಮಷ್ಟಿ ವ್ಯಷ್ಟಿ ರೂಪವಾದ ಸೂಕ್ಷ್ಮೋಪಾಧಿ ದೃಷ್ಟಿಯಿಲ್ಲದೆ ಹಿರಣ್ಯಗರ್ಭ ತೈಜಸಭಾವಗಳು ತೋರಲಾರವು. ಅದರಂತೆ ಸಮಷ್ಟಿ ವ್ಯಷ್ಟಿ ರೂಪವಾದ ಕಾರಣೋಪಾಧಿ ದೃಷ್ಟಿಯಿಲ್ಲದೆ ಈಶ್ವರ ಪ್ರಾಜ್ಞ ಭಾವಗಳು ಪ್ರತೀತಿಯಾಗಲಾರವು ಚೈತನ್ಯ ಮಾತ್ರವೇ ಪ್ರತೀತಿಯಾಗುತ್ತದೆ. ಈ ವಿವೇಚನೆಯು ಉಂಟಾಗುತ್ತದೆ.

ಯಾವ ವಸ್ತುವು ಯಾವುದರಲ್ಲಿ ಅನ್ಯದೃಷ್ಟಿಯಿಂದ ಪ್ರತೀತಿಯಾಗುವುದೋ ಆ ವಸ್ತುವು ಅದರಲ್ಲಿ ಪರಮಾರ್ಥವಾಗಿ ಇರಲಾರದು. ಅನ್ಯದೃಷ್ಟಿಯಿಲ್ಲದೆ ಪ್ರತೀತಿಯಾಗುವ ರೂಪವು ಅದರ ಪಾರಮಾರ್ಥಿಕ ಸ್ವರೂಪವೆಂದು ತಿಳಿಯಬೇಕು

ಉದಾಹರಣೆ: ಒಬ್ಬ ಪುರುಷನಲ್ಲಿ ಪಿತೃದೃಷ್ಟಿಯಿಂದ ಪುತ್ರತ್ವವೂ, ಪಿತಾಮಹ ದೃಷ್ಟಿಯಿಂದ ಪೌತ್ರತ್ವವೂ ಪ್ರತೀತಿಯಾಗುವುದರಿಂದ ಅದು ಪರಮಾರ್ಥವಲ್ಲ ಅನ್ಯ ದೃಷ್ಟಿಯಿಲ್ಲದೆ ಪ್ರತೀತವಾದ ಪುರುಷ ಪಿಂಡವೇ ಪರಮಾರ್ಥ ರೂಪ

ಈ ಪ್ರಕಾರವಾಗಿ ಸ್ಥೂಲ ಸೂಕ್ಷ್ಮ ಕಾರಣಗಳ ಉಪಾಧಿ ದೃಷ್ಟಿಯಿಂದ ಪ್ರತೀತವಾದ ವಿರಾಟ್ ವಿಶ್ವಾದಿ ರೂಪಗಳು ಮಿಥ್ಯೆ. ಮತ್ತು ಉಪಾಧಿ ದೃಷ್ಟಿಯಿಲ್ಲದೆ ಪ್ರತೀತಿಯಾದ ಚೈತನ್ಯ ಮಾತ್ರ ಸತ್ಯ. ಭೇದಗಳೆಲ್ಲ ಉಪಾಧಿ ದೃಷ್ಟಿಯಿಂದಲೇ ಕಂಡುಬರುತ್ತವೆ ಉಪಾಧಿ ದೃಷ್ಟಿಯನ್ನು ಬಿಟ್ಟರೆ ಚೈತನ್ಯದಲ್ಲಿ ಯಾವ ಭೇದವೂ ಇಲ್ಲ.

ಈ ರೀತಿ ಓಂಕಾರದ ಲಕ್ಷ್ಯವಾದ ಸಕಲ ಭೇದರಹಿತವಾದ ಅಸಂಗ ನಿತ್ಯ ಮುಕ್ತವಾದ, ಸ್ವಯಂ ಪ್ರಕಾಶವಾದ, ಪರಬ್ರಹ್ಮ ರೂಪವಾದ

ಆತ್ಮವು ಉಪಾಸಕರಿಗೆ ಬ್ರಹ್ಮಲೋಕದಲ್ಲಿ ಭಾಸಮಾನವಾಗುವುದರಿಂದ ಹಿರಣ್ಯಗರ್ಭ ಲೋಕವಾಸಿಯಾದ ಪ್ರಣವೋಪಾಸಕನಿಗೆ ಪುನಃ ಸಂಸಾರ ಪ್ರಾಪ್ತಿಯಿಲ್ಲ. ಅಲ್ಲಿ ಜ್ಞಾನ ದ್ವಾರಾ ಮೋಕ್ಷವಾಗುತ್ತದೆ

## ಓಂಕಾರ ಮತ್ತು ಮಹಾವಾಕ್ಯದ ಅರ್ಥ ಒಂದೇ

ಯದ್ಯಪಿ ಮಹಾವಾಕ್ಯ ವಿವೇಕವಿಲ್ಲದೆ ಜ್ಞಾನವುಂಟಾಗಲಾರದು. ಆದುದರಿಂದ ಪ್ರಣವೋಪಾಸಕನಿಗೆ ಜ್ಞಾನವುಂಟಾಗಬಾರದಲ್ಲವೇ ? ತಥಾಪಿ ಓಂಕಾರ ವಿವೇಕವೇ ಮಹಾವಾಕ್ಯ ವಿವೇಕವಾದುದರಿಂದ ಅವರಿಗೂ ಜ್ಞಾನವಾಗುವುದರಲ್ಲಿ ಸಂದೇಹವಿಲ್ಲ. ಆ ಮಹಾವಾಕ್ಯ ವಿವೇಕ ರೂಪವೇನೆಂದರೆ, ಸ್ಥೂಲ ಉಪಾಧಿ ಸಹಿತ ಚೈತನ್ಯವು ಅಕಾರಕ್ಕೆ ವಾಚ್ಯವಾಗಿದೆ ಸ್ಥೂಲೋಪಾಧಿಯನ್ನು ಬಿಟ್ಟು ಚೈತನ್ಯ ಮಾತ್ರವು ಅಕಾರಕ್ಕೆ ಲಕ್ಷ್ಯವಾಗಿದೆ. ಸೂಕ್ಷ್ಮ ಕಾರಣ ಉಪಾಧಿ ಸಹಿತ ಚೈತನ್ಯವು ಉಕಾರ, ಮಕಾರಗಳಿಗೆ ವಾಚ್ಯವಾಗಿದೆ. ಆಯಾ ಉಪಾಧಿಯನ್ನು ಬಿಟ್ಟು ಚೈತನ್ಯ ಮಾತ್ರ ಉಕಾರ ಮಕಾರಗಳಿಗೆ ಲಕ್ಷ್ಯವಾಗಿದೆ ನಾಮರೂಪ ಸಕಲ ಉಪಾಧಿ ಸಹಿತ ಚೈತನ್ಯವು ಓಂಕಾರಕ್ಕೆ ಲಕ್ಷ್ಯವಾಗಿದೆ.

ಈ ವಿಧವಾಗಿ ಓಂಕಾರದಲ್ಲಿಯೂ, ಮಹಾವಾಕ್ಯದಲ್ಲಿಯೂ ಅರ್ಥ ಒಂದೇ ಆದುದರಿಂದ ಓಂಕಾರ ವಿವೇಕದಿಂದಲೂ ಅಭೇದ ಜ್ಞಾನವಾಗುವುದರಲ್ಲಿ ಸಂದೇಹವಿಲ್ಲ.

## ನಿರ್ಗುಣೋಪಾಸನೆಯಲ್ಲಿ ಅನಧಿಕಾರಿಗಳ ಕರ್ತವ್ಯ

ಸವೈಯಾಛಂದ : ಜೊ ಯಹ ನಿರ್ಗುಣ ಧ್ಯಾನ ನ ಹ್ವೈ ತೋ,
ಸಗುನ ಈಸ ಕರಿ ಮನಕೊ ಧಾಮ ।
ಸಗುನ ಉಪಾಸನಹು ನಹೀ ಹ್ವೈ ತೌ,
ಕರಿ ನಿಷ್ಕಾಮ ಕರ್ಮ ಭಜಿ ರಾಮ ॥

ಜೋ ನಿಷ್ಕಾಮ ಕರ್ಮಹು ನಹೀ ಹ್ವೈ,
ತೋ ಕರಿಯೆ ಸುಭಕರ್ಮ ಸಕಾಮ ।
ಜೊ ಸಕಾಮ ಕರ್ಮಹು ನಹಿ ಹೊವ್ವೈ,
ತೋ ಸರ ಬಾರ ಬಾರ ಮರಿ – ಜಾಮ ॥ ॥೧೬॥

ಇಲ್ಲಿ ತಿಳಿದುಕೊಳ್ಳಬೇಕಾದ ಮುಖ್ಯ ಅಭಿಪ್ರಾಯವೇನೆಂದರೆ, ವೇದಾಂತದ ಶ್ರವಣ ಮನನರೂಪ ವಿಚಾರದಲ್ಲಿ ಪ್ರವೃತ್ತಿ ಉಂಟಾದ ಜಿಜ್ಞಾಸುವಿಗೆ ವಿಚಾರವನ್ನು ಬಿಟ್ಟು ಅನ್ಯ ಸಾಧನವು ಕರ್ತವ್ಯವಲ್ಲ. ಒಂದು ವೇಳೆ ವಿಚಾರಕ್ಕೆ ಅಧಿಕಾರಿಯಾದ ಪುರುಷನು ವಿಚಾರವನ್ನು ಬಿಟ್ಟು ಅನ್ಯ ಸಾಧನೆಯಲ್ಲಿ ಪ್ರವೃತ್ತನಾದರೆ, ಅವನು ಆರೂಢ ಪತಿತನಾಗುತ್ತಾನೆ. ಅವನು ಅಂಗೈಯಲ್ಲಿದ್ದ ಮಿಠಾಯಿಯನ್ನು ಬಿಸಾಕಿ ಬರಿಕೈಯನ್ನು ನೆಕ್ಕುವವನಿಗೆ ಸಮಾನನಾಗುತ್ತಾನೆ. ಆದುದರಿಂದ ವಿಚಾರಶೀಲ ಪುರುಷನು ದೃಢಬೋಧೆಗಾಗಿ ವಿಚಾರವನ್ನೇ ಮಾಡಬೇಕು. ವಿಚಾರದಲ್ಲಿ ಪ್ರವೃತ್ತಿಯಿಲ್ಲದವನು ನಿರ್ಗುಣೋಪಾಸನೆಯನ್ನು ಮಾಡಬೇಕು. ಮತ್ತು ನಿರ್ಗುಣೋಪಾಸನೆಗೆ ಅಧಿಕಾರವಿಲ್ಲದವನು "ಉಪವಾಸಕ್ಕಿಂತ ಭಿಕ್ಷಾನ್ನವೇ ಶ್ರೇಷ್ಠ" ಎಂಬ ನ್ಯಾಯದಂತೆ ಸಗುಣೋಪಾಸನೆಯನ್ನು ಮಾಡಬೇಕು. ಆದುದರಿಂದ ಹೇ ಶಿಷ್ಯನೆ! ಮೇಲೆ ಹೇಳಿದ ಪ್ರಣವದ ನಿರ್ಗುಣರೂಪ ಧ್ಯಾನವು ನಿನ್ನಿಂದ ಆಗದಿದ್ದರೆ, ನೀನು ಸಗುಣರೂಪ ಧ್ಯಾನವನ್ನು ಮಾಡು. ನಿನಗೆ ಸಗುಣೋಪಾಸನೆಯು ಶಕ್ಯವಾಗದಿದ್ದರೆ ನಿಷ್ಕಾಮಕರ್ಮ ದ್ವಾರಾ ಪರಮಾತ್ಮನ ಭಜನೆಯನ್ನು ಮಾಡು. ನಿನಗೆ ನಿಷ್ಕಾಮ ಕರ್ಮವು ಶಕ್ಯವಾಗದಿದ್ದರೆ ಸಕಾಮ ಶುಭ ಕರ್ಮವನ್ನು ಮಾಡುತ್ತಿರು. ನಿನಗೆ ಸಕಾಮ ಶುಭ ಕರ್ಮವನ್ನು ಮಾಡುವುದಾಗದಿದ್ದರೆ ಆಗ ಹೇ ಶರನೆ! ನೀನು ಪುನಃ ಪುನಃ ಹುಟ್ಟುತ್ತಾ ಸಾಯುತ್ತಾ ಇರು. ಇದೇ ನಿನ್ನ ಪ್ರಾರಬ್ಧ.

ಪ್ರಶ್ನೆ : ಸಗುಣಬ್ರಹ್ಮವೆಂದರೇನು ?

ಉತ್ತರ . ಮಾಯಾವಿಶಿಷ್ಟ ಚೈತನ್ಯವಾದ ಕಾರಣಬ್ರಹ್ಮ, ಇಲ್ಲವೇ ಅವನ ಉಪಲಕ್ಷಣಗಳಾದ ಹಿರಣ್ಯಗರ್ಭ, ವೈಶ್ವಾನರ, ಹರಿ, ಹರ,

ಗೌರೀ, ಗಣೇಶ, ಸೂರ್ಯರು ಮತ್ತು ಇವರ ಅವತಾರರೂಪ ಕಾರ್ಯಬ್ರಹ್ಮ, ಇಲ್ಲವೇ ಇವರ ಪ್ರತಿಮಾ ರೂಪ ಪ್ರತಿನಿಧಿ – ಇವರನ್ನು ಇಲ್ಲಿ ಸಗುಣ ಬ್ರಹ್ಮವೆನ್ನಬಹುದು. ಮೇಲೆ ಹೇಳಿದ ಉಪಾಸನೆಯಲ್ಲಿ ಪೂರ್ವ ಪೂರ್ವಕ್ಕಿಂತ ಉತ್ತರೋತ್ತರಗಳು ಶ್ರೇಷ್ಠ.

ಮಾಯಾವಿಶಿಷ್ಟ ಚೈತನ್ಯವಾದ ಕಾರಣಬ್ರಹ್ಮವೇ ಈಶ್ವರ ಪದಕ್ಕೆ ಮುಖ್ಯಾರ್ಥ. ಅದೇ ಉಪಾಸ್ಯ. ಆದರೂ "ಮಾಯಾಂ ತು ಪ್ರಕೃತಿಂ ವಿದ್ಧಿ ಮಾಯಿನಂ ತು ಮಹೇಶ್ವರಮ್" ಎಂಬ ಶ್ರುತಿಯ ಅಭಿಪ್ರಾಯದಂತೆ ಮಾಯಾ ವಿಶಿಷ್ಟ ಚೈತನ್ಯಕ್ಕಿಂತ ಭಿನ್ನ ಪದಾರ್ಥವು ಇಲ್ಲ. ಇದಕ್ಕೆ ಅನುಸಾರವಾಗಿ ವಿದ್ಯಾರಣ್ಯ ಸ್ವಾಮಿಗಳು ಸರ್ವ ಮತಗಳಿಗೂ ವಿರೋಧವಿಲ್ಲದ ಈಶ್ವರನ ನಿರೂಪಣೆಯನ್ನು ಚಿತ್ರದೀಪದಲ್ಲಿ ಮಾಡಿರುತ್ತಾರೆ. ಅದಕ್ಕೆ ಅನುಸಾರವಾಗಿ ಹಿರಣ್ಯಗರ್ಭಾದಿಗಳು ಈಶರೆಂದು ಇಲ್ಲಿ ಹೇಳಿದೆ.

ಫಲಕಾಮನಾರಹಿತನಾಗಿ ತನ್ನ ವರ್ಣಾಶ್ರಮಕ್ಕನುಸಾರವಾದ ಕರ್ಮವನ್ನು ಈಶ್ವರಾರ್ಪಣ ಬುದ್ಧಿಯಿಂದ ಮಾಡಿ, ಅದರೊಂದಿಗೆ ನಾಮ ಸಂಕೀರ್ತನಾದಿಗಳಿಂದ ಶಿವನನ್ನು ಭಜಿಸುತ್ತಿರು. ಇಲ್ಲವೇ ನಿಷ್ಕಾಮ ಕರ್ಮವನ್ನು ಮಾಡಿ, ಶಿವನಿಗೆ ಅರ್ಪಿಸು. ಫಲಕಾಮನಾರಹಿತವಾಗಿ ಶಿವನಿಗಾಗಿ ಮಾಡಲ್ಪಟ್ಟ ಶುಭ ಕರ್ಮವು ಶಿವನ ಪ್ರಸನ್ನತೆಗೆ ಹೇತುವಾಗುತ್ತದೆ. ಆದುದರಿಂದ ಅದೂ ಶಿವಭಜನೆಯೇ.

ನಿಷ್ಕಾಮವೆಂದರೇನು ? ಕಾಮನೆಯು ಇಲ್ಲದುದು ನಿಷ್ಕಾಮವೇ ? ಅಥವಾ ಮೋಕ್ಷ ಕಾಮನೆ ಇಲ್ಲದುದು ನಿಷ್ಕಾಮವೇ ? ಇವೇ ಮೊದಲಾದ ವಿಕಲ್ಪಗಳನ್ನುಂಟುಮಾಡಿ ನಿಷ್ಕಾಮ ಶಬ್ದಾರ್ಥದ ವಿಷಯವಾಗಿ ಶಾಸ್ತ್ರಕಾರರ ಚರ್ಚೆ ವಿಚರ್ಚೆಗಳು ನಡೆಯುತ್ತಲೇ ಇವೆ. ಆದರೆ ಸಿದ್ಧವಾದ ಮುಖ್ಯಾರ್ಥವೇನೆಂದರೆ, "ನಿಷ್ಕಾಮರೂಪವಾದ ಮೋಕ್ಷದ ಕಾಮನೆಯೇ ನಿಷ್ಕಾಮ". ಇದೇ ನಿಜವಾದ ಅರ್ಥ.

## ಉಪಸಂಹಾರ

ದೋಹಾ – ಓಂಕಾರ ಕೊ ಅರ್ಥಲಖಿ, ಭಯೋ ಕೃತಾರ್ಥ ಅದೃಷ್ಟಿ ।
ಪಢೈ ಜೊ ಯಾಹಿ ತರಂಗ ತಿಹಿ, ದಾದೂ ಕರಹು ಸುದೃಷ್ಟಿ ॥೧೭೦॥

ಅರ್ಥ ಈ ವಿಧವಾಗಿ ಅಹಂಗ್ರಹೋಪಾಸನಾದಿ ಪ್ರತಿಪಾದಕವಾದ ಈ ವಿಚಾರಾಬ್ಧಿಯ ಪಂಚಮ ತರಂಗದಲ್ಲಿಯ ಓಂಕಾರಾರ್ಥವನ್ನು ತಿಳಿದು, ಮಧ್ಯಮ ಶಿಷ್ಯನಾದ ಅದೃಷ್ಟಿ ಎಂಬವನು ಕೃತಾರ್ಥನಾದನು. ಜಿಜ್ಞಾಸು ವಾದ ಪುರುಷನು ಶ್ರದ್ಧಾ ಪೂರ್ವಕವಾಗಿ ಈ ಶುಭ ತರಂಗದ ಶ್ರವಣ ಪಠನ ವನ್ನು ಮಾಡುವವನ ಮೇಲೆ ಶ್ರೀ ಗುರುವು ಅನುಗ್ರಹಿಸಲಿ !

ವಿಚಾರಸಾಗರದ ಗುರುವೇದ ಮೊದಲಾದವುಗಳು ವ್ಯವಹಾರಿಕವೆಂದು ಪ್ರತಿಪಾದಿಸಿದ ಮತ್ತು ಮಧ್ಯಮ ಅಧಿಕಾರಿಯ ಸಾಧನ ವರ್ಣನವೆಂಬ ಒಂದುನೂರಾಎಪ್ಪತ್ತು ದೋಹಾಗಳುಳ್ಳ ಪಂಚಮ ತರಂಗವು ಶ್ರೀ ಸ್ವಾಮಿ ಶಂಕರಾನಂದರ ವ್ಯಾಖ್ಯಾನದೊಡನೆ ಸಂಪೂರ್ಣ.

ಮಂಗಲಂ ನಿಶ್ಚಲೇಂದ್ರಾಯ ಸಚ್ಚಿದಾನಂದ ರೂಪಿಣೆ ।
ಸರ್ವಭಕ್ತ ಶರಣ್ಯಾಯ ಸಾಧುರೂಪಾಯ ಮಂಗಲಂ ॥

ಓಂ ಶ್ಯಾಂತಿ ಶ್ಯಾಂತಿ ಶ್ಯಾಂತಿಃ

---

ನಮೋ ಭಗವತೇ ಶಂಕರಾನಂದಾಯ

# ಶುದ್ಧಿ ಪತ್ರಿಕೆ

| ಪುಟ | ಸಾಲು | ಇರುವುದು | ಇರಬೇಕಾದುದು |
|---|---|---|---|
| ೫ | ೭ | ಮ | ಮನು |
| ೯ | ೧೭ | ಭಾರ | ಧಾರ |
| ೧೨ | ೭ | ಪೂಭಹು | ಪೂಥಹು |
| ೧೬ | ೧೧ | ಭೋದಜ್ಞಾನಿ | ಭೇದಜ್ಞಾನಿ |
| ೧೯ | ೧೦ | ತಿಮಿರಾಪ | ತಿಮಿರಾಪ |
| ೨೩ | ೧೧ | ಅನಿಸ್ತರಂಗ | ಆ ನಿಸ್ತರಂಗ |
| ೩೩ | ೨೪ | ಪರಮಾರ್ಥ | ಪಾರಮಾರ್ಥ |
| ೩೭ | ೧೭ | ಏಕೆಂದಕೆ | ಏಕೆಂದರೆ |
| ೪೪ | ೪ | ಶಶವಿಶಾಣ | ಶಶವಿಷಾಣ |
| ೫೩ | ೨೦ | ವ್ಯಕ್ತಿ | ವೃತ್ತಿ |
| ೭೧ | ೫ | ಪರಿಷ್ಪಸ್ವಜಾತೇ | ಪರಿಪಸ್ವಜಾತೇ |
| ೭೩ | ೨೧ | ಸುವ | ಸನ |
| ೮೨ | ೧೬ | ಬುದ್ಧಿಯಲ್ಲಿ ಬದ್ದ | ಬುದ್ಧಿಯಲ್ಲಿ ಬಿದ್ದ |
| ೮೨ | ೩೩ | ಅಂತಃಕರಣದಲ್ಲಿ ಬಿದ್ದ ಪ್ರತಿಬಿಂಬ | ಅಂತಃಕರಣದಲ್ಲಿ ಬಿದ್ದ ಚೇತನದ ಪ್ರತಿಬಿಂಬ |
| ೮೮ | ೧೯ | ಚಿದಾಬಾಸನು | ಚಿದಾಭಾಸನು |
| ೯೮ | ೧೮ | ಭೋಗವ್ಯೆ | ಭೋಗವೈ |
| ೧೦೨ | ೩ | ಚೌತಾ | ಜೌತಾ |
| ೧೦೮ | ೯ | ಇಕಅಪರೋಕ್ಷ | ಇಕಪರೋಕ್ಷ ಅಪರೋಕ್ಷ |
| ೧೧೧ | ೨೦ | ಜಾನಿಯು | ಜ್ಞಾನಿಯು |
| ೧೨೦ | ೧೪ | ಆಗ | ಆಗು |
| ೧೨೪ | ೨ | ಘಟವನು | ಘಟವನ್ನು |

| ಪುಟ | ಸಾಲು | ಇರುವುದು | ಇರಬೇಕಾದುದು |
|---|---|---|---|
| ೧೩೧ | ೨೦ | ಪ್ರತ್ಯಕ್ಷ, ಪ್ರಮೇಯ | ಪ್ರತ್ಯಕ್ಷಪ್ರಮೇಯ |
| ೧೩೪ | ೯ | ಈಶತಜ್ಞಾನಯೆತ್ನೇಚ್ಛ | ಈಶಸ್ತ್ರಜ್ಞಾನಯತ್ನೇಚ್ಛಾ |
| ೧೩೪ | ೯ | ದಿಗೇವವ | ದಿಗೇವಚ |
| ೧೩೪ | ೧೦ | ಸಾಧಾರಣಾ | ಸಾಧಾರಣಾಃ |
| ೧೩೭ | ೧ | ಅಂತಃಕರಣೋಸಹಿತ | ಅಂತಃಕರಣಾವಿಶಿಷ್ಟ |
| ೧೪೨ | ೨೩ | ಇಂದ್ರಿಯುತೆ | ಇಂದ್ರಿಯಯುಕೆ |
| ೧೭೩ | ೯ | ಜಯಚಂದನ | ಜಯಚಂದ್ರನ |
| ೧೯೩ | ೧೮ | ಉಜಾನ | ಅಜಾನ |
| ೧೯೪ | ೭ | ಬೃಹಸ್ಪತಿ | ಬೃಹಸ್ಪತಿ |
| ೧೯೪ | ೨೬ | ಮೋಹಪಡುವುಲ್ಲಿ | ಮೋಹಪಡುವುದಿಲ್ಲ |
| ೨೧೪ | ೬ | ಹೋಗುವ | ಕಳುಹಿಸುವ |
| ೨೧೭ | ೧೧ | ರಾಜಸಿಗೆ | ರಾಜನಿಗೆ |
| ೨೫೪ | ೧೮ | ಬಂದ ಮೋಕ್ಷ | ಬಂಧ ಮೋಕ್ಷ |
| ೨೫೫ | ೧೮ | ಆಜ್ಞಾನ | ಅಜ್ಞಾನ |
| ೨೭೪ | ೨೩ | ಮಾಂಯೋಮಯ | ಮನೋಮಯ |
| ೨೭೬ | ೧೧ | ಆವರಿಸಿರುವವು | ಆವರಿಸಿರುವುವು |
| ೨೭೭ | ೧೨ | ನರಳು | ನರಗಳು |
| ೨೮೪ | ೨೦ | ದೇವಾತ್ಮವಾದಿ | ದೇಹಾತ್ಮವಾದಿ |
| ೨೮೬ | ೮,೧೦,೧೧ | ಚಾವಾಕ | ಚಾರ್ವಾಕ |
| ೨೯೫ | ೨೩ | ವಿಜ್ಞಾನವಾದಿಯಿ | ವಿಜ್ಞಾನವಾದಿಯು |
| ೩೦೨ | ೪ | ಅನಿತ್ಯ ಜಾನವು | ಅನಿತ್ಯ ಜ್ಞಾನವು |
| ೩೦೯ | ೧೨ | ಮತ್ಪು | ಮತ್ತು |
| ೩೧೦ | ೨೧ | ಅಕರ್ತನಾಗಿ | ಅಕರ್ತನಾಗಿ |
| ೩೧೨ | ೨೭ | ಯಕೆಂದರೆ | ಏಕೆಂದರೆ |
| ೩೧೬ | ೧೧ | ಯೋಗಯುಕ್ತೊ | ಯೋಗಯುಕ್ತೋ |

| ಪುಟ | ಸಾಲು | ಇರುವುದು | ಇರಬೇಕಾದುದು |
|---|---|---|---|
| ೩೧೭ | ೧ | ತತ್ವವಿತ್ | ತತ್ತ್ವವಿತ್ |
| ೩೨೧ | ೧೪,೧೫ | ಬುದು, ಬುದಾದಿಗಳು | ಬುದ್ಧ್ಯಾದಿಗಳು |
| ೩೨೧ | ೧೯ | ಅದೃಢವಾದ | ಅದೃಢವಾದ |
| ೩೨೧ | ೨೧ | ಪಂಚೀಕೃತ ಅತತ್ತ್ವ | ಅಪಂಚೀಕೃತ ತತ್ತ್ವ |
| ೩೨೪ | ೩ | ಬ್ರಹ್ಮರವವವಾಗುವುದರಿಂದ | ಬ್ರಹ್ಮರೂಪವೇ ಆಗುತ್ತದೆ |
| ೩೨೪ | ೫ | ಹೇಳಬೇಕಾಗುತ್ತದ | ಹೇಳಬೇಕಾಗುತ್ತದೆ |
| ೩೨೪ | ೭ | ಶಕ್ತಿಗೆ ಬ್ರಹ್ಮದಿಂದ | ಶಕ್ತಿಗೂ ಬ್ರಹ್ಮಕ್ಕೂ |
| ೩೨೪ | ೧೨ | ಭಿವ್ನವಾಗದೆ | ಭಿನ್ನವಾಗದೆ |
| ೩೨೬ | ೧೪ | ಅಧೀನವಾಗಿಯಿೂ | ಅಧೀನವಾಗಿಯೂ |
| ೩೩೧ | ೧೪ | ಓಂಕಾರ | ಓಂಕಾರಂ |
| ೩೩೩ | ೯ | ಸ್ವರೂಪವಾದುದರಿಂನ | ಸ್ವರೂಪವಾದುದರಿಂದ |
| ೩೪೧ | ೧೪ | ಮುಕ್ತಾ ಸಂಗ | ಮುಕ್ತ ಅಸಂಗ |